# ಪರಿಸರಪ್ರೇಮಿ
# ಡಾ. ಎಸ್. ವಿ. ನರಸಿಂಹನ್







ಮಲೆನಾಡಿನ ಮಡಿಲಲ್ಲಿರುವ ವಿರಾಜಪೇಟೆಯಲ್ಲಿ ಪರಿಸರ ಪ್ರೇಮಿಯೊಬ್ಬರು ಅಕ್ಟೋಬರಿನಲ್ಲಿ ವನ್ಯಜೀವಿ ಸಪ್ತಾಹವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಾರೆ. ತಾವೇ ಸ್ವತಃ ಚಿತ್ರಿಸಿದ, ಸಂದೇಶ ಸಾರುವ, ವನ್ಯಪ್ರಾಣಿಗಳ-ಪಕ್ಷಿಗಳ ಚಿತ್ರವಿರುವ ಬಗೆಬಗೆಯ ಕಾರ್ಡುಗಳನ್ನು ರವಾನಿಸುತ್ತಾರೆ. ಒಂದೊಂದು ಕಾರ್ಡಿನಲ್ಲಿಯೂ ಆ ಪ್ರಾಣಿ-ಪಕ್ಷಿಯ ಕೌಶಲ್ಯವನ್ನು ಸಾರುವ ಮನೋಜ್ಞವಾದ, ಅರ್ಥಪೂರ್ಣವಾದ ಸಂದೇಶವಿರುತ್ತದೆ. ಈ ಕಾರ್ಡುಗಳ ಪೈಕಿ ಶೇಕಡಾ ಐವತ್ತರಷ್ಟು ಕಾರ್ಡುಗಳಲ್ಲಿ ಕನ್ನಡದಲ್ಲಿ ಸಂದೇಶವಿರುತ್ತದೆ. ಹೀಗೆ ಚಿತ್ರಿಸಿ ಕಳುಹಿಸುವ ಪ್ರಕೃತಿ ಪ್ರೇಮಿ ವಿರಾಜಪೇಟೆಯ ಡಾ|| ಎಸ್. ವಿ. ನರಸಿಂಹನ್.




ಹದಿನೇಳು ವರ್ಷಗಳ ಹಿಂದೆ ಒಂದು ಹವ್ಯಾಸವಾಗಿ ಆರಂಭವಾದ ಈ ಮೋಹಕ ಕಾರ್ಡುಗಳು ದೇಶ-ವಿದೇಶಗಳ ಮೂಲೆ ಮೂಲೆಗಳಿಗೂ ರವಾನೆಯಾಗುತ್ತವೆ. ಸ್ಕೆಚ್‌ಪೆನ್, ಜಲವರ್ಣ ಮತ್ತು ಪೆನ್ಸಿಲ್‌ಗಳಿಂದ ಚಿತ್ರಿಸಿದ ಪ್ರತಿಯೊಂದು ಕಾರ್ಡು ಕೂಡ ಒಂದು ಮೂಲ ಕೃತಿ. ಒಂದೊಂದು ಕಾರ್ಡನ್ನು ಚಿತ್ರಿಸುವಲ್ಲಿಯೂ ಅಪಾರವಾದ ತಾಳ್ಮೆ ಮತ್ತು ಶ್ರಮ ಬೇಕು.

ಕಳೆದ ಹದಿನೇಳು ವರ್ಷಗಳಲ್ಲಿ ಹೀಗೆ ಸ್ವತಃ ಚಿತ್ರಿಸಿ ಕಳುಹಿಸಿದ ಇಂಥ ಕಾರ್ಡುಗಳ ಒಟ್ಟು ಸಂಖ್ಯೆ ಎಷ್ಟು ಗೊತ್ತೆ? ಮೂವತ್ತೆರಡು ಸಾವಿರದ ಐದುನೂರು.

ದೇಶ ವಿದೇಶಗಳಿಗೆ ರವಾನೆಯಾಗುವ ಈ ಕಾರ್ಡುಗಳ ಸಂದೇಶವನ್ನು ಸಾರಲು ಬೆಂಗಾವಲಾಗಿ ೩,೫೦೦ಕ್ಕೂ ಹೆಚ್ಚು ಸಮಾನ ಮನಸ್ಕರು ಪ್ರಪಂಚಾದ್ಯಂತ ಸಹಾಯ ಮಾಡಿದ್ದಾರೆ ಎಂದು ಕೃತಜ್ಞತೆಯಿಂದ ನೆನೆಯುತ್ತಾರೆ ನರಸಿಂಹನ್.




''ಪರಿಸರ ಸಂರಕ್ಷಣೆಯ ಅನಿವಾರ್ಯತೆ, ಅರಣ್ಯ ಹನನ, ಕ್ಷೀಣಿಸುತ್ತಿರುವ ವನ್ಯಜೀವಿಗಳ ಬಗ್ಗೆ ಕಳಕಳಿ ಇವೆಲ್ಲದರ ವಿಚಾರವಾಗಿ ನಾವು ಬಹಳವಾಗಿ ಮಾತನಾಡುತ್ತೇವೆ. ಪ್ರಗತಿಯ ಹೆಸರಿನಲ್ಲಿ ಕೈಗಾರಿಕೀಕರಣ, ಆಧುನಿಕ ಕೃಷಿ ಪದ್ಧತಿ ಜೊತೆಯಲ್ಲಿ ಜನಸಂಖ್ಯಾ ಸ್ಫೋಟ, ದುರಾಸೆ ಮತ್ತು ರಾಜಕೀಯ ಉಪೇಕ್ಷೆ ಇವೆಲ್ಲ ಇಂದಿನ ಸ್ಥಿತಿಗೆ ಕಾರಣವಾಗಿದೆ'' ಎನ್ನುವ ಡಾ|| ನರಸಿಂಹನ್




'ಯಾವುದೇ ಕಾನೂನಿನ ನಿಯಮಗಳಿಂದ, ಶಿಕ್ಷೆಗಳಿಂದ ಮನುಷ್ಯ ಹೃದಯವನ್ನು ಪರಿವರ್ತಿಸಲು ಸಾಧ್ಯವಿಲ್ಲ' ಎಂದು ಎಚ್ಚರಿಸುತ್ತಾರೆ. ವಿರಾಜಪೇಟೆಯ ಹಿರಿಯ ವೈದ್ಯರಾದ ಡಾ|| ಎಸ್. ವಿ. ದೇಶಿಕಾಚಾರ್, ಶ್ರೀಮತಿ ಜಾನಕಮ್ಮ ದಂಪತಿಗಳ ಮಗನಾದ ಡಾ|| ನರಸಿಂಹನ್ ತಮ್ಮ ತಂದೆಯ ವೃತ್ತಿಯನ್ನೇ ಆಯ್ಕೆ ಮಾಡಿಕೊಂಡಿದ್ದಾರೆ. ಈಗ ಅವರೊಬ್ಬ ಜನಪ್ರಿಯ ವೈದ್ಯ. ಅವರದು ಬಹುಮುಖ ಪ್ರತಿಭೆ. ರಾತ್ರಿಯೆಲ್ಲ ನಿದ್ದೆಗೆಟ್ಟು ಪುಸ್ತಕಗಳ ಓದಿನಿಂದ ದಕ್ಕಿಸಿಕೊಂಡ ಒಣ ಪಾಂಡಿತ್ಯವಲ್ಲ, ಸುತ್ತಲಿನ ನಿಸರ್ಗವನ್ನು, ಜೀವಜಾಲದ ವಿಸ್ಮಯವನ್ನು ವೀಕ್ಷಿಸುವ, ಗ್ರಹಿಸುವ ಮತ್ತು ಆಳವಾಗಿ ತಿಳಿದುಕೊಳ್ಳುವ ಸೃಜನಶೀಲ ಪ್ರತಿಭೆ ಅವರದು.




*- ಐ. ಆರ್. ಪ್ರಮೋದ್, ವಕೀಲರು, ವಿರಾಜಪೇಟೆ-೫೭೧೨೧೮*

# ಹೊಸತು

## ಒಳಗೇನಿದೆ.....




ಚಿತ್ರಗಳು : ಪಿ. ಮಹಮ್ಮದ್, ಬಿ. ವಿಲ್ಸನ್, ಜೆ. ಎಂ. ಬೊಮ್ಮಳ್ಳಿ
ಮೋನಪ್ಪ, ಶ್ರೀಹರಿ, ಹರಿಣಿ
ಮುಖಚಿತ್ರ : ರೈತರ ಪ್ರತಿಭಟನೆ ಚಿತ್ರ : ಶ್ರೀರಾಂ, ಮೈಸೂರು
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ರಾಜ್ಯದಲ್ಲಿ ಮಳೆ ಸರಿಯಾಗಿ ಬಾರದೆ ಜನರು ಅನಾಹುತಗಳ ಒಂದು ಸರಣಿಯನ್ನೇ ಎದುರಿಸಬೇಕಾಗಿ ಬಂದಿರುವುದು ಈ ತಿಂಗಳ ಒಂದು ಹೊಡೆತವಾದರೆ, ಅಮೆರಿಕಾದಲ್ಲಿ ಬುಷ್ ತಲೆಯ ಮೇಲೆ ಸೆಪ್ಟೆಂಬರ್ ೧೧ರಂದು ಯಾವ ಬಾಂಬು ಸಹ ಬೀಳದೆ ಹೋದದ್ದು ಇನ್ನೊಂದು ವಿಶೇಷ. ಮುಖ್ಯಮಂತ್ರಿ ಕೃಷ್ಣ ಅವರು ಯಥಾಪ್ರಕಾರ ರಾಜ್ಯದ ಎಲ್ಲಾ ದೇವಸ್ಥಾನಗಳಿಗೆ ಮತ್ತು ಮಠಗಳಿಗೆ ಭೇಟಿಯಿತ್ತು ಅನೇಕ ದೇವ – ದೇವನಾಂಪ್ರಿಯರನ್ನು ಮಣಿಸಲು ಯತ್ನಿಸಿದ್ದಾರೆ. ವೀರಪ್ಪನ್ ಮತ್ತು ಜಯಲಲಿತಾ ಒಟ್ಟಾಗಿ ಒಡ್ಡಿರುವ ಇಕ್ಕಳದಲ್ಲಿ ಸಿಲುಕಿಕೊಂಡು ಅದರಿಂದ ಹೊರಬರಲು ಬಹಳ ಸಮಾಧಾನಚಿತ್ತದಿಂದ ಅವರು ವರ್ತಿಸಿದ್ದಾರೆಂಬುದು ಶ್ಲಾಘನೀಯ. ಆದರೆ ಅವರ ಸರ್ಕಾರದ ಪೊಲೀಸ್ ಅಧಿಕಾರಿಗಳು ರೈತರನ್ನು ಚಚ್ಚಿ ಮತ್ತೊಮ್ಮೆ ರಾಜ್ಯದ ಮುಖಕ್ಕೆ ಮಸಿ ಬಳಿದಿದ್ದಾರೆ. ಯಾವ ಚಳುವಳಿಯನ್ನೂ ಸಹಿಸದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಧೋರಣೆಯನ್ನು ಯಥಾವತ್ತಾಗಿ ಪ್ರತಿಫಲಿಸುವವರೆಂದರೆ ನಮ್ಮ ಪೊಲೀಸರು ಎಂದರೆ ತಪ್ಪಾಗಲಾರದು. ಬಿಸ್ಮಾರ್ಕ್ ಎಂಬ ನಾಮಫಲಕವನ್ನು ಯಾವ ಸಂಕೋಚವೂ ಇಲ್ಲದೆ ಹಣೆಗೆ ಅಂಟಿಸಿಕೊಂಡಿರುವ ಅದ್ವಾನಿ ನೇತೃತ್ವದಲ್ಲಿ ಮುಂಬರುವ ದಿನಗಳು ಇನ್ನೂ ಎಷ್ಟು ಕರಾಳವಾಗಿರುತ್ತವೆಂದು ಊಹಿಸಿಕೊಳ್ಳಬಹುದು. ಅದ್ವಾನಿ ಮಹಾಶಯರಿಗೆ ಸೆಪ್ಟೆಂಬರ್ ೨೬ ಅತ್ಯಂತ ಸಂತೋಷದ ದಿನ. ಆ ದಿನದೊಳಗಾಗಿ ಅವರಿಗೆ ಲಗಾಮು ತೊಡಿಸುವ ಜವಾಬ್ದಾರಿ ಇದ್ದ ಉತ್ತರ ಪ್ರದೇಶದ ಮುಖ್ಯಮಂತ್ರಿ ಮಾಯಾವತಿ ತಮ್ಮ ಅಪ್ರಬುದ್ಧ ರಾಜಕೀಯದ ತುರ್ತಿನಿಂದಾಗಿ ಕರುಣಾಮಯಿ ಆಗಿಹೋದರು. ಸರ್ವೋಚ್ಚ ನ್ಯಾಯಾಲಯವು ಸರ್ಕಾರಕ್ಕೆ ನೀಡಿದ್ದ ಗಡುವು ಅಂದಿಗೆ ಮುಕ್ತಾಯವಾಯಿತು. ಆಕೆ ಇಚ್ಛಿಸಿದ್ದಿದ್ದರೆ ಆ ದಿನದೊಳಗಾಗಿ ಒಂದು ಹೊಸ ಆದೇಶ ಹೊರಡಿಸಿ ಅದ್ವಾನಿ ಮತ್ತು ಸಹ-ವಿಧ್ವಂಸಕರನ್ನು ವಿಚಾರಣೆಗೆ ಗುರಿಪಡಿಸಬಹುದಿತ್ತು. ಹಾಗೆ ಮಾಡಲಿಲ್ಲವಾದ್ದರಿಂದ ಮಸೀದಿ ಉರುಳಿಸಿದ ಕ್ರಿಯೆಗೆ ಮನ್ನಣೆ ದೊರೆತಂತಾಗಿದೆ ; ಅದ್ವಾನಿ ಒಂದು ಲೀಟರ್ ಹಾಲು ಕುಡಿದು ತಾವೆಂತಹ ಸಾತ್ವಿಕ ರಾಜರ್ಷಿ ಎಂಬುದನ್ನು ಪ್ರದರ್ಶನಕ್ಕಿಡಲು ಅಡ್ಡಿಯಿಲ್ಲ.



ನಮ್ಮ ರಾಜ್ಯದ ಖ್ಯಾತ ಕವಿ – ನಾಟಕಕಾರ – ಜಾನಪದ ತಜ್ಞ ಡಾ॥ ಚಂದ್ರಶೇಖರ ಕಂಬಾರರು ಕಬೀರ ಸಮ್ಮಾನದ ಕಲಶವನ್ನು ಈ ಬಾರಿ ಧರಿಸಿದ್ದು ಹೆಮ್ಮೆಯ ವಿಷಯ. ಅವರ ಸಾಹಿತ್ಯ ಕೃಷಿ ಇನ್ನೂ ವಿಪುಲವಾಗಿ ವಿಸ್ತರಿಸಲೆಂದು ಆಶಿಸುತ್ತಾ 'ಹೊಸತು' ಅವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ. ಮಾನ್ಯ ಗೋಪಾಲಕೃಷ್ಣ ಅಡಿಗರನ್ನು ಬಿಟ್ಟು ಈ ಪ್ರಶಸ್ತಿಯನ್ನು ಪಡೆದ ಕರ್ನಾಟಕದ ಇನ್ನೊಬ್ಬರೆಂದರೆ ಕಂಬಾರರೇ.

ಈ ಸಿಹಿ ಸುದ್ದಿ ಬರುವ ಮೊದಲೇ ನಾಟಕ ಕಲಾ ಚತುರ ಬಿ. ವಿ. ಕಾರಂತರು ನಮ್ಮಿಂದ ಸದಾಕಾಲಕ್ಕೂ ಕಾಣೆಯಾಗಿದ್ದರು. ಸುಮಾರು ಒಂದು ವರ್ಷದ ಹಿಂದೆ ಅವರು 'ಹೊಸತು' ಕಚೇರಿಯಲ್ಲಿ ರಂಗಸಂಗೀತವನ್ನು ಕುರಿತು ಮನೋಜ್ಞವಾದ ಉಪನ್ಯಾಸವೊಂದನ್ನು ನೀಡಿ ಅದರ ಮುಂದುವರಿದ ಭಾಗದ ಇನ್ನೊಂದು ಉಪನ್ಯಾಸ ನೀಡುವುದಾಗಿ ಹೇಳಿದ್ದರು. ಆಗ್ಗೆ ಆಗಲೆ ಅವರ ಆರೋಗ್ಯ ಕ್ಷೀಣಿಸಿತ್ತು; ಆದರೆ ಅದರ ಛಾಯೆ ಹೊರಗೆ ಕಾಣದಷ್ಟು ಮಧುರವಾದ ವ್ಯಕ್ತಿತ್ವವನ್ನವರು ಬೆಳೆಸಿಕೊಂಡಿದ್ದರು. ನಮಗೆ ಅವರ ಎರಡನೆಯ ಉಪನ್ಯಾಸ ದಕ್ಕದೆ ಹೋಯಿತು. ಸಾಂಸ್ಕೃತಿಕ ಲೋಕವನ್ನು ಸಂತಾಪದ ಮಡುವಿನಲ್ಲಿ ಅದ್ದಿದ ಕಾರಂತರನ್ನು 'ಹೊಸತು' ಅಭಿಮಾನದಿಂದ ನೆನೆದು ಗೌರವಿಸುತ್ತದೆ.

ನಮ್ಮನ್ನಗಲಿದ ಇನ್ನೊಂದು ಹಿರಿಯ ಚೇತನವೆಂದರೆ ಸಿ. ಬಿ. ಮೊಣ್ಣಯ್ಯನವರು. ಮಳೆಗಾಲದಲ್ಲಿ ಅವರ ಊರಿಗೆ ಹೋದರೆ ಜೊತೆಯಲ್ಲಿ ನಡೆಯುವಾಗ 'ಕಾಲು ತೆಗೆದು ತಲೆಯ ಮೇಲಿಟ್ಟುಕೊಂಡು ನಡೆಯಿರಿ, ಆಗ ಈ ಕೆಸರಿನ ಬಾಧೆ ಇರುವುದಿಲ್ಲ' ಎಂದು ಛೇಡಿಸುತ್ತಿದ್ದ ಮೊಣ್ಣಯ್ಯನವರು ತಮ್ಮ ೯೫ನೆಯ ವಯಸ್ಸಿನಲ್ಲಿ ತೀರಿಕೊಂಡರು. ಈಗ ಐದು ವರ್ಷಗಳ ಹಿಂದೆ ನೋಡಿದ್ದರೆ ಅವರಿಗೆ ೯೦ ವರ್ಷವೆಂದು ಯಾರೂ ಹೇಳುತ್ತಿರಲಿಲ್ಲ; ಅಂತಹ ಯುವಚೈತನ್ಯ ಅವರದು. ನಮ್ಮ ರಾಜ್ಯದ ರಾಜಕೀಯದಲ್ಲಿ ಅವರದೊಂದು ಪಾತ್ರವಿತ್ತೆಂದು ತಿಳಿಯದವರೇ ಹೆಚ್ಚು. ಬಹುದೊಡ್ಡ ಸ್ವಾತಂತ್ರ್ಯ ಹೋರಾಟಗಾರರು, ಕ್ರಾಂತಿಕಾರಿ ಕಾರ್ಯಕರ್ತರು, ಭಾರತ ಕಮ್ಯುನಿಸ್ಟ್ ಪಕ್ಷದ ಸ್ಥಾಪಕ ಸದಸ್ಯರು, ಹಿರಿಯ ಚಿಂತನಾಶೀಲ ಸಿದ್ಧಾಂತಿ, ಹೀಗೆ ಕರ್ನಾಟಕದ ಯುವಪೀಳಿಗೆಗೆ ಅನುಕರಣೀಯ ಮಾದರಿ

೬ನೇ ಪುಟಕ್ಕೆ....

ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



ಸಂಪುಟ-೪ ಸಂಚಿಕೆ - ೩ ಅಕ್ಟೋಬರ್ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೮೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**




## ಗುಡುಗೋ ಗುಡುಗು, ಹನಿ ಮಳೆಯಿಲ್ಲ - ಹೀಗೊಂದು ಶೃಂಗಸಭೆ

ವಿಶ್ವಸಂಸ್ಥೆಯ ನೇತೃತ್ವದಲ್ಲಿ ಪ್ರಥಮ ಬಾರಿಗೆ 'ಮಾನವನ ಪರಿಸರ'ದ ಬಗ್ಗೆ ಸ್ಟಾಕ್‌ಹೋಂನಲ್ಲಿ ಎಲ್ಲ ಸದಸ್ಯ ರಾಷ್ಟ್ರಗಳ ಶೃಂಗಸಭೆ ನಡೆಯಿತು. ಈ ಸಭೆಯಲ್ಲಿ ನಮ್ಮ ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಬಡತನವೇ ಪರಿಸರದ ಅತಿ ಮಹತ್ವದ ಮಲಿನಕಾರಕವೆಂಬ ತಾತ್ವಿಕ ಪ್ರತಿಪಾದನೆ ಮಾಡಿದ್ದರು. ಪರಿಸರ ರಕ್ಷಣೆಯ ತಮ್ಮ ನಿಷ್ಠೆಯ ದ್ಯೋತಕವೆಂಬಂತೆ ಕೇರಳದ ಸೈಲೆಂಟ್ ವ್ಯಾಲಿ ಪ್ರದೇಶವನ್ನು ಭವಿಷ್ಯದ ಪೀಳಿಗೆಗಾಗಿ ರಕ್ಷಿಸುವ ಭರವಸೆ ನೀಡಿ ಎಲ್ಲರ ಶ್ಲಾಘನೆ ಪಡೆದಿದ್ದರು. ಆನಂತರದ ಮಹತ್ವದ ಸಭೆಯೆಂದರೆ ೧೯೯೨ರಲ್ಲಿ ರಯೋ ಡಿ ಜನ್ಯೆರೋದಲ್ಲಿ ನಡೆದ 'ಪರಿಸರ ಮತ್ತು ಅಭಿವೃದ್ಧಿ' ಶೃಂಗಸಭೆ.

ಇದೇ ಚಿಂತನೆಯನ್ನು ಮುಂದುವರಿಸಿ ಈಗಷ್ಟೆ ಜೋಹಾನ್ಸ್‌ಬರ್ಗ್ ಶೃಂಗಸಭೆ ಮುಗಿದಿದೆ. ಈ ಸಲವೂ ಆರ್ಥಿಕ ಅಭಿವೃದ್ಧಿಯೇ ವಿಷಯವಾದರೂ ಇದಕ್ಕೊಂದು ಗುಣವಾಚಕವಾಗಿ 'ಜೀವನಾಧಾರವಾಗುವ' 'ಪೋಷಕ' ಬೆಳವಣಿಗೆ ಎಂದು ಹೇಳಲಾಗಿದೆ. ಜೀವನದ ಎಲ್ಲ ಚಟುವಟಿಕೆಗಳಿಗೆ ಆಧಾರವಾದ ಪ್ರಕೃತಿಯನ್ನು ರಕ್ಷಿಸಿಕೊಂಡು ಅಭಿವೃದ್ಧಿಯನ್ನು ಸಾಧಿಸುವುದು ಉದ್ದೇಶವಾಗ ಬೇಕು. ಈ ಬಾರಿ ಅಮೆರಿಕದ ಮತ್ತು ಭಾರತದ ರಾಷ್ಟ್ರನಾಯಕರು ಈ ಶೃಂಗಸಭೆಗೆ ಹಾಜರಾಗಲಿಲ್ಲ. ಕೇರಳ ಸರ್ಕಾರ ಪುನಃ ಸೈಲೆಂಟ್ ವ್ಯಾಲಿಯಲ್ಲಿ ವಿದ್ಯುಚ್ಛಕ್ತಿ ಉತ್ಪಾದನೆ, ಜಲಾಶಯ ರಚನೆಗೆ ಮುಂದುವರಿದಿದೆ.

ಈ ಮೂರು ದಶಕಗಳಲ್ಲಿ ಕೇವಲ ಉಪನ್ಯಾಸಗಳು, ಒಳ್ಳೊಳ್ಳೆಯ ಚಿಂತನೆಯ ಪ್ರವಾಹ ಹರಿದಿದೆಯೇ ವಿನಃ ಹಿಂದಿನ ಸಭೆಗಳಲ್ಲಿ ಒಪ್ಪಿಕೊಂಡ ಯಾವ ಕಾರ್ಯಕ್ರಮಗಳನ್ನೂ ಸರ್ಕಾರಗಳು ಕಾರ್ಯಗತಗೊಳಿಸಲು ಉತ್ಸುಕರಾಗಿ ಮುಂದುವರಿದಿಲ್ಲ. ಕ್ಯೋಟೋದಲ್ಲಿ ಸೇರಿದ್ದ ಸಭೆಯಲ್ಲಿ ವಿಷಾನಿಲಗಳ ವಿಸರ್ಜನೆಯನ್ನು ತಡೆಯುವ ಕ್ರಮಕ್ಕೆ ಒಪ್ಪಿಗೆ ನೀಡಿ ನಿಗದಿತ ತಾರೀಖನ್ನೂ ನಿರ್ದೇಶಿಸಲಾಗಿತ್ತು. ಆದರೆ ಅಮೆರಿಕ ಈ ಒಪ್ಪಂದಕ್ಕೆ ಸಹಿ ಹಾಕಲು ಮುಂದಾಗಿಲ್ಲ. ಪ್ರಪಂಚದ ಶೇ. ೨೫ರಷ್ಟು ಇಂಧನ ಶಕ್ತಿಯನ್ನು ಉಪಯೋಗಿಸುವ ಈ ರಾಷ್ಟ್ರ ವಿಶ್ವದಲ್ಲೇ ಅತಿ ಹೆಚ್ಚು ವಿಷಾನಿಲವನ್ನು ವಿಸರ್ಜಿಸುವ ಉದ್ಯಮನೀತಿಯನ್ನು ಹೊಂದಿದೆ. ಒಂದು ಯೋಜನೆಯನ್ವಯದ ವೇಳಾಪಟ್ಟಿಯನ್ನು ಒಪ್ಪಿಕೊಳ್ಳಲು ಅಮೆರಿಕ ಸಿದ್ಧವಿಲ್ಲ. ಕೇವಲ ಆಶಯಗಳನ್ನು ಪ್ರಕಟಿಸಿ ಸರ್ಕಾರಗಳಿಗೇ ಅವುಗಳನ್ನು ಕಾರ್ಯಗತಗೊಳಿಸುವ ಸ್ವಾತಂತ್ರ್ಯವನ್ನು ನೀಡಬೇಕೆಂದು ವಾದಿಸುತ್ತದೆ. ವಿಶ್ವದ ಅತಿ ಬಡ ರಾಷ್ಟ್ರಗಳ ಅಭಿವೃದ್ಧಿಗೆ ಪರಿಸರ ಸಂರಕ್ಷಣೆಯ ಅವಿಭಾಜ್ಯ ಅಂಗವಾದ ಕಾರ್ಯಕ್ರಮವಾಗಿ ತಮ್ಮ ರಾಷ್ಟ್ರೀಯ ಉತ್ಪಾದನೆಯ ಶೇ. ೦.೭ರಷ್ಟು ಹಣವನ್ನು ಮುಂದುವರಿದ ರಾಷ್ಟ್ರಗಳು ನೆರವಾಗಿ ನೀಡಬೇಕೆಂದು ನಾಲ್ಕಾರು ದಶಕಗಳಿಂದ ಒಪ್ಪಿಕೊಂಡೇ ಬಂದಿದ್ದಾರೆ. ಆದರೆ ಇದು ೧೯೭೨ರಲ್ಲಿ ಶೇ. ೦.೩೫ರಷ್ಟು ಇದ್ದಿದ್ದು, ಈಗ ಶೇ. ೦. ೨೨ಕ್ಕೆ ಇಳಿದಿದೆ. ರಯೋ ಡಿ ಜನ್ಯೆರೋದಲ್ಲಿ ಶೇ. ೦.೭ರ ಜತೆಗೆ, ಪರಿಸರ ಸಂರಕ್ಷಣೆಗೆಂದೇ ವಿಶೇಷ ಅನುದಾನ ನೀಡಬೇಕೆಂದು ತೀರ್ಮಾನಿಸಲಾಗಿತ್ತು! ಅಭಿವೃದ್ಧಿಯ ಹಾದಿಯಲ್ಲಿ ಜೀವ ಸಂತತಿಯ ವೈವಿಧ್ಯತೆಗೆ ಪೆಟ್ಟು ಬೀಳುತ್ತಿದ್ದು ಸಹಸ್ರಾರು ಅಮೂಲ್ಯ ಸಂತತಿಗಳ ತಳಿಗಳು ನಾಶವಾಗಿ ಹೋಗುತ್ತಿವೆ. ಇದನ್ನು ಸಂಪೂರ್ಣ ತಡೆಯುವ ಕ್ರಮಕ್ಕೂ ಅಮೆರಿಕ ಒಪ್ಪುತ್ತಿಲ್ಲ. ವಿಶ್ವದಲ್ಲಿ ನೀರಿಗೆ ಕೊರತೆಯಿಲ್ಲ ಎನಿಸಬಹುದು. ಆದರೆ ವಾಸ್ತವವೆಂದರೆ ಇರುವ ಎಲ್ಲ ನೀರಿನ ಶೇ. ೨.೫ರಷ್ಟು ಮಾತ್ರ ಕುಡಿಯಲು ಯೋಗ್ಯವಾದುದು. ವಿಶ್ವದ ಜನಸಂಖ್ಯೆ ಮಂದಗತಿಯಲ್ಲೇ ಆದರೂ ಏರುತ್ತಲೇ ಇದೆ. ಇನ್ನು ಹತ್ತು ವರ್ಷದಲ್ಲಿ ಇದು ೬.೧ ಬಿಲಿಯನ್ ಆಗಲಿದೆ. ೧೧ ಬಿಲಿಯನ್ನಿನವರೆಗೂ ಶಕ ೨೦೫೦ರ ವೇಳೆಗೆ ಏರುವ ನಿರೀಕ್ಷೆಯಿದೆ. ಮತ್ತೊಂದು ಕಡೆ ಕಾಡಿನ, ನೀರಿನ ಪ್ರಮಾಣ ದಿನೇದಿನೇ ಕಡಿಮೆಯಾಗುತ್ತಿದೆ. ಹೀಗೇ ಪಟ್ಟಿ ಮಾಡುತ್ತಲೇ ಹೋಗಬಹುದು. ಶತಮಾನದ ಅಂತ್ಯದ ವೇಳೆಗೆ ಮಾನವ ಸಮೂಹ ತನ್ನನ್ನು ಪೋಷಿಸುವ ಪ್ರಕೃತಿಯನ್ನು ಪೋಷಿಸದೆ, ಪೋಷಿಸಲಾಗದೆ - ಭೂಭಾರವಾಗಿ ವಿನಾಶದ ಹಾದಿಗೆ ಧಾವಿಸುತ್ತಿರಬಹುದೆಂಬುದು ಬರೇ ಊಹನೆಯಲ್ಲ.

ಜೋಹಾನ್ಸ್‌ಬರ್ಗ್ ಶೃಂಗಸಭೆಯಲ್ಲಿ ಭಾಷಣಗಳ ಸುರಿಮಳೆಯೇ ಆಯಿತು. ಕುಡಿಯುವ ನೀರಿನ ಅಗತ್ಯ ಪೂರೈಕೆ, ಕೊಳೆಗೇರಿಗಳ ಅಭಿವೃದ್ಧಿಗೆ ಒಂದಿಷ್ಟು ನೆರವು ನೀಡುವ ಒಲವನ್ನು ಅಮೆರಿಕ ತೋರಿತು. ಹೊಸ ವಿಷಯವೆಂದರೆ ಇಂದಿನ ವಿಶ್ವವಾಣಿಜ್ಯ ನೀತಿಯ ಹಾದಿಯಲ್ಲೇ ಮುಂದುವರಿದು, ಪ್ರಥಮಬಾರಿಗೆ ಸ್ವಯಂಸೇವಕ ಸಂಘಗಳಲ್ಲದೆ, ಸರ್ಕಾರಗಳಲ್ಲದೆ, ಬಹುರಾಷ್ಟ್ರೀಯಗಳ ಪ್ರತಿನಿಧಿಗಳೂ ಸಭೆಯಲ್ಲಿ ಭಾಗವಹಿಸಲು ಮುಂದಾದದ್ದು. ಯಾರು ಲಾಭದೃಷ್ಟಿ ಮಾತ್ರದಿಂದಲೇ ಪ್ರಕೃತಿ ಸಂಪತ್ತನ್ನು ನಿರ್ದಯೆಯಿಂದ ದೋಚುತ್ತಿದ್ದಾರೋ ಅವರೇ ತಮ್ಮ ಸ್ವಂತ ಹಿತಕ್ಕೆ ವಿರುದ್ಧವಾಗಿ ಯಾವ ಒತ್ತಡವೂ ಇಲ್ಲದೆ ಸ್ವಯಂಪ್ರೇರಿತವಾಗಿ ಪರಿಸರ ರಕ್ಷಣೆಗೆ ಮುನ್ನುಗ್ಗುವರೆಂಬ ಭ್ರಮೆಗೆ ಇಲ್ಲಿ ಪುರಸ್ಕಾರ ದೊರೆಯಿತು. ಈ ''ಭೂಮಿಯ ಶೃಂಗಸಭೆ'' ವಿಶ್ವಸಂಸ್ಥೆ ತನ್ನ ಇನ್ನಿತರ ವೇದಿಕೆಗಳಲ್ಲಿ ಪರಿಣಾಮಕಾರಿಯಾಗಿ ಚರ್ಚಿಸುವ ವಿಷಯಗಳನ್ನೇ ತಾನು ಚರ್ಚಿಸಲು ತೊಡಗಿದ್ದು. ಇದು ಅನಗತ್ಯ ಎಂಬ ಧ್ವನಿ ಮೂಡಿ ಬಂದದ್ದು ಗಮನಾರ್ಹ. ಸಹಸ್ರಾರು ಸಂಖ್ಯೆಯ ಸ್ವಯಂಸೇವಕ ಸಂಘಗಳೆನಿಸಿಕೊಳ್ಳುವ ಸಂದೇಹಾಸ್ಪದ, ಪರಸ್ಪರ ವೈರುಧ್ಯಗಳಿಂದ ತುಂಬಿದ್ದ ಲಕ್ಷಕ್ಕೂ ಮಿಕ್ಕ ಜನರನ್ನು ಈ ಶೃಂಗಸಭೆ ಆಕರ್ಷಿಸಿತ್ತು. ಬಹುಶಃ ಮುಂದಿನ ಸಭೆಗಳು ಹೀಗೆ ನಡೆಯಲಾರವು. ವಿವಿಧ ವಿಷಯಗಳನ್ನು ಚರ್ಚಿಸಲು ಪ್ರತ್ಯೇಕ ತಜ್ಞರ ಗುಂಪುಗಳನ್ನು ರಚಿಸಿ ಅವರಿಂದ ಸ್ವೀಕೃತವಾದ ವರದಿಯನ್ನು ಗಂಭೀರವಾಗಿ ಚರ್ಚಿಸಿ, ನಂತರ ವಿಶ್ವಸಂಸ್ಥೆಯಲ್ಲೇ ಅವುಗಳನ್ನು ಒಂದೊಂದಾಗಿ ಅಂಗೀಕರಿಸುವುದು ಸೂಕ್ತವಾದೀತು. ಬಹುರಾಷ್ಟ್ರೀಯ ವಾಣಿಜ್ಯ ಘಟಕಗಳು ಜಾಗತೀಕರಣದ ಹೆಸರಿನಲ್ಲಿ ನಡೆಯುತ್ತಿರುವ ಆರ್ಥಿಕ ಬೆಳವಣಿಗೆಗಳೇ, ಅಸಮಾನತೆ ಮತ್ತು ಸಾಮಾಜಿಕ ಮತ್ತು ಪರಿಸರದ ಆಕ್ರಂದನಗಳಿಗೆ ಕಾರಣವೆಂದು ಗುರುತಿಸುತ್ತವೆ. ಇವು ಸವಿಯಾದ ರಾಜಿ ಮಾತಿನ ಮೋಡಿಯೇ ಸರಿ! ಇನ್ನು ತಮ್ಮ ಲಾಭದಲ್ಲಿ ಒಂದಿಷ್ಟು ಭಾಗವನ್ನು ಈ ಕೆಲಸಕ್ಕಾಗಿ ಮುಡಿಪಾಗಿ ಇಡುತ್ತಾರೋ ಮತ್ತು ತಮ್ಮ ಉತ್ಪಾದನೆಯ ಮಾರ್ಗದಲ್ಲಿ ಪರಿಸರವನ್ನು ಸಂರಕ್ಷಿಸಿಕೊಂಡು ಹೋಗುವ ಹಾದಿಯನ್ನು ಹಿಡಿಯುತ್ತಾರೋ ಎಂಬುದನ್ನು ಕಾದು ನೋಡಬೇಕು. ಸರ್ಕಾರಗಳಿಗೇ ತಮ್ಮ ತೀರ್ಮಾನಗಳನ್ನು ವಾಣಿಜ್ಯ ಘಟಕಗಳ ಮೇಲೆ ಒತ್ತಾಯ ತರಲು ಸಾಧ್ಯವಾಗದಿರುವಾಗ, ವಾಣಿಜ್ಯ ಸಂಘಗಳು ಹಾಗೆ ಮಾಡಲು ಸಫಲವಾಗುವುವೇ ಎಂಬುದು ಶಂಕಾಸ್ಪದ. ಕೋಫಿ ಅನ್ನಾನ್ ಹೇಳುತ್ತಾರೆ : 'ಶ್ರೀಮಂತ ರಾಷ್ಟ್ರಗಳೇ ಪ್ರಪಂಚವನ್ನು ಪರಿಸರ ವಿರೋಧೀ ಅಭಿವೃದ್ಧಿ ಮಾರ್ಗಕ್ಕೆ ಹಚ್ಚಿದ್ದು. ಈಗ ಅದನ್ನು ಸರಿಪಡಿಸಲೂ ಅವರೇ ಮುಂದುವರಿಯಬೇಕು. ಅದು ಅವರಿಗೇ ಸಾಧ್ಯ' ಎಂದು. ಆದರೆ ಜೋಹಾನ್ಸ್‌ಬರ್ಗ್‌ನಲ್ಲಿ ಶ್ರೀಮಂತ ರಾಷ್ಟ್ರಗಳು ಈ ಸವಾಲನ್ನು ಸ್ವೀಕರಿಸಲಿಲ್ಲ.

# ಸಾಹಿತ್ಯದ ಆಶಯ

ಅಕ್ಷರ ಇರದಿದ್ದರೆ ಮಾನವನ ಪ್ರಪಂಚ ಎಷ್ಟು ಕತ್ತಲೆಯಿಂದ ತುಂಬಿರುತ್ತಿತ್ತು ಎಂದು ದಂಡಿನ್ ತನ್ನ 'ಕಾವ್ಯಾದರ್ಶ'ದಲ್ಲಿ ಚಿಂತಿಸಿದ್ದಾನೆ. ಬೆಳಕು ಇರುವಾಗಲೂ ಅದು ಎಲ್ಲರಿಗೂ ಲಭ್ಯವಾಗದಿರುವಂತಹ ಸನ್ನಿವೇಶ ನಮ್ಮದು. ಎಲ್ಲ ದೇಶಗಳಲ್ಲೂ ಇದೇ ಪರಿಸ್ಥಿತಿ ಚರಿತ್ರೆಯುದ್ದಕ್ಕೂ ಕಂಡುಬಂದಿದೆ. ಅದರ ಪರಿಮಾಣದಲ್ಲಿ ಆಗಾಗ್ಗೆ ವ್ಯತ್ಯಾಸಗಳು ಉಂಟಾಗಿರುವುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅಕ್ಷರದಿಂದ ಮೂಡಿದ ಬೆಳಕು ಕೂಡ ಗುಣಾತ್ಮಕವಾಗಿ ಒಂದೇ ತೆರನಾದುದಲ್ಲ. ಕೆಲವರಿಗೆ ಅದು ಆಟಿಕೆಯ ವಸ್ತುವಾದರೆ ಇನ್ನು ಕೆಲವರಿಗೆ ಅದು ಅನ್ನ-ನೀರಿನಷ್ಟು ಮಹತ್ವದ್ದಾಗಬಹುದು.

ಅಕ್ಷರ ಮಾಧ್ಯಮದ ಯಾವುದೇ ಪ್ರಕಾರವಾಗಲಿ ಅದು ಸಂವಹನ ಕ್ರಿಯೆಯಲ್ಲಿ ತೊಡಗಿ ವರ್ತಮಾನ ಮತ್ತು ಭವಿಷ್ಯತ್ತುಗಳೊಡನೆ ಸಂವಾದ ನಡೆಸಬಲ್ಲದು. ಇತಿಹಾಸ, ತತ್ತ್ವಶಾಸ್ತ್ರ ಮುಂತಾದ ಶಿಸ್ತುಗಳು ಈ ತೆರನಾದವು. ಕಾಲ ಮತ್ತು ದೇಶಗಳನ್ನು ಮೀರಿ ಸಂವಾದ ಕ್ರಿಯೆಯಲ್ಲಿ ಅವು ನಿರತವಾಗಿರುತ್ತವೆ. ಉದಾಹರಣೆಗೆ, ಎಂಟನೆಯ ಶತಮಾನದ ಕೇರಳೀಯ ಶಂಕರಾಚಾರ್ಯ ಇಪ್ಪತ್ತೊಂದನೆಯ ಶತಮಾನದಲ್ಲಿ ಟಿಂಬಕ್ಟೂನಲ್ಲಿರುವ ಆಸಕ್ತರೊಡನೆ ಸಂವಾದ ನಡೆಸಬಹುದು. ಅದು ಭೂತಕಾಲದೊಡನೆ ಸಂವಾದ ನಡೆಸಲಾರದು, ಅಷ್ಟೆ. ಕೆಲವು ಕಟ್ಟಾ ಸಂಪ್ರದಾಯವಾದಿಗಳು ಕೇವಲ ಭೂತಕಾಲದ ಸಂಸರ್ಗದಲ್ಲೇ ವಿಹರಿಸುತ್ತಾರೆಂಬುದು ಬೇರೆ ವಿಷಯ. ವರ್ತಮಾನದೊಡನೆ ಬೆರೆತು ಬೆಳೆಯಲು ಅಸಮರ್ಥರಾದಾಗ ಈ ಪ್ರವೃತ್ತಿ ವಿಶೇಷವಾಗಿ ಅವರನ್ನು ಆಕರ್ಷಿಸುತ್ತದೆ.

ಸಾಹಿತ್ಯವು ಅಕ್ಷರ ಮಾಧ್ಯಮದ ಬೇರೆ ಕೆಲವು ಪ್ರಕಾರಗಳಿಗಿಂತಲೂ ಭಿನ್ನವಾಗಿದ್ದು ಅಸಾಮಾನ್ಯ ಆದರಕ್ಕೆ ಪಾತ್ರವಾಗಿದೆ. ಸಾಹಿತ್ಯವನ್ನು ಸೃಷ್ಟಿಸದಿದ್ದ ಯಾವ ಜನಾಂಗವೂ ಚರಿತ್ರೆಯಲ್ಲಿ ಕಂಡುಬರುವುದಿಲ್ಲ. ಬೇರೇನೂ ಕೆಲಸವಿಲ್ಲದಿದ್ದಾಗ ಜನ ಸಾಹಿತ್ಯವನ್ನು ಸೃಷ್ಟಿಸುತ್ತಾ ಕೂರುತ್ತಾರೆಂಬುದು ಕುಹಕದ ಮಾತಾಗಬಹುದು; ಬೇಕಿದ್ದರೆ ಅದನ್ನು ಗಂಭೀರವಾಗಿಯೂ ಚರ್ಚಿಸಬಹುದು. ಐವತ್ತರ ದಶಕದಲ್ಲಿ ಮೈಸೂರಿನಲ್ಲಿ ಒಂದು ಅಂತರ-ವಿದ್ಯಾರ್ಥಿನಿಲಯ ಚರ್ಚಾಸ್ಪರ್ಧೆಗೆ ತೀ.ನಂ.ಶ್ರೀ. ಯವರು ''ಸಾಹಿತ್ಯವು ಸೋಮಾರಿಗಳ ಉದ್ಯೋಗ'' ಎಂಬ ವಿಷಯವನ್ನು ಸೂಚಿಸಿದ್ದರು. ಅದರ ಬಗ್ಗೆ ಮಾತನಾಡುವಾಗ ಗೊರೂರು ಸೀತಾರಾಂ (ರಾಮಸ್ವಾಮಿ ಅಯ್ಯಂಗಾರ್ಯರ ಮಗ) ''ಸೋಮಾರಿಗಳಿಗೂ ಉದ್ಯೋಗ ಇರುವಂತಹ ವಿಭಿನ್ನ ಲಕ್ಷಣದ ಕೃಷಿಯೇ ಸಾಹಿತ್ಯ'' ಎಂದು ವ್ಯಾಖ್ಯಾನಿಸಿದ್ದರು. ವಿಜ್ಞಾನಿಗಳು, ಅಗಸರು, ಜ್ಯೋತಿಷಿಗಳು ಮುಂತಾದವರಂತೆ ಸಾಹಿತಿಗಳೂ ಒಂದು ನಿರ್ದಿಷ್ಟ ಕಸುಬಿನವರು ಎಂಬ ಪ್ರಮೇಯ ಈಚಿನ ಕಾಲದ್ದು. ಮೊದಲಿಗೆ ಅವರು ಎಲ್ಲ ಕಸುಬುಗಳಿಂದಲೂ ಬಂದಿದ್ದ ಕೆಲವು ವ್ಯಕ್ತಿಗಳಾಗಿರುತ್ತಿದ್ದರು. ಪದ್ಯ ಬರೆಯುವುದೇ ಅವರ ಧರ್ಮವಾಗಿರಲಿಲ್ಲ ಮತ್ತು ಅದನ್ನು ಓದಿಕೊಂಡು ಕಾಲ ನೂಕುವುದೇ ಇನ್ನೊಂದು ಗುಂಪಿನವರ ಕರ್ಮವಾಗಿರಲಿಲ್ಲ. ಋಗ್ವೇದದಲ್ಲಿ ಕವಿಯೊಬ್ಬನ ಕೌಶಲ್ಯವನ್ನು ಬಡಗಿಯ ಕೌಶಲ್ಯಕ್ಕೆ ಸಮಾನವಾದುದೆಂಬ ವಿಸ್ಮಯವನ್ನು ಪ್ರಕಟಿಸಲಾಗಿದೆ. ''ಎಲ್ಲರೂ ನೋಡುತ್ತಾರೆ, ಆದರೆ ನೋಡಿದ್ದೆಲ್ಲಾ ಆಳವಾದ ಅನುಭವವಾಗಿ ಮಾರ್ಪಡುವುದಿಲ್ಲ ; ಅನುಭವಕ್ಕೆ ಬಂದ ಎಲ್ಲವನ್ನೂ ಅಭಿವ್ಯಕ್ತಿಗೊಳಿಸಲು ಭಾಷೆಯು ಕೆಲವರಿಗೆ ದಕ್ಕುವುದಿಲ್ಲ. ನೋಡಿದ್ದು-ಕೇಳಿದ್ದು ಎಲ್ಲವನ್ನೂ ನೈಪುಣ್ಯ ಮತ್ತು ಪ್ರತಿಭೆಗಳಿಂದ ಯಾವನೋ ಮಾರ್ಪಡಿಸಿ ಹೊರಚೆಲ್ಲುತ್ತಾನೆ. ಗಂಡನೆದುರು ಹೆಂಡತಿಯು ಸಂಪೂರ್ಣವಾಗಿ ವಿವಸ್ತ್ರಳಾಗುವಂತೆ ಪ್ರತಿಭೆಯು ಕವಿಗೆ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತದೆ.'' – ಇದೂ ಋಗ್ವೇದದ ಒಂದು ಮಂತ್ರದ ಸಾರಾಂಶವೇ.

ಸಾಹಿತ್ಯವನ್ನು ತಮ್ಮ ವೈಯಕ್ತಿಕ ಸ್ವತ್ತನ್ನಾಗಿ ಗುರುತಿಸುವ ಕೆಲವು ಧೀಮಂತರು ಯಾವುದು ಸಾಹಿತ್ಯ ಮತ್ತು ಯಾವುದಲ್ಲ ಎಂಬುದನ್ನು ತೀರ್ಮಾನಿಸಲು ತಮ್ಮದೇ ಆದ ಚೂಪುಗತ್ತಿಗಳನ್ನು ಇಟ್ಟುಕೊಂಡಿರುತ್ತಾರೆ. ಅದರಲ್ಲಿ 'ಶ್ರೇಷ್ಠ' ಸಾಹಿತ್ಯವೆಂಬ ಪ್ರಭೇದವನ್ನು ಅವರು ಗುರುತಿಸುತ್ತಾರೆ. ಸ್ವಲ್ಪ ಲಘುವಾಗಿ ಹೇಳಬಹುದಾದರೆ, ಯಾವನೋ ಸ್ವೀಡನ್ನಿನ ಕವಿ ಹೇಗೆ ಬರೆದಿದ್ದಾನೋ ಹಾಗೆ ಬರೆದರೆ ಅದು ಶ್ರೇಷ್ಠವೆನಿಸಿಕೊಳ್ಳುತ್ತದೆ ಎಂಬ ಅಭಿಪ್ರಾಯಕ್ಕೆ ಇದ್ದಕ್ಕಿದ್ದಂತೆ ಮನ್ನಣೆ ದೊರಕಿಬಿಡಬಹುದು. ಅದರಂತೆ ಇರದಿರುವುದೆಲ್ಲಾ ಅ-ಶ್ರೇಷ್ಠವೆನಿಸಿಕೊಳ್ಳುತ್ತದೆ. ನೊಬೆಲ್ ಪಾರಿತೋಷಕ ಪಡೆದಿರುವ ಸಾಹಿತಿಗಳೆಲ್ಲಾ ಶ್ರೇಷ್ಠರೆಂಬ ಭ್ರಾಂತಿಯನ್ನೂ ಪ್ರಚಾರ ಮಾಡಲು ಬರುತ್ತದೆ. ಆಗ ಅವರು ನಿರೂಪಿಸುವ ಜೀವನ ಸಿದ್ಧಾಂತಗಳೇ ಮಾನ್ಯತೆಗೆ ಯೋಗ್ಯವೆಂಬ ಮೂರ್ಖತನವೂ ತುಂಬಿಕೊಳ್ಳುತ್ತದೆ. ಮುಖ್ಯವಾಗಿ ನಾವು ಗಮನಿಸುವ ಅಂಶ ಬೇರೆಯೇ ಇರುತ್ತದೆ : ಯಾವ ವರ್ಗದ ಜನರ ಪರವಾದ ಮೌಲ್ಯಗಳು ಶ್ರೇಷ್ಠ ಎಂಬುದು ಅಲ್ಲಿ ಗೌಣವಾಗಿರುವುದಿಲ್ಲ. ಸೊಗಸಾದ ನಿರೂಪಣೆ, ಚಮತ್ಕಾರದಿಂದ ಕೂಡಿದ ಅಭಿವ್ಯಕ್ತಿ, ದಟ್ಟವಾದ ಅನುಭವ ಮತ್ತು ಮಾನವೀಯ ಮೌಲ್ಯಗಳು ಏಕತ್ರ ಕೂಡಿಕೊಂಡಾಗ ಸಾಹಿತ್ಯವು ಶ್ರೇಷ್ಠವಾಗುತ್ತದೆ. ಅದು ಬಂಡಾಯ ಸಾಹಿತ್ಯಕ್ಕೂ ಅನ್ವಯವಾಗುವ ಮಾತು. ಭಂಡ ಸಾಹಿತ್ಯದಲ್ಲಿ ನಿರೂಪಣೆ ಎಷ್ಟೇ ಮಾರ್ಮಿಕವಾಗಿದ್ದರೂ ಅದು ಶ್ರೇಷ್ಠವಲ್ಲವೆಂಬ ಖಂಡತುಂಡವಾದ ಮಾತನ್ನು ಬೇರೆಯವರು ಎಷ್ಟೇ ಕ್ಷುಲ್ಲಕವಾಗಿ ಕಂಡರೂ ಆಯ್ಕೆ ಮಾಡಿಕೊಳ್ಳುವವನ ಸ್ವಾತಂತ್ರ್ಯವನ್ನು ಯಾರೂ ತಳ್ಳಿಹಾಕುವಂತಿಲ್ಲ. ಶ್ರೇಷ್ಠತೆಯ ಮಾಪನವು ಯಾರೊಬ್ಬರ ಪ್ರತ್ಯೇಕ ಹಕ್ಕೂ ಆಗಲಾರದು.

ಚಾತುರ್ಯ ಯಾರಿಗೆಲ್ಲಾ ಸಿದ್ಧಿಸಿದೆಯೋ ಅವರೆಲ್ಲಾ ಕವಿಗಳಾಗಬಹುದೆಂಬ ಭಾವನೆ ಕೆಲವರಲ್ಲಿದೆ. ಯಾತಕ್ಕಾಗಿ ಸಾಹಿತ್ಯ ರಚನೆ ಎಂಬ ಮಾತು ಬಂದಾಗ ಗಹನವಾದ ಉದ್ದೇಶಗಳ ಸ್ಥಾನದಲ್ಲಿ ವೈಯಕ್ತಿಕ ವಿಜೃಂಭಣೆಯ ಸ್ಥಾಪನೆಯಾಗುವುದು ಅಂತಹ ಸಂದರ್ಭದಲ್ಲಿ. ಯಾರನ್ನೋ ಛೇಡಿಸಲು ಬರೆದ ಕವನದಲ್ಲಿ ಯಾವುದೋ ತಾತ್ವಿಕ ಆಂತರ್ಯವಿದೆಯೆಂಬ ತೋರಿಕೆ ಉಂಟುಮಾಡುವುದು ಅಷ್ಟೇನೂ ಅಸಾಧ್ಯವಾದ ಕೆಲಸವಲ್ಲ. ಆಗ ಗಂಟಿಸ್ವಾಮಿ, ತಂಟಿಸ್ವಾಮಿ, ತಮಟಿಸ್ವಾಮಿ ಇತ್ಯಾದಿ ವಾಗಾಡಂಬರವು ಹೆಚ್ಚಾಗಿ ಮೂದಲಿಕೆಯೇ ಸಾರ್ವತ್ರಿಕ ವಸ್ತುವಾಗಿಬಿಡುವ ಅಪಾಯವಿರುತ್ತದೆ. ಕವನದ ಬದಲು ಕತೆ, ಕಾದಂಬರಿ, ನಾಟಕಗಳೂ ಈ ಸ್ವರೂಪವನ್ನು ತಾಳಬಹುದು. ಆದರೆ ವರ್ತಮಾನ-ಭವಿಷ್ಯತ್ತುಗಳೊಡನೆ ಗಂಭೀರ ಸಂವಾದ ನಡೆಸುವ ಲಕ್ಷಣ ಈ ಸಾಹಿತ್ಯದಲ್ಲಿ ಅಂತರ್ಗತವಾಗಿರುವುದಿಲ್ಲ. ನಮಗೆ ಬೇಕಾಗಿರುವ, ನಮ್ಮನ್ನು ತಣಿಸಿ ಮುನ್ನಡೆಸುವ ಸಾಹಿತ್ಯದ ಮೂಲಲಕ್ಷಣ ಇಂತಹ ಸಂವಾದವನ್ನು ಮೈಗೂಡಿಸಿಕೊಂಡಿರುವುದೇ ಆಗಿದೆ. ಬಂಡಾಯವಷ್ಟೇ ಸಾಹಿತ್ಯವಲ್ಲವೆಂಬುದನ್ನು ಎಲ್ಲರೂ ಒಪ್ಪಬೇಕಾದ್ದೇ; ಆದರೆ ಶ್ರೇಷ್ಠ ಸಾಹಿತ್ಯವಾಗಬೇಕಾದರೆ ಅದರಲ್ಲಿ ಬಂಡಾಯದ ಧ್ವನಿ ಇರಕೂಡದೆಂಬ ಧೋರಣೆಯು ಅಲ್ಪಸಂಖ್ಯಾತ ಆಳುವ ವರ್ಗದ ಪರುಕು ಹೇಳುವವರ ಅಭಿಪ್ರಾಯವಷ್ಟೇ ಆಗಬಲ್ಲದು. ಬಂಡಾಯ ಮನೋಭಾವವು ಅವಿಭಾಜ್ಯ ಅಂಗವಾಗಿ ಸಾಹಿತ್ಯವನ್ನು ಆವರಿಸಿಕೊಳ್ಳದಿದ್ದಲ್ಲಿ ಅದು ಹೇಗೆ ತಾನೆ ಶ್ರೇಷ್ಠತೆಯ ಮೆರುಗನ್ನು ಪಡೆಯಬಲ್ಲದೆಂಬುದನ್ನು ವ್ಯಾಪಕವಾದ ಚರ್ಚೆಗೆ ಒಡ್ಡಬೇಕಾದ ಅನಿವಾರ್ಯತೆ ಇಂದು ನಮ್ಮ ಮುಂದಿದೆ.

– ಜಿ. ರಾಮಕೃಷ್ಣ

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಬಿ. ಜಿ. ಗುಜ್ಜಾರಪ್ಪ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೭೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ✆ : ೪೪೧೦೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ✆ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ✆ : ೪೨೪೩೦೨

೩ನೇ ಪುಟದಿಂದ...

ಅವರಾಗಿದ್ದರು. ಕಾಶಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ದಿನಗಳಿಂದ ಕಡೆಯವರೆಗೂ ರಾಷ್ಟ್ರದ ಗುಣಾತ್ಮಕ ಬದಲಾವಣೆಗಾಗಿ ಶ್ರಮಿಸಿದ ಮೊಣ್ಣಯ್ಯನವರಿಗೆ 'ಹೊಸತು' ತನ್ನ ನಮನ ಸಲ್ಲಿಸುತ್ತದೆ.



ಮೊಣ್ಣಯ್ಯನವರಿಗಿಂತಲೂ ಹಿರಿಯರಾದ ಮಾನ್ಯ ಶ್ರೀ. ನಿಟ್ಟೂರು ಶ್ರೀನಿವಾಸರಾಯರು ಸೆಪ್ಟೆಂಬರ್‌ನಲ್ಲಿ ತಮ್ಮ ನೂರನೆಯ ವರ್ಷಕ್ಕೆ ಕಾಲಿಟ್ಟು ಎಲ್ಲೆಡೆ ಹರ್ಷದಾಯಕ ವಾತಾವರಣವನ್ನು ನಿರ್ಮಿಸಿದ್ದಾರೆ. ಅವರಿಗೆ ಹಾರ್ದಿಕ ಶುಭಾಶಯಗಳನ್ನು ಕೋರುತ್ತಾ 'ಹೊಸತು' ಪತ್ರಿಕೆಯ ಬಳಗವು ವಿನೀತಭಾವವನ್ನು ತಾಳುತ್ತದೆ ಮತ್ತು ನಮ್ಮೊಂದಿಗಿದ್ದು ಮಾನ್ಯ ನಿಟ್ಟೂರರು ಇನ್ನೂ ಹಲವು ಕಾಲ ಸ್ಫೂರ್ತಿ ನೀಡುತ್ತಿರಲೆಂದು ಆಶಿಸುತ್ತದೆ.

ರಾಜ್ಯದಲ್ಲಿ ಬರಗಾಲವು ತೀವ್ರವಾಗಿದೆ. ಕಣ್ಣಿದ್ದವರಿಗೆ ಅದು ಕಣ್ಣಿಗೆ ರಾಚುವಷ್ಟು ಗಾಢವಾಗಿದೆ. ಜಯಲಲಿತಾ, ಕೇಂದ್ರ ಸರ್ಕಾರ ಮತ್ತು ಸರ್ವೋಚ್ಚ ನ್ಯಾಯಾಲಯ ಇದನ್ನು ನೋಡಲು ಸಿದ್ಧರಿಲ್ಲ. ಕಾವೇರಿ ನೀರಿನ ಹಂಚಿಕೆಯ ಪ್ರಶ್ನೆಯನ್ನು ಸರಳವಾಗಿ ಪರಿಹರಿಸಲು ಸಾಧ್ಯವಿದೆಯೆಂದು ಯಾರೂ ಎಣಿಸಿಲ್ಲ. ನಾವು ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳಬೇಕಾದ ವಿಚಾರವು ನೀರಿನ ಅತ್ಯುಪಯುಕ್ತ ಬಳಕೆಯನ್ನು ಕುರಿತಾದದ್ದು. ರಕ್ತ ಕೊಟ್ಟೇವು, ಆದರೆ ಒಂದು ಹನಿ ನೀರನ್ನು ಕೊಡೆವು ಎಂಬ ಘೋಷಣೆಯು ಭಾವನಾತ್ಮಕವಾಗಿ ಬಹಳ ಹರಿತವಾದ್ದು, ಆದರೆ ಎಲ್ಲಿ ನೀರು ಅತ್ಯಂತ ಹೆಚ್ಚು ಉತ್ಪಾದನಾ ಸಾಮರ್ಥ್ಯವನ್ನು ಹೊಂದುತ್ತದೆ ಎಂಬ ಪ್ರಶ್ನೆಯನ್ನು ತಳ್ಳಿಹಾಕುವಂತಿಲ್ಲ. ಅಂತೆಯೇ ರಾಷ್ಟ್ರೀಯ ಸಂಪತ್ತನ್ನು ಕೇವಲ ಸ್ವಕೀಯ ಎಂಬಂತೆ ನಡೆಸಿಕೊಳ್ಳಲಾಗುವುದಿಲ್ಲ. ಆದ್ದರಿಂದ ಮಳೆಯ ಪ್ರಮಾಣವನ್ನಾಧರಿಸಿ ಕಾವೇರಿ ನೀರನ್ನು ಕರ್ನಾಟಕ ಮತ್ತು ತಮಿಳುನಾಡು ಯಾವ ಪ್ರಮಾಣದಲ್ಲಿ ಹಂಚಿಕೊಳ್ಳಬೇಕೆಂಬುದನ್ನು ವರ್ಷೇ ವರ್ಷೇ ಸಮಸ್ಯೆಯ ಕಗ್ಗಂಟನ್ನಾಗಿಸುವುದು ಸರ್ವಥಾ ಸರಿಯಲ್ಲ. ಒಂದು ಅಂಗೀಕೃತ ಸೂತ್ರಕ್ಕೆ ಬದ್ಧವಾಗಿ ಪೂರ್ವನಿರ್ಧಾರಿತ ಪ್ರಮಾಣಕ್ಕೆ ಸರಿಯಾಗಿ ನೀರಿನ ಹಂಚಿಕೆ ಆಗುವ ವ್ಯವಸ್ಥೆ ನಮಗೆ ಬೇಕು. ಈ ವರ್ಷವೂ ಸೇರಿದಂತೆ ಪದೇಪದೇ ತೋರಿಬರುವ ಸಮಸ್ಯೆಗೆ ದೀರ್ಘ ಕಾಲಾವಧಿಯ ಪರಿಹಾರ ಕಂಡುಕೊಳ್ಳಬೇಕಾದ ಅಗತ್ಯವನ್ನು ಎಲ್ಲರೂ ಮನಗಂಡಿದ್ದಾರೆ. ಕೇಂದ್ರ ಸರ್ಕಾರಕ್ಕೂ ಅದರ ಮನವರಿಕೆಯಾಗಿದೆ. ಆದರೆ ಸೂತ್ರವನ್ನು ದೃಢವಾಗಿ ಪ್ರತಿಪಾದಿಸಿದರೆ ಯಾವ ರಾಜ್ಯದಲ್ಲಿ ಎಷ್ಟು ಮತಗಳು ಕಡಿದುಹೋಗುತ್ತವೆಯೋ ಎಂಬ ಅಪ್ರಕಟಿತ ಭೀತಿಯಿಂದಾಗಿ ಪ್ರಶ್ನೆಯನ್ನು ಮುಂದೂಡುವ ಅನೈತಿಕ ಕ್ರಮ ನಮ್ಮ ಆಳುವ ವರ್ಗದ ಪದ್ಧತಿಯಾಗಿದೆ. ಬರಗಾಲವೆಂಬುದು ಯಾವುದೋ ಒಂದು ರಾಜ್ಯಕ್ಕೆ ಕಠಿಣವಾಗಿ, ಇನ್ನೊಂದು ರಾಜ್ಯಕ್ಕೆ ಅದರ ಪ್ರಭಾವವೇ ಇರಕೂಡದೆಂಬ ಲೆಕ್ಕಾಚಾರ ಮೂರ್ಖತನದ್ದು, ಐಕ್ಯತೆಯ ವಿರುದ್ಧವಾದದ್ದು ಮತ್ತು ಕಿತ್ತುಕೊಂಡು ತಿನ್ನುವ ಅಪಾಮಾರ್ಗದ್ದು. ಬರದ ಬೇಗೆಯನ್ನು ಹಂಚಿಕೊಳ್ಳಲು ಸಾಧ್ಯವಿಲ್ಲವೆಂಬ ನಿಲುವು ಪ್ರಕೃತಿ ನಿಯಮವು ನಮಗೆ ಅನ್ವಯವಾಗುವುದಿಲ್ಲವೆಂಬ ಹೇಳಿಕೆಗೆ ಸಮನಾದ್ದು. ಕುಡಿಯಲು ನೀರಿಲ್ಲದವನ ಮನೆಯಿಂದ ಶ್ರೀಮಂತ ಭೋಗಿಯು ಬಿಸಿನೀರು ಸ್ನಾನಕ್ಕಾಗಿ ಒಂದು ಹಂಡೆ ನೀರನ್ನು ಕೊಡಲು ಆಗ್ರಹಿಸಿದರೆ ಏನೆನ್ನಬೇಕು ? ನಿನಗೆ ಬರವಿದ್ದರೆ ನಾನೇನು ಮಾಡಲಿ, ನನಗೆ ಸಲ್ಲಬೇಕಾದ ಫಸಲನ್ನು ನೀಡಲೇಬೇಕೆಂದು ಬಲಾತ್ಕಾರ ಮಾಡುತ್ತಿದ್ದ ಭೂಮಾಲೀಕ ಮತ್ತು ಬ್ರಿಟನ್ನಿನ ವಸಾಹತು ಸರ್ಕಾರದ ದರ್ಪ ನೆನಪಿಗೆ ಬರುತ್ತದೆ. ಕೃಷ್ಣ ಕಲ್ಲು ಕಡಿಯುತ್ತಾ ಕಂಗಾಲಾಗಿರುವಾಗ ಜಯಾ ಬಂದು ಜಂಬೂಫಲ ಕೇಳುವ ಪ್ರಸಂಗ ಅಸಹ್ಯವಾಗಿದೆ. ನ್ಯಾಯಾಲಯವು ಗ್ರಹಿಸಬೇಕಾದ ವಸ್ತುಸ್ಥಿತಿ ಇದೇ. ನ್ಯಾಯಾಲಯಕ್ಕೆ ಸರಿಯಾದ ಮಾಹಿತಿ ನೀಡದೆ ಕೃಷ್ಣ ಸರ್ಕಾರ ಜನತೆಗೆ ಮೋಸ ಮಾಡಿದೆಯೆಂದು ಕೃತ್ರಿಮದ ಮಾತನ್ನಾಡುವ ಸೇಡಂ - ಯಡಿಯೂರಪ್ಪ ಪಕ್ಷ ನಾಚಿಕೆಯಿಂದ ಕುಗ್ಗಬೇಕು. ಇಡೀ ಲೋಕಕ್ಕೆ ಲಭ್ಯವಿರುವ ಮಾಹಿತಿ ನ್ಯಾಯಾಲಯಕ್ಕೆ ತಿಳಿಯದೆ ? ತಿಳಿಯದಿದ್ದರೆ ತಾನೇ ಸ್ವತಂತ್ರವಾಗಿ ಒಂದು ಧೀಮಂತರ ಗುಂಪನ್ನು ಕಳಿಸಿ ಪಡೆದುಕೊಳ್ಳಲು ಏನು ಅಡ್ಡಿಯಿದೆ? ಕರ್ನಾಟಕದಲ್ಲಿ ಒಂದು ಬೆಳೆಗೆ ನೀರು ಸಾಲದಿದ್ದರೂ ಪರವಾಗಿಲ್ಲ, ತಂಜಾವೂರಿನಲ್ಲಿ ಮೂರು ಬೆಳೆ ಆಗಲೇಬೇಕೆಂದು ಜಯಾ ಹಾಗೂ ನ್ಯಾಯಾಲಯ ತೀರ್ಮಾನಿಸಿದರೆ ಅದರರ್ಥ ಒಂದೇ: ಕರ್ನಾಟಕದಲ್ಲಿ ಬರ ಪರಿಸ್ಥಿತಿ ಇದೆಯೆಂಬುದನ್ನು ಗಮನಿಸಲು ಅವರು ಸಿದ್ಧರಿಲ್ಲ, ಎಂದು. ಇಂತಹ ತಿಳಿಗೇಡಿನ ಹಿನ್ನೆಲೆಯಲ್ಲಿ ರೈತರು ರೊಚ್ಚಿಗೇಳುವುದು, ಲಾಠಿ ಏಟು ತಿನ್ನುವುದು, ಪ್ರಾಣ ಕಳೆದುಕೊಳ್ಳುವುದು, ಮುಂತಾದ ಭೀಕರ ಪರಿಣಾಮಗಳುಂಟಾದರೆ ಭಾರತದ ಸಂವಿಧಾನವು ನಿರೂಪಿಸುವ ಸಂಯುಕ್ತ ರಾಜ್ಯಗಳ ರಾಷ್ಟ್ರವು ಭಗ್ನವಾಗುತ್ತದೆ. ಕೇಂದ್ರ ಸರ್ಕಾರಕ್ಕೆ ಇದರ ಪರಿವೆ ಇಲ್ಲದಾಗಿದೆ. ವಾಜಪೇಯಿ ತತ್ವದ ಪ್ರಕಾರ ಹಿಂದಿ-ಶ್ರೀರಾಮ-ಹಿಂದುತ್ವಗಳ ಪಾಕಗಳು ಭಾರತವನ್ನು ಬೆಸೆಯುತ್ತವೆಯೇ ಹೊರತು ವಿವಿಧ ರಾಜ್ಯಗಳ ಜನತೆಯ ಸುಖ-ದುಃಖಗಳ ಸಮಭಾಗಿತ್ವವಲ್ಲ. ಜಯಲಲಿತಾ ಬೆರಳಾಡಿಸಿದರೆ ಮಳೆ ಸುರಿಯುವಂತಿದ್ದರೆ ನೀರು ಹರಿಸಲು ಸುಲಭವಿರುತ್ತಿತ್ತು ; ಆದರೆ ಬರದ ಬೇಗೆಯನ್ನು ಗಮನಿಸಿ ಮೂರರ ಬದಲು ಎರಡೇ ಬೆಳೆಯಿಂದ ತೃಪ್ತರಾಗಬೇಕೆಂದು ಆಕೆಗೆ ಹೇಳಲು ಕೇಂದ್ರ ಸರ್ಕಾರ ಮತ್ತು ನ್ಯಾಯಾಲಯ ಹಿಂಜರಿಯಬೇಕೇ ? ಈಗ ಸಂಗ್ರಹವಾಗಿರುವ ನೀರನ್ನು ಮುಂದಿನ ಮಳೆಗಾಲದವರೆಗೆ ನಾವೆಲ್ಲಾ ಆಶ್ರಯಿಸಬೇಕಾಗಿದೆಯೆಂಬ ಪ್ರಾಥಮಿಕ ತಿಳುವಳಿಕೆ ಇಲ್ಲದಿದ್ದರೆ ಯಾವ ಕಾನೂನು ಏನು ಮಾಡೀತು ! ನೀರನ್ನು ಹಂಚಿಕೊಳ್ಳುವಂತೆ ಬರವನ್ನೂ ಹಂಚಿಕೊಳ್ಳ ಬೇಕಾಗಿದೆ ಎಂಬ ಅತಿ ಸಾಮಾನ್ಯ ಭಾವನೆಯೆದುರು ಸಂವಿಧಾನದ ಪಾಂಡಿತ್ಯವೆಲ್ಲಾ ಸೋಲಬೇಕಾಗುತ್ತದೆ. ಕಾವೇರಿ ನೀರಿನ ಹಂಚಿಕೆಯ ಸಮಸ್ಯೆಯ ಪರಿಹಾರದಲ್ಲಿ ಇದೇ ಮೂಲಸೂತ್ರವಾಗಬೇಕಾದ್ದು ಅನಿವಾರ್ಯ. ಪರಿಸ್ಥಿತಿ ಹೀಗಿರುವಾಗ ಬೆಂಗಳೂರು-ಮೈಸೂರು ಹೆದ್ದಾರಿ ನಿರ್ಮಿಸಿ, ಹಾದಿಯಲ್ಲಿ ಐದು ಉಪನಗರಗಳನ್ನು ಕಟ್ಟಬೇಕೆಂಬ ತೀರ್ಮಾನ ಎಷ್ಟು ಜನವಿರೋಧಿ ಎಂಬುದು ಸ್ಪಷ್ಟವಾಗಿದೆ. ಆ ನಗರಗಳಿಗೆ ಕಾವೇರಿ ನೀರು ಕೊಡಬೇಕೆಂದು ನೈಸ್ ಕಂಪೆನಿ ಹೇಳುತ್ತದೆ, ಕೃಷ್ಣ ತಲೆದೂಗುತ್ತಾರೆ !

ಕಾವೇರಿ ವಿವಾದದ ಸಂದರ್ಭದಲ್ಲಿ ಈ ಬಾರಿ ಒಂದು ಅಹಿತಕರ ಪ್ರವೃತ್ತಿ ಎದ್ದು ಕಾಣುತ್ತಿದೆ. ಅದನ್ನು ಗಮನಿಸದ ಜಾಣತನ ನಮ್ಮ ರಾಜಕೀಯ ನಾಯಕರದ್ದು. ಕಾವೇರಿ ನೀರಿನ ಬಗ್ಗೆ ನಾವು ರಾಜ್ಯದ ಪರವೆಂದು ಸಾಬೀತು ಮಾಡಲು ಪ್ರದರ್ಶನ ಕಲೆಯಲ್ಲಿ ನಿಪುಣರಾಗುವ ದಾರುಣ ಸನ್ನಿವೇಶ ಬಹಳ ಅಪಾಯಕಾರಿ. ದಲಿತರು, ಕ್ರೈಸ್ತರು, ಮುಸಲ್ಮಾನರು ಮತ್ತು ತಮಿಳರು ಪ್ರತ್ಯೇಕವಾಗಿ ಮೆರವಣಿಗೆಗಳಲ್ಲಿ ಬಂದು ತಮ್ಮ ರಾಜ್ಯನಿಷ್ಠೆಯನ್ನು ಪ್ರದರ್ಶಿಸಿದ್ದು ಕೇವಲ ಆಕಸ್ಮಿಕವಲ್ಲ. ಅಂತಹ ಸೂಕ್ಷ್ಮ ಒತ್ತಡಗಳು ನಮ್ಮಲ್ಲಿ ಹೆಚ್ಚುತ್ತಿವೆ. ಇದು ತೀರಾ ಅನಾರೋಗ್ಯಕರವಾದದ್ದು. ನೇರವಾಗಿ ಇದು ನರೇಂದ್ರ ಮೋದಿಗೆ ಸಂಬಂಧಿಸಿಲ್ಲ ; ಆದರೆ ಆತನ ಉಸಿರಿನ ಕಾವು ಇಲ್ಲಿ ಕೆಲಸ ಮಾಡುತ್ತಿದೆ. ಗುಜರಾತಿನಲ್ಲಿ ''ಗೌರವ ಯಾತ್ರೆ'' ನಡೆದರೆ ಅದರ ಜ್ವಾಲೆ ಕೃಷ್ಣರಾಜನಗರ- ಹರಪನಹಳ್ಳಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಗಣೇಶನನ್ನು ನೀರಿಗೆ ಸೇರಿಸುವಾಗ ಒಂದೆರಡು ತುಪಾಕಿಗಳು ಸಿಡಿಯದಿದ್ದರೆ ಹೇಗೆ ! ಮತ್ತು ಒಂದಷ್ಟು ಅಂಗಡಿಗಳು ಭಸ್ಮವಾಗದಿದ್ದರೆ ಭಕ್ತಿಯ ಆವೇಶ ಬಹಿರಂಗಗೊಳ್ಳುವುದು ಹೇಗೆ ? ಯಾವುದೋ ಪ್ರಕೃತದ ಕಾರಣದಿಂದ ಭುಗಿಲೇಳುವುದಕ್ಕಿಂತಲೂ ಹಿಂದಿನ ಘಟನೆಗಳ ಸ್ಮರಣೆಯ ನೆರಳಿನಲ್ಲಿ ಬೆಂಕಿ ಹೊತ್ತಿಕೊಳ್ಳುವುದು ಇಂದಿನ ಪರಿಪಾಠವಾಗಿದೆ. ಗೋಧ್ರಾ ಮತ್ತು ನಂತರದ ಪಾತಕಗಳನ್ನು ವಾಜಪೇಯಿಯವರು ನ್ಯೂಯಾರ್ಕಿನಲ್ಲಿ ನಾಚಿಕೆಗೇಡು ಎಂದು ಬಣ್ಣಿಸಿ, ದೆಹಲಿಗೆ ತಲುಪಿದ ಮೇಲೆ ಮೋದಿಯ ಧರ್ಮನಿಷ್ಠೆಯನ್ನು ಹೊಗಳುತ್ತಾರೆ. ಆ ಬೌದ್ಧಿಕ ಕ್ಷಯದ ವಾಸನೆ ಇಡೀ ದೇಶದಲ್ಲಿ ಹಬ್ಬಿ ಮಾರಣಾಂತಿಕ ವಿಘಟನೆಗಳು ಕಾಣಿಸಿಕೊಳ್ಳುತ್ತಿವೆ. ಕಾಶ್ಮೀರದಲ್ಲಿ ಚುನಾವಣೆ ನಡೆಸಿದೆವೆಂದು ಡಂಗೂರ ಹೊಡೆಯುತ್ತೇವೆ, ಆದರೆ ಅಲ್ಲಿಯ ಜನಗಳ ಆಶಯ ಅಪ್ರಸ್ತುತವಾಗುತ್ತದೆ. ಅಲ್ಲೂ ಪ್ರದರ್ಶನ ಕಲೆಯದ್ದೇ ಹಾವಳಿ : ವಿದೇಶಿ ರಾಯಭಾರಿಗಳು ಮತಕಟ್ಟೆಗೆ ಹೋಗಿ ನೋಡಬೇಕು, ಎಲ್ಲಾ ಅಮೋಘವಾಗಿದೆ ಎನ್ನಬೇಕು, ಆಗಲೇ ನಮಗೆ ತೃಪ್ತಿ. ಕಾಶ್ಮೀರದ ನಾಗರಿಕನ ಮಾನಸಿಕ ತುಮುಲ ನಮಗೆ ಕಾಣುವುದಿಲ್ಲ, ಯಾವನೋ ವಿದೇಶ ಪ್ರತಿನಿಧಿ ನಮಗೆ ದೊಡ್ಡವನಾಗುತ್ತಾನೆ. ಸಚಿವರೊಬ್ಬರು ಶಾಂತಿಗಾಗಿ ಪಾದಯಾತ್ರೆ ನಡೆಸುತ್ತಿದ್ದಾಗಲೇ ಕೃಷ್ಣರಾಜನಗರದಲ್ಲಿ ಹಿಂಸೆಯು ತಾಂಡವವಾಡಿತೆಂದರೆ ನಮ್ಮ ಸಂಸ್ಕೃತಿ ಯಾವ ಮಟ್ಟದಲ್ಲಿದೆ ಎಂಬುದನ್ನು ಅಳೆಯಲು ಸಾಧ್ಯ. ವಾಜಪೇಯಿ ಪರಿವಾರದವರು ಕ್ರಮೇಣ ನಮ್ಮ ದೇಶವನ್ನು ಹಿಟ್ಲರ್ ಮಾದರಿಯತ್ತ ನೂಕುತ್ತಿದ್ದಾರೆಂಬುದಕ್ಕೆ ಇನ್ನೂ ನಿದರ್ಶನಗಳು ಬೇಕೆ ?

ಈಚಿನ ಇನ್ನೊಂದು ಪದ್ಧತಿ ನೋಡಿ : ಕ್ರಿಕೆಟ್ ಪಂದ್ಯವೊಂದರಲ್ಲಿ ಭಾರತದ ದಾಂಡಿಗರು ಗೆದ್ದಾಗ ಪಟಾಕಿ ಸಿಡಿಸುವುದು ಸಾಲದು ; ಪಾಕಿಸ್ತಾನದವರು ಸೋತಾಗಲೂ ಸಿಡಿಸಬೇಕು ! ರಾಷ್ಟ್ರದ ಮನಸ್ಸು ಎಷ್ಟು ಕೊಳೆಯಿಂದ ತುಂಬಬಹುದೆಂಬುದು ಅರಿವಿಗೆ ಬರುತ್ತಿದೆ. ಹಾಕಿ ಪಂದ್ಯದಲ್ಲಿ ಭಾರತವು ಪಾಕಿಸ್ತಾನವನ್ನು ಸೋಲಿಸಿದಾಗ ಪಟಾಕಿ ಸಿಡಿಸಲಿಲ್ಲ. ಏಕೆಂದರೆ, ಧನರಾಜ ಪಿಳ್ಳೆ ಎಂದೂ ಸಚಿನ್ ತೆಂಡೂಲ್ಕರನಷ್ಟು ಹಣ ದೋಚಲಿಲ್ಲವಲ್ಲಾ, ಅದಕ್ಕೆ. ನಮ್ಮ ಕ್ರಿಕೆಟ್ ಪಿಶಾಚಿ ಒಂದು ರಾಷ್ಟ್ರೀಯ ಲಾಂಛನವೆಂಬಂತೆ ಬೆಳೆದಿದೆ; ಆಡುವುದಕ್ಕಿಂತಲೂ ಹಣ ಆರಿಸಿಕೊಳ್ಳುವುದು ನಮ್ಮ ದಾಂಡಿಗರ ಆಕಾಂಕ್ಷೆ. ಕೊಲಂಬೋದಲ್ಲಿ ನಡೆದ ಚಾಂಪಿಯನ್ಸ್ ಟ್ರೋಫಿಯ ಎಲ್ಲ ಪಂದ್ಯಗಳ ವೀಕ್ಷಕ ವಿವರಣೆ ಆಕಾಶವಾಣಿಯಲ್ಲಿ ಏಕೆ ಬೇಕಿತ್ತು? ಭಾವೋದ್ರೇಕವನ್ನು ಮಡುಗಟ್ಟಿಸುವುದ

ಕ್ಕಾಗಿ. ಇದರಲ್ಲಿ ದೂರದೃಷ್ಟಿಯ ಕೊರತೆಯಿದೆ.

ತನ್ನ ರಾಜಕೀಯ ಭವಿಷ್ಯದ ಚಿಂತೆ ಕಾಡುತ್ತಿರುವಾಗ ಜಾರ್ಜ್ ಫರ್ನಾಂಡೀಸ್ ಇಂತಹ ಮರ್ಮಗಳತ್ತ ಗಮನ ನೀಡುವುದಿಲ್ಲ; ಅಡ್ವಾನಿ ಪರಿವಾರದ ಪರಾಕು ಹೇಳುವುದಷ್ಟೇ ಆತನ ರಾಜಕೀಯ ಕ್ರಿಯೆಯಾಗಿದೆ. ಪೆಟ್ರೋಲ್ ಕಂಪನಿಗಳಲ್ಲಿ ಸರ್ಕಾರದ ಬಂಡವಾಳವನ್ನು ಹಿಂತೆಗೆಯುವುದು ದೇಶದ ರಕ್ಷಣೆಗೆ ಮಾರಕವೆಂದು ಒದರುವುದು ಕೂಡ ಒಂದು ಕೀಳುಮಟ್ಟದ ನಾಟಕವೇ ಅವರಿಗೆ. ಸಾರ್ವಜನಿಕ ಸಂಪತ್ತಿನ ಲೂಟಿಯು ದೇಶಕ್ಕೆ ಮಾರಕವೆಂದು ಶೌರಿಗೆ ಹೇಳಲು ಈ ಜಾರ್ಜ್‌ಗೆ ಮೂರು ವರ್ಷ ಬೇಕಾಯಿತು! ಲಾಭದಾಯಕ ಬಾಲ್ಕೋ ಲೂಟಿಯಾದಾಗ ಇವರೇಕೆ ಬಾಯಿ ಬಿಡಲಿಲ್ಲವೆಂಬುದು ಎಲ್ಲರ ಪ್ರಶ್ನೆ. ಹೋಗಲಿ, ವಿಶ್ವಸಂಸ್ಥೆಯ ಅಧಿವೇಶನದಲ್ಲಿ ಪ್ರಧಾನಿ ವಾಜಪೇಯಿ ಅಷ್ಟು ಅಪಕ್ವವಾದ ಭಾಷಣ ನೀಡಿ ಬಂದರಲ್ಲಾ, ಅದರ ಬಗ್ಗೆ ಜಾರ್ಜ್ ಬಣ ಏನು ಹೇಳುತ್ತದೆ? ಹಿಂದಿಯಲ್ಲಿ ಮಾತನಾಡಿದೆನೆಂಬ ಹೆಮ್ಮೆ ಒಂದನ್ನುಳಿದು ವಾಜಪೇಯಿಯವರಿಗೆ ತಮ್ಮ ಭಾಷಣದಲ್ಲಿ ಏನು ಕಂಡಿತೋ ತಿಳಿಯದು. ಆದರೆ ೧೯೦ ರಾಷ್ಟ್ರಗಳ ಪ್ರತಿನಿಧಿಗಳಿಗೆ ಕಂಡಿದ್ದು ಒಂದು ದೊಡ್ಡ ಸೊನ್ನೆ. ವಿಶ್ವಸಂಸ್ಥೆಯ ಜವಾಬ್ದಾರಿ, ಅದಕ್ಕೆ ಅಮೆರಿಕಾದಿಂದ ಒದಗಿರುವ ವಿಪತ್ತು, ಅದನ್ನೆದುರಿಸಲು ಭಾರತದ ನಿಷ್ಠೆ ಇತ್ಯಾದಿಗಳನ್ನು ವಿಶದೀಕರಿಸುವುದನ್ನು ಬಿಟ್ಟು, ವಿಶ್ವವೆಂದರೆ ಬುಶ್ ಮತ್ತು ಮುಶರಾಫ್ ಎಂಬಂತೆ ವ್ಯವಹರಿಸಿದ್ದು ಯಾರಿಗೆ ಶೋಭೆ ತರುತ್ತದೆ ? ಇರಾಕಿಗೆ ಸಂಬಂಧಿಸಿದಂತೆ ಬುಶ್ ವಿಶ್ವಸಂಸ್ಥೆಗೆ ಸವಾಲೆಸೆದಿದ್ದಾಗ ವಿಶ್ವಸಂಸ್ಥೆಯ ಪರವಾಗಿ ಬುಶ್‌ಗೆ ಸವಾಲೆಸೆಯುವುದು ಭಾರತದ ಕರ್ತವ್ಯವಾಗಿತ್ತು. ನಮ್ಮ ದೇಶದ ಗೌರವ ಇರುವುದು ಅದರಲ್ಲಿ, ಮುಶರಾಫ್‌ನಿಂದ ನಮ್ಮ ದೇಶವನ್ನು ಕಾಪಾಡುವಂತೆ ಬುಶ್ ಬಳಿ ಅಂಗಲಾಚುವುದರಲ್ಲಿ ಅಲ್ಲ. ರಾಷ್ಟ್ರೀಯತೆಯ ಮಾತನ್ನು ಹಗುರವಾಗಿ ಆಡುವ ವಾಜಪೇಯಿ ಪರಿವಾರದವರಿಗೆ ರಾಷ್ಟ್ರದ ಸಾರ್ವಭೌಮತ್ವ ಗೌಣವಾಗಿದೆ. ಕಾಶ್ಮೀರದ ಉಗ್ರಗಾಮಿಗಳು ಭಾರತದ ಸ್ವಾತಂತ್ರ್ಯ ಹೋರಾಟದ ಪರಂಪರೆಗೆ ಹೊರತಾದವರೆಂದು ವಾಜಪೇಯಿ ನ್ಯೂಯಾರ್ಕಿನಲ್ಲಿ ಹೇಳಿದರೆಂದು ವರದಿಯಾಗಿದೆ. ತಮ್ಮ ಪರಿವಾರದ ಪೂರ್ವಾಶ್ರಮದ ಕೃತಿಗಳನ್ನು ಪರಾಮರ್ಶೆ ಮಾಡಿಕೊಳ್ಳುವುದು ವಾಜಪೇಯಿಯವರಿಗೆ ಆರೋಗ್ಯಕರವೆಂದು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ.

ಇನ್ನೆರಡು ವಿಷಯಗಳ ಪ್ರಸ್ತಾಪ ಅಗತ್ಯವೆನಿಸುತ್ತದೆ: ಶಿಕ್ಷಣ ಪಠ್ಯಕ್ರಮದಲ್ಲಿ ಮುರಳಿ ಮನೋಹರ ಜೋಶಿ ನೇತೃತ್ವದಲ್ಲಿ ನಡೆಯುತ್ತಿರುವುದು ಸಂವಿಧಾನದ ಪರಿಧಿಯನ್ನು ಮೀರಿಲ್ಲವೆಂದು ನ್ಯಾಯಾಲಯ ಘೋಷಿಸಿರುವುದರ ಹಿನ್ನೆಲೆಯನ್ನು ನಿಖರವಾಗಿ ವ್ಯಾಖ್ಯಾನಿಸಿಕೊಳ್ಳಬೇಕು. ನ್ಯೂಯಾರ್ಕಿನಲ್ಲಿ ಸ್ವ-ಪರಿವಾರದ ನಡುವೆ ವಿಜೃಂಭಿಸುತ್ತಾ ಪ್ರಧಾನಿ ಹೇಳಿದರಂತೆ: ''ಕೇಸರೀಕರಣವೆ ? ಅದರಲ್ಲಿ ತಪ್ಪೇನು ! ಕೇಸರಿ ಬದಲು ಕಪ್ಪು, ಕೆಂಪು, ಇರಬೇಕಿತ್ತೇನು ?'' ಯಾವ ಮತಿಭ್ರಷ್ಟನೂ ಹೇಳಲಾರದ್ದನ್ನು ವಾಜಪೇಯಿ ಹೇಳಿದ್ದಾರೆಂದರೆ ಕಳಂಕ ಮೆತ್ತಿಕೊಳ್ಳುವುದು ಯಾರಿಗೆ ? ಇಷ್ಟಕ್ಕೂ, ಇಂತಹ ವಿಷಯಗಳು ನ್ಯಾಯಾಲಯದಲ್ಲಿ ತೀರ್ಮಾನವಾಗುವುದೇ ಒಂದು ಸೋಜಿಗದ ಸಂಗತಿ. ಈಗ ಇನ್ನಾರೋ ನ್ಯಾಯಾಲಯದ ಮೆಟ್ಟಿಲು ಹತ್ತಿ ಜ್ಯೋತಿಷ್ಯವನ್ನು ವಿಶ್ವವಿದ್ಯಾಲಯಗಳಲ್ಲಿ ಬೋಧಿಸುವುದು ತರವಲ್ಲವೆಂದು ವಾದಿಸುತ್ತಿದ್ದಾರೆ. ನ್ಯಾಯಾಲಯ ಏನೇ ಹೇಳಿದರೂ ಜ್ಯೋತಿಷ್ಯದ ಯೋಗ್ಯತೆಯಲ್ಲಿ ಬದಲಾವಣೆ ಬರಲು ಸಾಧ್ಯವೆ ? ಸಾರ್ವಜನಿಕ ಚರ್ಚೆಯ ಜಾಗದಲ್ಲಿ ನ್ಯಾಯಾಲಯದ ಅಧಿಕಾರವನ್ನು ಸ್ಥಾಪಿಸಿದರೆ ಸಮಸ್ಯೆ ಬಗೆಹರಿಯುತ್ತದೆಯೆ ? ಇದು ಈ ತಿಂಗಳ ಪ್ರಶ್ನೆ ಮಾತ್ರವಲ್ಲ, ಬರುವ ತಿಂಗಳುಗಳಲ್ಲಿ ಇದಕ್ಕೆ ಒಮ್ಮತದ ಅಭಿಪ್ರಾಯ ರೂಢಿಸಿಕೊಳ್ಳಬೇಕು.

ಸೆಪ್ಟೆಂಬರ್ ೧೧ರಂದು ಅಮೆರಿಕಾ ತನ್ನ ನಾಟಕೀಯ ಭಾವುಕತೆಯನ್ನು ಪ್ರದರ್ಶಿಸಿತು. ಕಳೆದ ವರ್ಷ ಆ ದಿನದಂದು ವಿಶ್ವವು ಪೂರ್ಣವಾಗಿ ಬದಲಿಸಿತೆಂದು ಬುಶ್ ಅಂಬೋಣ. ಆತ ಹೇಳಿದ್ದನ್ನೆಲ್ಲಾ ಪ್ರತಿಧ್ವನಿಸುವ ವಂದಿಮಾಗಧರು ಹೇರಳವಾಗಿದ್ದಾರಾದ್ದರಿಂದ ಅದು ನಿಜವೆಂಬ ಭ್ರಾಂತಿ ಮೂಡುತ್ತಿದೆ. ನಿಜವಾಗಿ ನೋಡಿದರೆ, ಅಮೆರಿಕಾ ಅವರಿಗೆ ಮಾಡಿರದಿದ್ದ ಯಾವ ಭಯೋತ್ಪಾದಕ ಕೃತ್ಯ ಅಂದು ಜರುಗಿತು? ಹಲವು ದೇಶಗಳನ್ನು ನಾಶ ಮಾಡಿದ ಅಮೆರಿಕಾ ಅನುಭವಿಸಿದ್ದು ಕೇವಲ ಎರಡು ಕಟ್ಟಡಗಳ ವಿನಾಶವನ್ನು, ಅದರಲ್ಲೂ ಪೆಂಟಗನ್ ಭಾಗಶಃ ಮಾತ್ರ ಜಖಂಗೊಂಡಿತು. ಸತ್ತವರ ಸಂಖ್ಯೆ ಮೂರು ಸಾವಿರ. ಅಮೆರಿಕಾ ಸಾಯಿಸಿರುವುದು ಮೂರು ಕೋಟಿ ಆಗಬಹುದು ! ಅಂದು ಪರ್ಲ್ ಹಾರ್ಬರ್ ರಕ್ಷಿಸಿಕೊಳ್ಳದೆ ಮೈ ಪರಚಿಕೊಂಡು, ಆಮೇಲೆ ಹಿರೋಷಿಮಾ- ನಾಗಾಸಾಕಿಗಳನ್ನು ಬೂದಿ ಮಾಡಿದ ಅಮೆರಿಕಾ ಇಂದು ಎರಡು ಕಟ್ಟಡಗಳನ್ನು ರಕ್ಷಿಸಿಕೊಳ್ಳಲಾರದೆ ಮೂಗು ಜಜ್ಜಿಸಿಕೊಂಡು ಈಗ ಇರಾಕನ್ನು ನಿರ್ನಾಮ ಮಾಡಲು ಸಜ್ಜಾಗುತ್ತಿದೆ. ಇಂತಹ ಬಿಕ್ಕಟ್ಟಿನಲ್ಲಿ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳಲ್ಲಿ ರಷ್ಯ ಮತ್ತು ಚೈನಾ ಯಾವ ನಿಲುವು ತಾಳುತ್ತವೆಂಬುದು ಅತಿಮುಖ್ಯ. ನರಸತ್ತ ಇಲಿಗಳಂತೆ ಚೀಂವ್-ಚೀಂವ್ ಮಾಡುತ್ತವೋ, ಘನತೆವೆತ್ತ ಸಂಪ್ರದಾಯವನ್ನು ಜೀವಂತಗೊಳಿಸುತ್ತವೋ, ಎಂಬುದು ಇಂದಿನ ಪ್ರಶ್ನೆ. ಮಾನವೀಯ ಮೌಲ್ಯಗಳಿಗಿಂತ ಮಾರುಕಟ್ಟೆಯ ಮೋಹ ಬಲವಾದರೆ ಅಮೆರಿಕಾದ ಎಗ್ಗಿಲ್ಲದ ದೌರ್ಜನ್ಯ ನೂರುಪಟ್ಟು ಹೆಚ್ಚುತ್ತದೆ.

* * *

ವೀರಪ್ಪನ್ ಈ ಸಲ ನಾಗಪ್ಪನವರನ್ನು ಅತಿಥಿಯನ್ನಾಗಿ ಮಾಡಿಕೊಂಡಿದ್ದಾನೆ. ಕಲ್ಲು ಮತ್ತು ಕಳ್ಳು, ಇವೆರಡರ ವ್ಯಾಪಾರದಲ್ಲಿ ಹಣ ದೋಚುತ್ತಿರುವ ಭಾರಿ ತಿಮಿಂಗಿಲಗಳಿರುವ ಕರ್ನಾಟಕದಲ್ಲಿ ಆ ವ್ಯಾಪಾರತಂತ್ರದಲ್ಲಿ ಮುಳುಗಿರುವವರೇ ಯಾರಾದರೂ ವೀರಪ್ಪನ ಜೊತೆ ಸಂಧಾನಕ್ಕೆ ತೆರಳಬೇಕಲ್ಲವೇ ? ಅಥವಾ ಮಾತೆ ಮಹಾದೇವಿಯವರೂ ಆಗಬಹುದೆ ? ಹಾಗೆ ನೋಡಿದರೆ, ನಿವೃತ್ತರಾಗುವ ತಿಂಗಳಲ್ಲಿ ಕಾಡಿನಲ್ಲಿ ಬೀಡು ಬಿಟ್ಟು ಪೌರುಷ ಪ್ರದರ್ಶಿಸಿದ ವಿ. ವಿ. ಭಾಸ್ಕರ್ ಮೊದಲು ಮಾನ್ಯ ನಟಸಾರ್ವಭೌಮ ಡಾ|| ರಾಜಕುಮಾರ್ ಅವರನ್ನು ಸಂದರ್ಶಿಸಿದ್ದರೆ ಅರ್ಥವತ್ತಾಗಿರುತ್ತಿತ್ತು. ಹಣದ ವಿಷಯವಾಗಲಿ, ಯಾವ ಎಸ್ಟೇಟ್‌ನಲ್ಲಿ ನಾಗಪ್ಪನವರನ್ನು ಇರಿಸಿರಬಹುದೆಂಬುದಾಗಲಿ, ಕಾಡಿನ ಕಳ್ಳದಾರಿಗಳಾಗಲಿ, ರಾಜಕುಮಾರ್ ಅವರಿಗೆ ತಿಳಿದಿರುವಷ್ಟು ಭಾಸ್ಕರ್‌ಗೆ ತಿಳಿದಿದೆಯೆ? ಒಂದು ಚಿಕ್ಕಾಸನ್ನೂ ವೀರಪ್ಪನಿಗೆ ಕೊಡದೆ ಡಾ|| ರಾಜ್ ಅವರನ್ನು ''ಬಿಡಿಸಿಕೊಂಡು ಬಂದ ಹೆಗ್ಗಳಿಕೆ'' ಇರುವ ಮುಖ್ಯಮಂತ್ರಿ ಕೃಷ್ಣ ೧೦೮ ದಿನಗಳೊಳಗಾಗಿ ನಾಗಪ್ಪನವರನ್ನು ಹಿಂದಕ್ಕೆ ಕರೆತರುವ ಭರವಸೆ ವ್ಯಕ್ತಪಡಿಸಿದ್ದಾರೆ. ಅವರಿಗೂ ನಾಗಪ್ಪನವರಿಗೂ ಶುಭ ಹಾರೈಸುವುದಷ್ಟೇ ನಮಗೆ ಸಾಧ್ಯವಿರುವುದು. ಆದರೆ ಇದರಲ್ಲೂ ಒಕ್ಕಲಿಗ-ಲಿಂಗಾಯತ ಎಂಬ ಭೇದ, ಧೋರಣೆ ಕೊಳ್ಳೇಗಾಲದಲ್ಲಿ ಮನೆಮಾತಾಯಿತು. ಹೀನತೆಯೆಂಬುದು ನಮ್ಮ ರಾಜ್ಯದಲ್ಲಿ ಎಷ್ಟು ವ್ಯಾಪಕವಾಗಿದೆಯೆಂಬುದನ್ನು ಕಂಡು ಇನ್ನಾದರೂ ನಾವು ಎಚ್ಚರಗೊಳ್ಳಬೇಕಾಗಿದೆ. ಅಂದ ಹಾಗೆ, ನಮ್ಮ ರಾಜ್ಯದಿಂದ ರಾಜ್ಯಸಭೆಗೆ ಆಯ್ಕೆಯಾಗಿರುವ ವೆಂಕಯ್ಯ ನಾಯ್ಡು ತಮಿಳುನಾಡಿನ ಕರುಣಾನಿಧಿ – ಜಯಲಲಿತಾ – ರಾಮದಾಸ್ ಎಲ್ಲರಿಗೂ ಪ್ರಿಯವಾದವರು. ಅವರನ್ನೇ ಸಂಧಾನಕಾರರನ್ನಾಗಿ ವೀರಪ್ಪನ್ ಬಳಿಗೆ ಕಳಿಸಲು ಮುಖ್ಯಮಂತ್ರಿಗಳು ಹಾಗೂ ವಿರೋಧ ಪಕ್ಷದ ನಾಯಕರು ತೀರ್ಮಾನಿಸಬಹುದು. ಭೂಮಿಚೋರರು ದಂತಚೋರರಿಗೆ ಬುದ್ಧಿ ಹೇಳಬಲ್ಲರೆ, ಎಂಬಂತಹ ಸಂಶಯಗಳಿಗಿದು ಕಾಲವಲ್ಲ.

೧೮-೯-೨೦೦೨

### ಸಾರ್ವಜನಿಕ ನಿಷ್ಕ್ರಿಯತೆ !

ಮುಂಬೈನ ಸ್ಥಳೀಯ ರೈಲಿನಲ್ಲಿ ಒಬ್ಬ ಹೆಣ್ಣುಮಗಳ ಮೇಲೆ ಯಾವನೋ ಗೂಂಡಾರಾಜ ಅತ್ಯಾಚಾರವೆಸಗಿದ್ದು ನಿಮಗೆ ತಿಳಿದಿದೆಯಲ್ಲವೆ ? ಇದು ನಡೆದಾಗ ಆ ರೈಲಿನ ಡಬ್ಬಿಯಲ್ಲಿ ಐದಾರು ಜನ ಬೇರೆಯವರಿದ್ದರು. ಆದರೆ ಬಲಾತ್ಕಾರಕ್ಕೆ ಒಳಗಾಗುತ್ತಿದ್ದ ಹೆಣ್ಣುಮಗಳ ರಕ್ಷಣೆಗೆ ಅವರೇನೂ ಮಾಡಲಿಲ್ಲ. ಆ ಐದು ಮಂದಿ ಒಟ್ಟಾಗಿ ಆ ದುರುಳನನ್ನು ಬಡಿಯಬಹುದಾಗಿತ್ತು, ರೈಲಿನಿಂದ ಹೊರದಬ್ಬಬಹುದಾಗಿತ್ತು, ಕನಿಷ್ಠ ಚೈನು ಎಳೆದು ರೈಲನ್ನು ನಿಲ್ಲಿಸಬಹುದಾಗಿತ್ತು ಎಂದು ನಿಮಗನಿಸುತ್ತದೆಯೆ ? ಸಾರ್ವಜನಿಕ ನಿಷ್ಕ್ರಿಯತೆಗೆ ಇದೊಂದೇ ಉದಾಹರಣೆಯಲ್ಲ, ಇಂಥ ಬೇರೆ ಘಟನೆಗಳು ಜರುಗುತ್ತಲೇ ಇರುತ್ತವೆ, ಅವುಗಳಲ್ಲಿ ಕೆಲವು ವರದಿಯಾಗುತ್ತವೆ. ನಾಳೆ ನಮ್ಮ ಮಕ್ಕಳು ಶಾಲೆಗೆ ಹೋಗುತ್ತಿರುವಾಗ ಅವರ ಪುಸ್ತಕಗಳನ್ನು, ತಿಂಡಿಯ ಡಬ್ಬಿಯನ್ನು, ಯಾವನೋ ಕಿತ್ತುಕೊಳ್ಳಲು ಬಂದರೆ ಜನ ಮೂಕಪ್ರೇಕ್ಷಕರಾಗಿರಬೇಕೆ ? ಇಂತಹ ಘಟನೆಗಳು ಏಕೆ ಹೆಚ್ಚುತ್ತಿವೆ ಮತ್ತು ಸಾರ್ವಜನಿಕರು ಏಕೆ ಮಧ್ಯಪ್ರವೇಶ ಮಾಡದೆ ತೆಪ್ಪಗಿರುತ್ತಾರೆ ಎಂಬುದಕ್ಕೆ ಹಲವು ಉತ್ತರಗಳಿರಬಹುದು. ಈ ಬಗ್ಗೆ ನಿಮ್ಮ ವಿಶಿಷ್ಟ ಅನುಭವ-ಅಭಿಪ್ರಾಯಗಳೇನಾದರೂ ಇವೆಯೆ ? ಸುಮಾರು ಇನ್ನೂರು ಪದಗಳಲ್ಲಿ ಅದನ್ನು ಬರೆದು ನಮ್ಮ ಪತ್ರಿಕೆಗೆ ಕಳಿಸಿ. ಆಯ್ದ ಕೆಲವು ಬರಹಗಳನ್ನು ನಮ್ಮ ಜನವರಿ ೨೦೦೩ರ ವಾರ್ಷಿಕ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ ಮತ್ತು ಪುಸ್ತಕ ರೂಪದಲ್ಲಿ ಕೆಲವು ಬಹುಮಾನಗಳನ್ನು ನೀಡುತ್ತೇವೆ. ಬರಹಗಳು ಇದೇ ಅಕ್ಟೋಬರ್ ೨೫ರೊಳಗಾಗಿ 'ಹೊಸತು' ಕಾರ್ಯಾಲಯಕ್ಕೆ ತಲುಪುವಂತಿರಲಿ.

*– ಸಂಪಾದಕ*




ದಮಯಂತಿ ನರೇಗಲ್ ಅವರ ಕಥೆ 'ಅಡುಗೆಯ ಒಲೆಗಳು' ಓದಿದಾಗ ಮನಸ್ಸು ಮೂಕವಾಯ್ತು. ನಾನು ವಿದ್ಯಾರ್ಥಿನಿಯಾಗಿದ್ದಾಗ 'ಪಾತ್ರೆಯ ಅಡಿ ಭಾಗದ ಮಸಿ ತೊಳೆಯುವವರಿಗೆ ವಿದ್ಯೆ ಯಾಕೆ ?' ಎಂಬ ನುಡಿಗಟ್ಟು ಎಲ್ಲೆಡೆ ಕೇಳಿ ಬರುತ್ತಿತ್ತು. ಹೆಣ್ಣು ಇಂದು ಎಷ್ಟೇ ವಿದ್ಯಾವಂತಳಿದ್ದರೂ ಅವಳಿಗೆ ಈ ಮಸಿ ತೊಳೆಯುವ ಕೆಲಸ ತಪ್ಪದಲ್ಲಾ ಎಂಬ ಚಿಂತೆ ಕಾಡುತ್ತಿದೆ. ಹಿಂದೆ, ಮನೆ ಹೊರಗಿನ ಕೆಲಸ ಗಂಡಸಿಗೆ, ಒಳಗಿನದ್ದು ಹೆಂಗಸಿಗೆ ಎಂದು ವಿಭಾಗಿಸಿದ್ದರು. ಇಂದು ಹೆಂಗಸು, ಗಂಡಸು ಮಾಡುವ ಕೆಲಸಗಳನ್ನು ಅಷ್ಟೇ ಅಥವಾ ಅದಕ್ಕೂ ಹೆಚ್ಚಿನ ರೀತಿಯಲ್ಲಿ ಮಾಡಿದರೂ (ಚೆನ್ನಾಗಿ) ಅವಳಿಗೆಂದೇ ಮೀಸಲಾಗಿರಿಸಿದ್ದ ಕೆಲಸಗಳನ್ನೂ ಅವಳೇ ಮಾಡಬೇಕಾಗುತ್ತದೆ. ಎಲ್ಲೋ ಒಬ್ಬೊಬ್ಬ ಪುರುಷರು ಸಹಾಯಹಸ್ತ ನೀಡುತ್ತಾರೆ ಅಷ್ಟೇ. ಬೇಯಿಸುವುದು, ತೊಳೆಯುವುದು ಎಂಬ ವಿಷವೃತ್ತದಲ್ಲಿ ಸಿಲುಕಿಕೊಂಡ ಅನೇಕ ಪ್ರತಿಭಾವಂತ ಮಹಿಳೆಯರು ವಿದ್ಯಾವಂತೆಯರಾಗಿದ್ದು, ಬೂದಿಮುಚ್ಚಿದ ಕೆಂಡದಂತೆ ಉಳಿದುಬಿಡುತ್ತಾರೆ – ಉರಿದು ಬೆಳಕಾಗದೆ ಬೂದಿಯಾಗುತ್ತಾರೆ – ಹೇಳಹೆಸರಿಲ್ಲದಾಗುತ್ತಾರೆ.

*ಕಳಸಾಡು* / **ಮಾಲತಿ ಕಮಲಾಕ್ಷ**

### ಉಪದೇಶ – ಧರ್ಮ

ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಯಾವುದೇ ಸರ್ಕಾರಗಳು ಅಂದರೆ ಕೇಂದ್ರ ಸರ್ಕಾರವಾಗಲೀ, ರಾಜ್ಯ ಸರ್ಕಾರಗಳೇ ಆಗಲೀ, ಜಾತಿ ಪದ್ಧತಿಯನ್ನು ನಿರ್ಮೂಲನೆ ಮಾಡುವ ನಿಟ್ಟಿನಲ್ಲಿ ಜಾತಿ ಆಧಾರದ ಮೇಲೆ ಆದ್ಯತೆಯನ್ನು ನೀಡುವ ಪದ್ಧತಿಯನ್ನು ಸಂಪೂರ್ಣವಾಗಿ ನಿಷೇಧಿಸಲು ಕಟ್ಟುನಿಟ್ಟಿನ ಆದೇಶದ ಮೂಲಕ ಜಾರಿಗೆ ತರಬೇಕು. ಈ ಆದೇಶದಿಂದ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ರಾಜಕೀಯ ನೇತಾರರಾಗಲೀ, ಜನಸಾಮಾನ್ಯರಾಗಲೀ, ಧಾರ್ಮಿಕ ಗುರುಗಳಾಗಲೀ ವಿರೋಧ ವ್ಯಕ್ತಪಡಿಸುವುದು ಸಲ್ಲ. ಈ ಕ್ಷೇತ್ರಗಳಲ್ಲಿ ಎಲ್ಲ ಪ್ರಕ್ರಿಯೆಗಳಿಗೂ ಅರ್ಹತೆಯೇ ಮಾನದಂಡವಾಗಬೇಕು.

ಜಾತಿಪದ್ಧತಿಯು ಇನ್ನೊಂದು ಹಂತದಲ್ಲಿ ನಿರ್ಮೂಲನೆಯಾಗಬೇಕಾದರೆ, ಅಂತರ್ಜಾತಿ ವಿವಾಹಕ್ಕೆ ಸಂಪೂರ್ಣ ಪ್ರೋತ್ಸಾಹ ನೀಡಬೇಕು. ಹೆಣ್ಣೊಂದು ಜಾತಿ - ಗಂಡೊಂದು ಜಾತಿ ಎನ್ನುವ ಹಂತಕ್ಕೆ ತಲುಪಿ 'ಜಾತಿ' ಸೀಮಿತವಾಗಬೇಕು. ಈ ನಿಟ್ಟಿನಲ್ಲಿ ಉಪದೇಶ ನೀಡುವವರು ಮೊಟ್ಟಮೊದಲು ತಾವೇ ಅಲ್ಲದೆ ತಮ್ಮ ಮಕ್ಕಳನ್ನು ಅಂತರ್ಜಾತಿ ವಿವಾಹಗಳಿಗೆ ಪ್ರೇರೇಪಿಸಬೇಕು. ಇದು ಸಾಧ್ಯವೆ ?

*ಹರಪನಹಳ್ಳಿ* **ಮಲ್ಲಿಕಾರ್ಜುನ ಸ್ವಾಮಿ ಕಲ್ಮಠ**

ನಾ. ದಿವಾಕರ ಅವರು ಬರೆದಿರುವ ''ಕಾರಿಡಾರ್ ಯೋಜನೆ : ಸಾಮ್ರಾಜ್ಯಶಾಹಿ ಆಕ್ರಮಣ'' ಎಂಬ ಲೇಖನ ಸೂಕ್ತವೂ ಸಕಾಲಿಕವೂ ಸಮರ್ಥವೂ ಮಾಹಿತಿಪೂರ್ಣವೂ ಆಗಿದೆ. ಕಟ್ಟಕಡೆಯವನಿಗೂ ನಾವು ಮಾಹಿತಿಗಳನ್ನು ಕೊಟ್ಟು ಪಾರದರ್ಶಕ ಪ್ರಭುತ್ವವನ್ನು ನಡೆಸುತ್ತೇವೆ ಎಂದು ಹೇಳಿಕೊಳ್ಳುತ್ತಿರುವ ಎಸ್. ಎಂ. ಕೃಷ್ಣರ ಸರ್ಕಾರ ಇದುವರೆಗೆ ಕಾರಿಡಾರ್ ಯೋಜನೆಯ ಬಗ್ಗೆ ಯಾವ ಮಾಹಿತಿಯನ್ನೂ ನೀಡದೆ ಕದ್ದುಮುಚ್ಚಿ ಸಾಮ್ರಾಜ್ಯಶಾಹಿಗಳೊಂದಿಗೆ ವ್ಯವಹಾರ ನಡೆಸುತ್ತಿರುವುದೇ ಅದರ ಜನ ವಿರೋಧಿ ನೀತಿಯನ್ನು ಬಹಿರಂಗಪಡಿಸುತ್ತದೆ. ಈಗಿರುವ ರಸ್ತೆಯನ್ನು ನಾಲ್ಕು ದಾರಿಗಳಾಗಿ ಹಿಗ್ಗಿಸುವ ಹಾಗೂ ಜೋಡಿ ರೈಲು ರಸ್ತೆಯನ್ನು ನಿರ್ಮಿಸುವ ಪರ್ಯಾಯ ಮಾರ್ಗ ವಿರುವಾಗ, ಈ ಕಾರಿಡಾರ್ ಯೋಜನೆಯನ್ನು ಬಿಲ್‌ಕುಲ್ ಅನುಷ್ಠಾನಕ್ಕೆ ತರಬಾರದು. ಅದಕ್ಕೆ ಜನ ಒಪ್ಪಬಾರದು.

ಕೆ. ಪಿ. ಸ್ವಾಮಿಯವರ ''ದ್ವೀಪ-ಬದುಕಿನ ಭರವಸೆಯ ಸಂಕೇತ'' ಎಂಬ ಚಿತ್ರ ವಿಮರ್ಶೆ ಸ್ವಾಗತಾರ್ಹ. ಸಾಮಾಜಿಕ ಬದ್ಧತೆಯಿಂದ ಚಿತ್ರಗಳನ್ನು ಮಾಡುವ ಗಿರೀಶ್ ಕಾಸರವಳ್ಳಿಯವರ 'ದ್ವೀಪ' ಚಿತ್ರ ನಿಜಕ್ಕೂ ಅವರ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುತ್ತೆ. ಅಭಿವೃದ್ಧಿಯ ಜಪ ಮಾಡುತ್ತ ''ಹಲವರಿಗೆ ಒಳಿತಾಗಬೇಕಾದರೆ ಕೆಲವರ ಬಲಿಯಾಗಲೇಬೇಕು'' ಎಂದು ಹೇಳುವ ಸಾಮ್ರಾಜ್ಯಶಾಹಿ ಧೋರಣೆಗನು ಗುಣವಾಗಿ ಭಾರಿ ನೀರಾವರಿ ಯೋಜನೆಗಳನ್ನು, ಅಣುವಿದ್ಯುತ್ ಸ್ಥಾವರಗಳನ್ನು, ಅರಣ್ಯಗಳ ನಟ್ಟನಡುವೆ ನ್ಯಾಷನಲ್ ಪಾರ್ಕುಗಳನ್ನು ಪ್ರಾಯೋಜಿಸಿ ಅಲ್ಲಿ ನೆಮ್ಮದಿಯಿಂದ ಬಾಳುತ್ತಿದ್ದ ಮನುಷ್ಯರೂ ಒಳಗೊಂಡಂತೆ ಪ್ರಾಣಿ ಸಂಕುಲವನ್ನು ಎತ್ತಂಗಡಿ ಮಾಡಿ ಅವುಗಳ ತಳಿನಾಶಕ್ಕೆ ಕೈಹಾಕಲಾಗಿದೆ. ಸಿನಿಮಾ ಹಾಗೂ ಸಾಹಿತ್ಯದ



ದ್ವೀಪ - ಬದುಕಿನ ಭರವಸೆಯ ಸಂಕೇತ .

ಬದುಕಿಗೂ ಇಂದಿನ ವಾಸ್ತವ ಬದುಕಿಗೂ ಇರುವ ತೆಳುಗೆರೆಯೇ ಅಳಿಸಿಹೋಗುತ್ತಿರುವ ಕಾಲ ಬರುತ್ತಿದೆಯಲ್ಲ! ಇದೇ 'ದ್ವೀಪ' ಚಿತ್ರದ ಜೀವ ಜೀವಾಳ.

*ಬೆಂಗಳೂರು* **ಶಿವರಾಮಯ್ಯ**

ಆಗಸ್ಟ್ ತಿಂಗಳ ಡಾ|| ಸಿ. ಆರ್. ಚಂದ್ರಶೇಖರ್ ಅವರ ''ಶ್ರೀಲಂಕಾ ಭೇಟಿ : ಕೆಲವು ಅನುಭವಗಳು'' ಲೇಖನ ಸಂಶೋಧನಾ ವಿದ್ಯಾರ್ಥಿಯಾಗಿ ನಾನು ಹೆಚ್ಚಿನ ಮಾಹಿತಿ ಸಂಗ್ರಹಿಸಲು ೧೯೯೨ರಲ್ಲಿ ಶ್ರೀಲಂಕಾಕ್ಕೆ ಕೊಟ್ಟ ಭೇಟಿಯ ನೆನಪು ಮಾಡಿಕೊಟ್ಟಂತಾಯಿತು. ಶ್ರೀಲಂಕಾದ ಒಟ್ಟು ಸಂಸ್ಕೃತಿಯ ಬಗ್ಗೆ ಹೇಳುವುದಾದರೆ, ಭಾರತದ ರಾಜ್ಯಗಳಾದ ಕೇರಳ ಮತ್ತು ತಮಿಳುನಾಡಿನಲ್ಲಿರುವ ಸಂಸ್ಕೃತಿಗೆ ಸ್ವಲ್ಪ ಹತ್ತಿರವಾಗಿದೆ.

ಇದೇ ರೀತಿ 'ಹೊಸತು' ಪತ್ರಿಕೆ ಆಗಾಗ ನಮ್ಮ ನೆರೆ ರಾಷ್ಟ್ರಗಳ ಸಾಧನೆಯ ಬಗ್ಗೆ ಮತ್ತು ಭಾರತದೊಂದಿಗೆ ಅವುಗಳ ಸಂಬಂಧದ ಬಗ್ಗೆ ವಿಸ್ತೃತ ಲೇಖನಗಳನ್ನು ಪ್ರಕಟಿಸಬೇಕೆಂದು ಬಯಸುವೆ.

*ಗುಲಬರ್ಗಾ* **ಡಾ|| ಚಂದ್ರಕಾಂತ ಯಾತನೂರ**

### ಬಂದು

'ಬಂದ್'ಬಗ್ಗೆ ಗಾಂಧೀಜಿಯವರಿಗೆ ಸ್ಪಷ್ಟವಾದ ಅಭಿಪ್ರಾಯವಿತ್ತು, ಅದೊಂದು ಸಾಂಕೇತಿಕ ಸಂತಾಪ. ಜನರು ತಮ್ಮ ವಿರೋಧವನ್ನು ವ್ಯಕ್ತಪಡಿಸುವ ಅಹಿಂಸಾತ್ಮಕ ಚಳುವಳಿ. ಜನರು ಬಂದ್‌ನಿಂದ ತಮ್ಮ ಮೇಲೆಯೇ ಕಷ್ಟ ತಂದುಕೊಂಡು ತಮ್ಮ ಕಷ್ಟವನ್ನು ಸ್ಪಷ್ಟಮಾಡುವ ಹಾಗೂ ಅದರಿಂದ ವಿರೋಧ ಪಕ್ಷದ ಜನರ ಮನವನ್ನು ಒಲಿಸಿಕೊಳ್ಳುವ ಒಂದು ಮಾಯಾಜಾಲ. ಅದನ್ನು ನೀವು 'ಟ್ಯಾಕ್ಟಿಕ್ಸ್' ಎಂದು ಬೇಕಾದರೂ ಕರೆಯಬಹುದು, 'ಸ್ಟಂಟ್' ಎಂದಾದರೂ ಕರೆಯಬಹುದು. 'ವಾರ್' ಅಂತೂ ಅಲ್ಲ. ಇದನ್ನು ಒತ್ತಿ ಹೇಳುವ ಅವಶ್ಯಕತೆ ಇದೆ.

ನಾವು 'ಬಂದ್' ಆಚರಿಸುವುದು ಮನವೊಲಿಸಿ ಒಂದಾಗಲಿಕ್ಕೆ, ಮನ ಉರಿಸಿ ಎರಡಾಗಲಿಕ್ಕಲ್ಲ ಎಂದು ನಾವು ಅರಿಯದಿದ್ದರೆ ಬಂದ್ ಆಚರಿಸುವುದನ್ನು ನಾವು ಬಂದು ಮಾಡುವುದೇ ಒಳ್ಳೆಯದು !

*ಬೆಂಗಳೂರು* **ಹಾಲಾಡಿ ಮಾರುತಿರಾವ್**

'ಹೊಸತು' ಪತ್ರಿಕೆ ವೈವಿಧ್ಯಪೂರ್ಣ ವಿಷಯ-ವಿನ್ಯಾಸಗಳಿಂದ, ಸಂಚಿಕೆಯಿಂದ ಸಂಚಿಕೆಗೆ ಬೆಳೆಯುತ್ತ ಸಾಗುತ್ತಿದೆ – ಸಾಗಲಿ ಎನ್ನುವುದೇ ನಮ್ಮ ಆಶಯ.

ಪ್ರತಿ ತಿಂಗಳು ತಪ್ಪದೇ ನಮ್ಮ ಕೈಗೆ ತಲುಪುತ್ತಿದೆ. ಓದಲು ಕುತೂಹಲ ಹೆಚ್ಚಿಸಿ, ದಾರಿ ಕಾಯಲು ಹಚ್ಚುತ್ತದೆ.

*ಮೂಡಲಗಿ* **ಗುಂಡಣ್ಣ ಕಲಬುರ್ಗಿ**

ಸೆಪ್ಟೆಂಬರ್ ತಿಂಗಳ ಹೊಸತು ಪತ್ರಿಕೆಯಲ್ಲಿ 'ಕೊಳಗ' ಕುರಿತು ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಬರೆದ ಲೇಖನ ಓದಿದೆ. ತುಂಬಾ ಸಂತೋಷವಾಯಿತು ಕೂಡ. ಏಕೆಂದರೆ ಚಳುವಳಿಯನ್ನು, ರೈತರ ಬವಣೆಯನ್ನು ಕಣ್ಣಾರೆ ಕಂಡವರು ಅವರು. ಈ ಕಾದಂಬರಿಯ ಬಗ್ಗೆ ನಿಜವಾಗಿಯೂ ಹೇಳಬೇಕಾದವರು ಅವರೇ. ಅವರಿಗೆ ಕೃತಿ ದೊರಕಿದ್ದು ಪತ್ರಿಕೆಗೂ ಬರೆದರು. ಅವರಿಗೆ ಕೃತಜ್ಞ.

*ಸಾಗರ* **ನಾ. ಡಿಸೋಜ**

ಕೆ. ಪಿ. ಸ್ವಾಮಿಯವರು 'ದ್ವೀಪ'ದ ಬಗ್ಗೆ ಚೊಕ್ಕವಾಗಿ ಬರೆದ ಲೇಖನ ಈ ಮಾಸದ ಆಕರ್ಷಣೆ. ಮುಖಪುಟದ ಚಿತ್ರದಲ್ಲಿನ ದಿ|| ವಾಸುದೇವರಾವ್ ಮತ್ತು ನಿರ್ದೇಶಕ ದಿಗ್ಗಜ ಗಿರೀಶ್ ಕಾಸರವಳ್ಳಿಯವರ ಪರಿಚಯ, ಎಲ್ಲಕ್ಕೂ ಮಿಗಿಲಾಗಿ 'ದ್ವೀಪ'ದ ಕಥಾನಿರೂಪಣೆಯನ್ನು ಲೇಖನ ಪ್ರಬುದ್ಧವಾಗಿಸಿರುವುದು ಸ್ತುತ್ಯರ್ಹ.

ಹೇಮಲತಾ ಮಹಿಷಿಯವರ ''ಆಸ್ಟ್ರೇಲಿಯ - ವಿಶ್ವ ಪರಂಪರೆಯ ಕೇಂದ್ರಗಳು'' ನಮಗೆ ಎಲ್ಲ ರೀತಿಯಿಂದ ಪರಂಪರೆಗಳ ತಾಣವನ್ನು ರಕ್ಷಿಸಲು ಉಪಯುಕ್ತ ಮಾಹಿತಿ ನೀಡುವಲ್ಲಿ ಯಶಸ್ವಿ ಮತ್ತು ಆಕರ್ಷಕವನ್ನಾಗಿಸುವ ನಿಟ್ಟಿನಲ್ಲಿ ಮಾರ್ಗದರ್ಶಿಯೂ ಸಹ ಎಂಬುದು ನಿರ್ವಿವಾದ.

*ಬೆಂಗಳೂರು* **ಎನ್. ಎಲ್. ರಾಮಮೂರ್ತಿ**

ಸೆಪ್ಟೆಂಬರ್ ತಿಂಗಳ 'ಹೊಸತು' ಆಕರ್ಷಕ ಮುಖಪುಟದೊಂದಿಗೆ ತನ್ನ ಸೌಂದರ್ಯವನ್ನು ಹೆಚ್ಚಿಸಿ ಕೊಂಡಿದೆ. 'ದ್ವೀಪ' ಚಲನಚಿತ್ರದ ಈ ಅದ್ಭುತ ಚಿತ್ರ

ಮುದ ನೀಡಿತು. ಶ್ರೀ ಗಿರೀಶ ಕಾಸರವಳ್ಳಿಯವರ 'ದ್ವೀಪ' ಚಿತ್ರಕ್ಕೆ ಸ್ವರ್ಣಕಮಲ ಬಂದದ್ದು ನಿಜಕ್ಕೂ ಪ್ರತಿಭೆಗೆ ಸಂದ ಗೌರವ. ಗೌರವ ಬಂದದ್ದು ಕನ್ನಡಿಗರಿಗೆ ಹೆಮ್ಮೆಯ ಸಂಗತಿ.

ಇತರ ಚಿತ್ರ ನಿರ್ಮಾಪಕರು ಯಾಕೆ ಇಂಥ ಸದಭಿರುಚಿಯ ಚಿತ್ರಗಳಿಗೆ ಗಮನ ಕೊಡುತ್ತಿಲ್ಲವೆನ್ನುವುದೂ ಕೂಡಾ ಯೋಚಿಸಬೇಕಾದ ವಿಷಯ.

*ಶಂಕರಘಟ್ಟ* **ಟಿ. ರಾಜೇಂದ್ರ ತಗಡ್ಲಿ**

ಪತ್ರಿಕೆಯ ಪ್ರತಿಯೊಂದು ಸಂಚಿಕೆಯೂ ವಿವಿಧ ವಿಷಯಗಳ ವಿವೇಚನೆಯಿಂದೊಡಗೂಡಿ ಸಮೃದ್ಧವಾಗಿ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿ.

*ಧಾರವಾಡ* **ಚನ್ನವೀರ ಕಣವಿ**

'ಹೊಸತು' ಇತರ ಪತ್ರಿಕೆಗಳಿಂದ ಭಿನ್ನವಾಗಿದ್ದು, ಯಾವುದೇ ವಿಚಾರವನ್ನಾಗಲಿ ಮುಕ್ತವನ್ನಾಗಿಯೇ ಹೇಳುವುದರಿಂದಲೇ ಓದುಗರ ಮೆಚ್ಚುಗೆಗೆ ಪಾತ್ರವಾಗಿದೆ. ನಮ್ಮಂತಹ ವಿದ್ಯಾರ್ಥಿಗಳಿಗೆ ಇದು ಉಪಯುಕ್ತ ಪತ್ರಿಕೆ. ಯಾಕೆಂದರೆ ವಿಚಾರಶಕ್ತಿಯನ್ನು ಬೆಳೆಸುವ ಸತ್ಕರ್ಮದಲ್ಲಿ ತನ್ನನ್ನು ತೊಡಗಿಸಿಕೊಂಡಿದೆ "ಹೊಸತು". ದಯವಿಟ್ಟು ಆಲ್ಬಮ್ ತಯಾರಿಕೆಗನುಕೂಲವಾಗುವಂತೆ ಸಾಹಿತಿಗಳ ಫೋಟೋ ಸಹಿತದ ವಿವರಗಳನ್ನೊದಗಿಸುವ ಮಹದುಪಕಾರವನ್ನು ಮಾಡುವಿರಾ ?

*ಕಾಸರಗೋಡು* **ನವೀನಚಂದ್ರ ಬೋವಿಕ್ಕಾನ**

ಸೆಪ್ಟಂಬರ್ ೨೦೦೨ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಡಾ|| ಟಿ. ಆರ್. ಚಂದ್ರಶೇಖರ ಅವರ "ಅಭಿವೃದ್ಧಿಯ ಕೇಸರೀಕರಣ" ಹಾಗೂ ಮ. ಶ್ರೀ. ಮುರಳಿಕೃಷ್ಣ ಅವರ "ಇವು ಸುಧಾರಣೆಗಳೇ?" ಲೇಖನಗಳು ಕ್ರಮವಾಗಿ ಸ್ವ-ಕೇಂದ್ರಿತ ವ್ಯಾಖ್ಯಾನವನ್ನು ಅಭಿವೃದ್ಧಿಗೆ ನೀಡುತ್ತಿರುವುದನ್ನು ಧ್ವನಿಸುತ್ತವೆ. ಅದನ್ನು ಜಾರಿಗೆ ತಂದು ಬಹುಸಂಖ್ಯಾತರ ಆಶೋತ್ತರಗಳಿಗೆ ಮಾರಕವಾಗುತ್ತಿರುವುದು ಶೋಚನೀಯ. ಆಳುವ ವರ್ಗದವರ ಹಿತಾಸಕ್ತಿಗಳಿಗೆ ಮಾತ್ರ 'ರಾಜ್ಯ' ತನ್ನ ಶಕ್ತಿಗಳನ್ನು ಬಳಸಿಕೊಳ್ಳುತ್ತಿರುವುದನ್ನು ನೋಡಿದರೆ ವ್ಯವಸ್ಥೆಯ ಬದಲಾವಣೆಗೆ ಹುಟ್ಟುಹಾಕಬೇಕಾದ ಅವಶ್ಯಕತೆ ಕಂಡುಬರುತ್ತಿದೆ.

ಸಂಚಿಕೆಯಲ್ಲಿನ ಹಲವು ಲೇಖನಗಳು ಪರಸ್ಪರ ಕೊಂಡಿಯಂತೆ ಹೆಣೆದುಕೊಂಡಿವೆ, ಒಂದನ್ನು ಬಿಟ್ಟು ಮತ್ತೊಂದು ಓದುವಂತಿಲ್ಲ. ಧನ್ಯವಾದ.

*ಸೇಡಂ* **ಅಣ್ಣಾಸಾಗರ್. ಬಿ. ಆರ್.**

## ಮಾನವ ಜೀವ ಮುಖ್ಯ

೧೯೯೨, ಡಿ. ೬ರ ಬಾಬ್ರಿ ಮಸೀದಿ ಕೆಡವಿದ ಸಂದರ್ಭದಲ್ಲಿ ಲಂಕೇಶ್ ಬರೆಯುತ್ತಾರೆ: "ಇಟ್ಟಿಗೆ ಪವಿತ್ರವಲ್ಲ; ಜೀವ ಪವಿತ್ರ." ಲೋಹಿಯಾ ಹೇಳುತ್ತಾರೆ: "ಎಲ್ಲ ಕಟ್ಟುಪಾಡುಗಳ ನಡುವೆ ಗುರಿ ತಲುಪುವ ವ್ಯಕ್ತಿತ್ವ ರಾಮನದು. ಆ ಕಾರಣಕ್ಕಾಗಿಯೇ ಗಾಂಧೀಜಿ ಮಿತಿಯರಿತು ನಡೆಯುವ 'ರಾಮ'ನ ಚಿತ್ರ ಎಲ್ಲರ ಚಿತ್ತದಲ್ಲಿ ನೆಲೆಸುವಂತೆ ಪ್ರಯತ್ನಿಸುತ್ತಿದ್ದರು."

ಸಂಘ ಪರಿವಾರದವರು ರಾಷ್ಟ್ರವನ್ನು ಕಿತ್ತು ತಿನ್ನುತ್ತಿರುವ ಸಮಸ್ಯೆಗಳನ್ನು ಬದಿಗೊತ್ತಿ ರಾಮಮಂದಿರದ ನಿರ್ಮಾಣದ ಪ್ರಶ್ನೆಯನ್ನೇ ಜನತೆಯ ಮುಂದಿಟ್ಟು ಓಟು ರಾಜಕೀಯದಲ್ಲಿ ತಲ್ಲೀನರಾಗಿದ್ದಾರೆ. ಉಚ್ಚ ನ್ಯಾಯಾಲಯದ ತೀರ್ಪನ್ನು ಧಿಕ್ಕರಿಸಿ ತಮ್ಮ ವಿಧ್ವಂಸಕ ಕೃತ್ಯಗಳನ್ನು ಮುಂದುವರೆಸಿಕೊಂಡು ಹೋಗುವ ಉದ್ಧಟತನ ಇವರಿಗಿದೆ. ಇವೆಲ್ಲದರ ಹಿನ್ನೆಲೆಯಾಗಿ ವಾಜಪೇಯಿ ಅವರ ಅಸಹಾಯಕತೆಯ ಪ್ರಹಸನ ಮೋಜು ಒದಗಿಸುತ್ತದೆ. ಈ ದೇಶದ ವಿಚಾರವಂತರು, ಜನಸಾಮಾನ್ಯರು ಮತ್ತು ಯುವಜನತೆಗೆ ಇರುವ ದಾರಿಯಾದರೂ ಯಾವುದು ? ಒಂದೋ – ಹಿಂದುತ್ವಗಳ ಜೊತೆ ಸೇರಿ ಕರಸೇವೆ ಮಾಡುವುದು, ಎರಡು - ನಮಗೇಕೆ ಇದರ ಉಸಾಬರಿ ಎಂದು ಸುಮ್ಮನಿರುವುದು, ಮೂರು - ಇದು ಜಾತ್ಯತೀತ ದೇಶ; ಇಲ್ಲಿ ಎಲ್ಲರೂ ಸಮಾನರು, ಧರ್ಮ, ದೇವರು, ಬಹುಸಂಖ್ಯಾತ ಅಲ್ಪಸಂಖ್ಯಾತರೆಂಬ ಹೆಸರಿನಲ್ಲಿ ಹಿಂಸೆ ಬೇಡ ಎಂದು ವಾದಿಸಿ ಎಡಪಂಥೀಯರೆಂದೋ ನಾಸ್ತಿಕರೆಂದೋ ಕರೆಸಿಕೊಂಡು ಚಟುವಟಿಕೆಗಳಲ್ಲಿ ತೊಡಗುವುದು.

ಆದರೂ ಮನಸ್ಸು ಚಡಪಡಿಸುತ್ತಿದೆ. ಇಲ್ಲದ ದೇವರ ಹೆಸರಿನಲ್ಲಿ ಜರುಗುತ್ತಿರುವ ಅಮಾಯಕರ, ಮುಗ್ಧರ ಹತ್ಯೆಯನ್ನು ಯಾರೂ ಒಪ್ಪರು. 'ಗೋಧ್ರಾ' ಹತ್ಯಾಕಾಂಡಕ್ಕೆ ಇಡೀ ಗುಜರಾತ್ ಹತ್ತಿ ಉರಿಯಬೇಕಿತ್ತೆ ? ಹಿಂಸಿಸಿದ ಕೆಲವರನ್ನು ಹಿಡಿದು ಶಿಕ್ಷಿಸಲು ಈ ದೇಶದಲ್ಲಿ ನ್ಯಾಯಾಲಯ, ಪೋಲೀಸ, ಕಾನೂನು ಇದ್ದವಲ್ಲವೆ ? ಕೊಲೆಗೆ ಕೊಲೆಯೇ ಉತ್ತರವೆ ?

ಇವತ್ತಿನ ಭಾರತದ ರಾಜಕಾರಣವೂ ಹಾಗೆಯೇ ಇದೆ. ಉತ್ತರ ಪ್ರದೇಶದಲ್ಲಿ ಮತ ಹಾಕಿದ ಜನ ಇತ್ತ ರಾಮನ ಗುಡಿಯನ್ನು ತಿರಸ್ಕರಿಸಿಲ್ಲ; ಅತ್ತ ಪುರಸ್ಕರಿಸಿಯೂ ಇಲ್ಲ. ಮುಲಾಯಂನಂಥವರು ಈ ಮೊದಲು ಆಡಿದ ನಾಟಕಕ್ಕೆ ಫಲವನ್ನು ಈಗ ಉಣ್ಣಬೇಕಾಗಿದೆ. ಕಾಂಗ್ರೆಸ್ ಮುಲಾಯಂಗೆ ಬೆಂಬಲ ನೀಡದೆ ರಾಮಭಕ್ತರಿಗೆ ಮತ್ತೊಂದು ಅವಕಾಶ ಕಲ್ಪಿಸಲು ಪರೋಕ್ಷವಾಗಿ ದೊಡ್ಡ ಪ್ರಮಾದವನ್ನು ಮಾಡುತ್ತಿದೆ. ಈ ದೇಶದಲ್ಲಿ ರಾಷ್ಟ್ರೀಯ ಐಕ್ಯತೆ, ವೈವಿಧ್ಯತೆಗಳೆಂಬ ಮೌಲ್ಯಗಳು ನಶಿಸಿಹೋಗುವ ಸಾಧ್ಯತೆಗಳಿವೆ. ರಾಜಕಾರಣವೆಂದರೆ ಕೇವಲ ಅಧಿಕಾರದ ಹಂಚಿಕೆ, ಅನುಭವಿಸುವಿಕೆ ಎಂಬ ಕ್ಷುದ್ರ ತಿಳುವಳಿಕೆಯೇ ಈ ದುರಂತಕ್ಕೆ ಮೂಲವೆನ್ನಬಹುದು. ಬಿ.ಎಸ್.ಪಿ, ಬಿ.ಜೆ.ಪಿ.ಗಳ ಮೈತ್ರಿ ಇದಕ್ಕೆ ಉದಾಹರಣೆ.

ರಾಮನೊಬ್ಬನೇ ಈ ದೇಶದ ಐತಿಹಾಸಿಕ ಸತ್ಯವಲ್ಲ. ನೂರಾರು ವರ್ಷಗಳ ಸಹಬಾಳ್ವೆಗೆ 'ಗುಡಿ'ಯೊಂದು ಕಲ್ಲುಹಾಕಬೇಕಾಗಿಲ್ಲ. ತಾಲಿಬಾನ್ ಆಡಳಿತ ಬುದ್ಧನ ವಿಗ್ರಹಗಳನ್ನು ನಾಶಪಡಿಸಿದರೆ ಅದು ಭಯೋತ್ಪಾದನೆ, ಕರಸೇವಕರು ಮಸೀದಿ ಕೆಡವಿದರೆ ಅದು ದೇಶಾಭಿಮಾನ ! ಎಂಥ ವಿಚಿತ್ರ. ಬುದ್ಧನ ಮೂಲನೆಲೆಯಾದ ಭಾರತ, ಗಾಂಧೀಯಂತಹ ಮಹಾತ್ಮನ ನೆಲವಾದ ಭಾರತ ಮಾನಸಿಕ ಇಬ್ಬಾಗಕ್ಕೆ ತುತ್ತಾಗಿರುವುದು ಸ್ಪಷ್ಟವಾಗಿ ಕಾಣುತ್ತಿದೆ. ದೇಶದ ಯಾವುದೋ ಒಂದು ಮೂಲೆಯಲ್ಲಿ ಕಟ್ಟಬೇಕಾದ ಗುಡಿಗಾಗಿ ಇಡೀ ದೇಶದಲ್ಲಿ ಅಶಾಂತಿ, ರಕ್ತಪಾತ ಬೇಕು ಎನ್ನುವುದಾದರೆ ಅಂಥ 'ಸ್ಥಾವರ'ವನ್ನು ವಿಚಾರವಂತರು ಧಿಕ್ಕರಿಸಬೇಕಾಗಿದೆ. ಇವತ್ತು ಮುಸ್ಲಿಮರ ವಿರುದ್ಧವಾಗಿ ಉಳಿದವರೆಲ್ಲ ಒಂದು ಎನ್ನುವ ಭಾ.ಜ.ಪ. ನಾಳೆ ದಲಿತರ, ಬಡವರ, ರೈತರ ಪರವಾಗಿರುತ್ತದೆ ಎನ್ನುವುದು ನಂಬುವ ಮಾತೇ ? ಒಡೆದು ಆಳುವ, ತಮ್ಮ ಸ್ಥಾನವನ್ನು ಭದ್ರವಾಗಿಸಿಕೊಳ್ಳುವ ನೀತಿಯನ್ನು ನಾವು ಬ್ರಿಟಿಷರಿಗೆ ಆರೋಪಿಸುತ್ತೇವೆ. ಆದರೆ, ವಿಶ್ವದ ಅನೇಕ ಕಡೆ, ಆಳುವ ವರ್ಗ, ಮೇಲು ಜಾತಿ ಜನ ಸಾವಿರಾರು ವರ್ಷಗಳಿಂದ ಈ ಕಸುಬನ್ನೇ ತಮ್ಮ ಬಂಡವಾಳ ಮಾಡಿಕೊಂಡಿರುವುದು ವಾಸ್ತವದ ಅಂಶ.

ಅಗಾಧವಾದ ಮಾನವ ಸಂಪನ್ಮೂಲವುಳ್ಳ ಈ ದೇಶದ ಪ್ರತಿಯೊಂದು ದುಡಿಮೆಯ ತಾಣವೂ ಇವತ್ತು ಖಾಸಗೀಕರಣಕ್ಕೆ ತುತ್ತಾಗುತ್ತಿರುವಾಗ, ದುಡಿಯುವ ಕೈಗಳಿಗೆ ಕೆಲಸ ಸಿಗದಾಗುತ್ತಿರುವಾಗ, ಇಡೀ ಸಮುದಾಯದಲ್ಲಿ ಅಶಾಂತಿ, ನಿರುದ್ಯೋಗ, ಮೋಸ, ಕಳ್ಳತನ, ಸ್ತ್ರೀಯರ ಶೋಷಣೆ ಎದ್ದು ಕಾಣುತ್ತಿರುವಾಗ, ಇಂಥ ಮಹತ್ವದ ಸಮಸ್ಯೆಗಳನ್ನು ಬದಿಗಿಟ್ಟು ಈ ದೇಶದ ಅಧಿಕಾರವರ್ಗ ಸ್ವಾಮಿಗಳ, ಜ್ಯೋತಿಷಿಗಳ, ಅಪರಾಧಿಗಳ ಸಖ್ಯದಲ್ಲಿ ಕೈ ಜೋಡಿಸಿರುವುದು ವೇದನೆಯನ್ನುಂಟುಮಾಡುತ್ತಿದೆ. ಮಧ್ಯಮವರ್ಗದ 'ಕನಸು'ಗಳಿಗೂ ಬೆಂಕಿ ಇಡಲಾಗಿದೆ. ತಾಯ್ನುಡಿ ಬದಲಿಗೆ ಹಿಂದೆಂದಿಗಿಂತ ಹೆಚ್ಚಾಗಿ ಅನ್ಯನುಡಿಗಳು ಗಟ್ಟಿಯಾಗಿ ಕೂರುತ್ತಿವೆ ; ನಾಳಿಗೆ ಕೂಳು ಕೂಡಿಡುವ ಬಗೆಗೆ ಅಸಹನೆ ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ ; ಯಾರೂ ಯಾವುದೇ ಸಂಬಂಧವನ್ನು ಯಾರೊಂದಿಗೂ ಉಳಿಸಿಕೊಳ್ಳಬಾರದು ! ಅದೇ ಇವತ್ತಿನ ರಾಜಕಾರಣ, ಭವ್ಯ ಭಾರತದ ಆಡಳಿತದ ಮೂಲ ಮಂತ್ರ.

ಈ ನೆಲದ ಶೂದ್ರರ ತಪಸ್ಸಿಗೂ ಕುತ್ತು ತಂದ 'ರಾಮ', ಅನ್ಯರ ಮಾತಿಗಾಗಿ ಸತಿಯನ್ನೇ ಕಾಡಿಗಟ್ಟಿದ 'ರಾಮ'ನ ಬದಲು ಎಲ್ಲ ಮಿತಿಗಳ ನಡುವೆ ಮಾನವನಾಗಿ ಬದುಕಲು ಯತ್ನಿಸುವ 'ರಾಮ' ಈ ನೆಲದ ಜನದ ಮನದಲ್ಲಿ ನಿಲ್ಲಬೇಕಾಗಿದೆ. ಎಂದರೆ ಎಲ್ಲೋ ವಿಗ್ರಹವಾಗಿ ಅಲ್ಲ. ಅಷ್ಟಕ್ಕೂ ರಾಮ ಈ ದೇಶದ ಎಲ್ಲರ ಆರಾಧ್ಯ ದೈವವೇನೂ ಅಲ್ಲ. ಈ ಸತ್ಯವನ್ನು ಅಸಹಾಯಕರೂ, ಮುಗ್ಧರೂ ಆದ ನಾಗರಿಕರಿಗೆ ತಿಳಿಸಬೇಕಾಗಿದೆ. ಈ ಯತ್ನ ಸಫಲವಾದಲ್ಲಿ ಭಾರತದಲ್ಲಿ ಹಸಿರು ಕಂಡೀತು. ಇಲ್ಲದಿದ್ದಲ್ಲಿ ಈ ಪ್ರಕ್ರಿಯೆ ಬರೀ 'ನೆತ್ತರು ಕೊಡುಗೆ'ಯಾಗಿ ಪರಿಣಮಿಸಲಿದೆ.

ಡಾ|| ಎಸ್. ಪ್ರಸಾದಸ್ವಾಮಿ
ಮುಖ್ಯರು : ಕನ್ನಡ ವಿಭಾಗ, ಸರ್. ಎಂ. ವಿ. ಸರ್ಕಾರಿ ಕಾಲೇಜು, ಭದ್ರಾವತಿ – ೫೭೭ ೩೦೨

# ಕರ್ನಾಟಕದ ಅಭಿವೃದ್ಧಿಯಲ್ಲಿ ಅಸಮಾನತೆ

**ರಾ. ನಂ. ಚಂದ್ರಶೇಖರ**

*ಕರ್ನಾಟಕ ಏಕೀಕರಣವಾಗಿ ೪೬ ವರ್ಷಗಳು ಉರುಳಿದ ಸಂದರ್ಭದಲ್ಲಿ 'ಕನ್ನಡ-ಕನ್ನಡಿಗ-ಕರ್ನಾಟಕ'ಗಳ ಸ್ಥಿತಿಯನ್ನು ಅವಲೋಕಿಸಿದಾಗ ಕನ್ನಡಿಗರ ಕನಸು ನನಸಾಗುವ ದಿನ ದೂರವೇ ಇದೆ ಅನ್ನಿಸುತ್ತದೆ. ಹಾಗೆಂದ ಮಾತ್ರಕ್ಕೆ ಕರ್ನಾಟಕ ಏನನ್ನೂ ಸಾಧಿಸಿಲ್ಲ ಎನ್ನುವುದು ಸಿನಿಕತನವಾಗುತ್ತದೆ. ೧೯೫೭ರಲ್ಲಿ ೨೯.೮%ರಷ್ಟಿದ್ದ ಸಾಕ್ಷರತೆ ೬೭.೦೪%ಕ್ಕೇರಿದೆ. ೭.೬ ಲಕ್ಷ ಹೆಕ್ಟೇರ್‌ನಷ್ಟಿದ್ದ ನೀರಾವರಿ ಪ್ರದೇಶ ೨೦೦೧ರ ಹೊತ್ತಿಗೆ ೨೫.೫ ಲಕ್ಷ ಹೆಕ್ಟೇರ್ ಆಗಿದೆ. ತಲಾ ಆದಾಯ ೧೦ ಪಟ್ಟು ಹೆಚ್ಚಿದೆ. ಸ್ಥೂಲವಾಗಿ ನೋಡಿದಾಗ ಹೀಗೆ ಕಾಣುವ ದೃಶ್ಯ ಸೂಕ್ಷ್ಮವಾಗಿ ಗಮನಿಸಿದಾಗ ಬೇರೆ ಆಗುತ್ತದೆ.*

ಸಾಂಪ್ರದಾಯಿಕವಾಗಿ ನಾಡಿನ ಪ್ರಗತಿಯನ್ನು ತಲಾ ಆದಾಯದ ಮೇಲೆ ಗುರುತಿಸುವ ಪರಿಪಾಠವಿತ್ತು. ಅದನ್ನು ಇಂದು ಅರ್ಥಶಾಸ್ತ್ರಜ್ಞರು ತಪ್ಪು ಎಂದು ನಿರ್ಧರಿಸಿ 'ಮಾನವ ಅಭಿವೃದ್ಧಿ ಸೂಚ್ಯಂಕ' ಎಂಬ ಹೊಸ ಪರಿಕಲ್ಪನೆಯನ್ನು ಅನುಸರಿಸುತ್ತಿದ್ದಾರೆ. ಇದರಲ್ಲಿ ಬಡತನ, ಆರೋಗ್ಯ, ಮೂಲಭೂತ ಸೌಕರ್ಯ, ಸಾಮಾಜಿಕ ಅಂಶಗಳನ್ನು ಅಡಕ ಮಾಡಲಾಗಿದೆ. ಇಂದು ಅಭಿವೃದ್ಧಿ ಎಂದರೆ ಮಾನವನ ನೆಮ್ಮದಿ ಬದುಕಿಗೆ ಅಗತ್ಯವಾದ ಸಾಮಾಜಿಕ-ಆರ್ಥಿಕ ಮೂಲಭೂತ ಸೌಲಭ್ಯಗಳನ್ನೊಳಗೊಂಡ ಉತ್ತಮ ಜೀವನ ನಿರ್ವಹಣೆಗೆ ಸೂಕ್ತ ವಾತಾವರಣ ನಿರ್ಮಾಣ. ಈ ಎಲ್ಲ ಅಂಶಗಳನ್ನೂ ಗಣನೆಗೆ ತೆಗೆದುಕೊಂಡು ಕರ್ನಾಟಕದ ಪ್ರಾದೇಶಿಕ ಅಸಮಾನತೆಯನ್ನು ಅಧ್ಯಯನ ಮಾಡಿ ಡಾ॥ ಡಿ. ಎಂ. ನಂಜುಂಡಪ್ಪ ನೇತೃತ್ವದ ತಜ್ಞರ ತಂಡವು ನೀಡಿರುವ ವರದಿಯು ರಾಜ್ಯದ ಪ್ರಗತಿ ಬಗ್ಗೆ ವಸ್ತುನಿಷ್ಠ ದೃಷ್ಟಿಯಿಂದ ಕೂಡಿದ್ದಾಗಿದೆ.

ಕೃಷಿ ಮತ್ತು ಕೃಷಿ ಆಧಾರಿತ (೯); ವ್ಯಾಪಾರ, ಕೈಗಾರಿಕೆ, ವಿತ್ತ (೫); ಆರ್ಥಿಕ ಮೂಲಭೂತ ಸೌಕರ್ಯ (೯); ಸಾಮಾಜಿಕ ಮೂಲಭೂತ ಸೌಲಭ್ಯ (೭); ಜನಾಂಗದ ವೈಲಕ್ಷಣ (೫); ಗಳನ್ನೊಳಗೊಂಡ ೩೫ ಸೂಚಿಗಳನ್ನೊಳಗೊಂಡ 'ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕ'ದನ್ವಯ ತಾಲ್ಲೂಕು ಮಟ್ಟದಲ್ಲಿ ಅಧ್ಯಯನ ನಡೆಸಿ ಒಂದು ಉತ್ತಮ ವರದಿಯನ್ನು ನಂಜುಂಡಪ್ಪ ಸಮಿತಿಯು ನೀಡಿದೆ. ಈ ವರದಿಯಲ್ಲಿ ೧೭೪ ತಾಲ್ಲೂಕುಗಳಲ್ಲಿ ೧೧೪ ತಾಲ್ಲೂಕುಗಳು ಹಿಂದುಳಿದಿವೆ ಎಂದು ಗುರುತಿಸಲಾಗಿದ್ದು, ಅದರಲ್ಲಿ ೩೯ ತಾಲ್ಲೂಕುಗಳು ಅತಿ ಹಿಂದುಳಿದ ತಾಲ್ಲೂಕುಗಳು, ೪೦ಕ್ಕೂ ಹೆಚ್ಚು ಹಿಂದುಳಿದ ತಾಲ್ಲೂಕುಗಳಾಗಿವೆ. ಕರ್ನಾಟಕದ ೨/೩ ಭಾಗ ಹಿಂದುಳಿದಿರುವುದು ಗಮನಿಸಬೇಕಾದ ಅಂಶ.

**ಹಿಂದುಳಿದ ೧೧೪ ತಾಲ್ಲೂಕುಗಳ ವಿಭಾಗವಾರು ವಿವರ**

| ವಿಭಾಗ | ಅತಿ ಹಿಂದುಳಿದ | ಹೆಚ್ಚು ಹಿಂದುಳಿದ | ಹಿಂದುಳಿದ | ಒಟ್ಟು |
|---|---|---|---|---|
| ಕಲಬುರ್ಗಿ | ೨೧ | ೫ | ೨ | ೨೮ |
| ಬೆಳಗಾವಿ | ೫ | ೧೨ | ೧೪ | ೩೧ |
| ಬೆಂಗಳೂರು | ೧೧ | ೧೩ | ೯ | ೩೩ |
| ಮೈಸೂರು | ೨ | ೧೦ | ೧೦ | ೨೨ |
| **ಒಟ್ಟು** | **೩೯** | **೪೦** | **೩೫** | **೧೧೪** |

*ಪ್ರಾದೇಶಿಕ ಅಸಮಾನತೆ ಬಗ್ಗೆ ಮಾಹಿತಿಯನ್ನು ಡಾ॥ ಡಿ. ಎಂ. ನಂಜುಂಡಪ್ಪ ವರದಿಯಿಂದ ತೆಗೆದುಕೊಳ್ಳಲಾಗಿದೆ.*

ಕೃಷಿ ಸಂಬಂಧಿತ ಕ್ಷೇತ್ರದಲ್ಲಿ ಉತ್ತರ ಕರ್ನಾಟಕದ ೫೦ ತಾಲ್ಲೂಕುಗಳು, ದಕ್ಷಿಣ ಕರ್ನಾಟಕದ ೩೮ ತಾಲ್ಲೂಕುಗಳು ರಾಜ್ಯದ ಸರಾಸರಿಗಿಂತ ಕೆಳಗಿವೆ. ಇವುಗಳಲ್ಲಿ ಉತ್ತರ ಭಾಗದ ೨೧, ದಕ್ಷಿಣ ಭಾಗದ ೧೬ ತಾಲ್ಲೂಕುಗಳು ಕೃಷಿ ಮೂಲಭೂತ ಸೌಲಭ್ಯ ಮತ್ತು ಅಭಿವೃದ್ಧಿ ದೃಷ್ಟಿಯಿಂದ ಗಂಭೀರ ಸಮಸ್ಯೆಯ ಸುಳಿಯಲ್ಲಿವೆ. ನೀರಾವರಿ ವಿಚಾರದಲ್ಲಿ ನೀರು ಹಿಡಿದಿಟ್ಟಿದ್ದಾರೆ, ಬಳಸಿಲ್ಲ. ವಿದ್ಯುತ್‌ನಲ್ಲಿ ಉತ್ತರ ಕರ್ನಾಟಕ ೨೩೧೩ ಎಂ.ಯು. ಬಳಸಿದರೆ ದಕ್ಷಿಣ ಕರ್ನಾಟಕದಲ್ಲಿ ೭೩೨ ಎಂ.ಯು. ಬಳಕೆಯಾಗುತ್ತಿದೆ. ೯೦ ತಾಲ್ಲೂಕುಗಳಲ್ಲಿ ರಾಜ್ಯದ ಸರಾಸರಿ ರಸ್ತೆಗಿಂತ ಕಮ್ಮಿ ಇದೆ. ಮಾನವ ಅಭಿವೃದ್ಧಿ ಸೂಚ್ಯಂಕದಂತೆ ಉತ್ತರ ಕರ್ನಾಟಕದ ೫೯ ತಾಲ್ಲೂಕುಗಳು, ದಕ್ಷಿಣ ಕರ್ನಾಟಕದ ೫೬ ತಾಲ್ಲೂಕುಗಳು ಹಿಂದುಳಿದಿವೆ. ಶಿಕ್ಷಣದಲ್ಲಿ ೩೨ ತಾಲ್ಲೂಕುಗಳು, ವೈದ್ಯಕೀಯ ಸೌಲಭ್ಯದಲ್ಲಿ ೧೧೯ ತಾಲ್ಲೂಕುಗಳು ರಾಜ್ಯ ಸರಾಸರಿಗಿಂತ ಹಿಂದುಳಿದಿವೆ. ಕರ್ನಾಟಕ ಸರ್ಕಾರವು ಈ ಅಂತರವನ್ನು ಸರಿಪಡಿಸಲು ಕ್ರಿಯಾಶೀಲ ಯೋಜನೆ ರೂಪಿಸಿರುವುದು ಒಂದು ಒಳ್ಳೆಯ ಬೆಳವಣಿಗೆ.

**ಪ್ರಗತಿಯ ಪಥ ಸಾಗಿರುವುದೆತ್ತ**

ಖ್ಯಾತ ಅರ್ಥಶಾಸ್ತ್ರಜ್ಞ ಡಾ॥ ಪಿ. ಆರ್. ಬ್ರಹ್ಮಾನಂದ ಅವರು ಕರ್ನಾಟಕದ ಆರ್ಥಿಕ ಭವಿಷ್ಯ ಎಂಬ ಲೇಖನದಲ್ಲಿ 'ಕರ್ನಾಟಕದಲ್ಲಿ ರಾಜ್ಯ ಮಟ್ಟದ ಆರ್ಥಿಕ ಸಮಸ್ಯೆಗಳು ಸಾರ್ವಜನಿಕರ ಗಮನವನ್ನು ಎಷ್ಟು ಸೆಳೆಯಬೇಕೋ ಅಷ್ಟು ಸೆಳೆಯುತ್ತಿಲ್ಲ. ನಿಜ, ಕರ್ನಾಟಕಕ್ಕೆ ಯೋಜನೆಯನ್ನು ನಿರ್ವಹಿಸುವುದರಲ್ಲಿ, ಆರ್ಥಿಕ ವರದಿಯನ್ನು ಸಿದ್ಧಪಡಿಸುವುದರಲ್ಲಿ ಹಾಗೂ ಸರ್ವೇಕ್ಷಣೆಗಳನ್ನು ನಡೆಸುವುದರಲ್ಲಿ ಸುದೀರ್ಘವಾದ ಅನುಭವವಿದೆ. ಅದು ದಕ್ಷ ಆಡಳಿತಗಾರರನ್ನೂ ಪಡೆದಿದೆ. ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಲಹೆ-ನೀತಿ ನಿರೂಪಣೆಗಳಲ್ಲಿ ಸಹಕರಿಸುವ ಖ್ಯಾತ ಆರ್ಥಿಕ ತಜ್ಞರಿದ್ದಾರೆ. ೫೦ ಮತ್ತು ೬೦ರ ದಶಕಗಳ ಕಾಲಾವಧಿಯಲ್ಲಿ ಬೆಳೆದ ದರದಲ್ಲಿ ೭೦ರ ದಶಕದ ಮಧ್ಯಭಾಗದಿಂದ ೮೦ರ ದಶಕದ ಅಂತ್ಯದವರೆಗಿನ ಕಾಲಾವಧಿಯಲ್ಲಿ ಕರ್ನಾಟಕದ ಆರ್ಥಿಕತೆ ಏಕೆ ಬೆಳೆಯುತ್ತಿಲ್ಲ ಎಂಬುದು ನನಗೆ ಒಗಟಾಗಿ ಪರಿಣಮಿಸಿದೆ. (ಇದೇ ಪರಿಸ್ಥಿತಿ ಇಂದಿಗೂ ಮುಂದುವರಿದಿದೆ – *ಲೇಖಕ*) ಒಂದು ವೇಳೆ ಈ ಆರ್ಥಿಕ ಸ್ಥಗಿತತೆಯು ಹೀಗೇ ಮುಂದುವರಿದರೆ ಕಾಲಕ್ರಮೇಣ ಕರ್ನಾಟಕದ ಆರ್ಥಿಕತೆಯೂ ಬಿಹಾರದ ಆರ್ಥಿಕತೆಯಂತಾಗಿಬಿಡಬಹುದೆಂಬ ಭವಿಷ್ಯ ನುಡಿಯುವ ಮನಸ್ಸಾಗುತ್ತಿದೆ. ರಾಷ್ಟ್ರಮಟ್ಟದಲ್ಲಿ ಸರಾಸರಿಗಿಂತ ಉನ್ನತ ಸ್ಥಾನದಲ್ಲಿದ್ದ ಕರ್ನಾಟಕವು ಸಾವಕಾಶವಾಗಿ ಸರಾಸರಿಯ ಸ್ಥಾನಕ್ಕೆ ಜರುಗುತ್ತಿದೆ'' ಎಂದಿದ್ದಾರೆ. ಅವರ ಈ ಅಭಿಪ್ರಾಯ ಪುಷ್ಟೀಕರಿಸುವ ಸಂಗತಿಗಳು ಇಲ್ಲಿವೆ.

ಕರ್ನಾಟಕದ ಸಾಧನೆಗಳ ಬಗ್ಗೆ ಸಾಕಷ್ಟು ಪ್ರಚಾರ ನಡೆಯುತ್ತಿದೆ. ಆದರೆ, ಸಂಪತ್ತಿನ ಕೊರತೆಯಿಂದ ಕರ್ನಾಟಕದ ತಲಾ ಯೋಜನಾ ವೆಚ್ಚವು ರಾಷ್ಟ್ರೀಯ ಸರಾಸರಿಗಿಂತ ಕೆಳಗಿರುವುದಕ್ಕೆ ಸಮಜಾಯಿಷಿ ಏನು ? ಕರ್ನಾಟಕದ ತಲಾ ಯೋಜನೆ ವೆಚ್ಚ ೨೨೬೬ ರೂಪಾಯಿಗಳಾಗಿದ್ದರೆ, ಹರಿಯಾಣ ೩೨೪೧, ಪಂಜಾಬ್ ೨೫೯೧, ಮಧ್ಯಪ್ರದೇಶ ೨೪೮೦, ಮಹಾರಾಷ್ಟ್ರ ೨೩೧೭, ಆಂಧ್ರ ೨೩೦೬ ರೂಪಾಯಿಗಳಾಗಿದೆ. ೧೯೬೩ರಲ್ಲಿ ತಲಾ ಯೋಜನಾ ವೆಚ್ಚದಲ್ಲಿ ಪ್ರಥಮ ಸ್ಥಾನದಲ್ಲಿದ್ದ ಕರ್ನಾಟಕ ಇಂದು ೭ನೇ ಸ್ಥಾನಕ್ಕಿಳಿದಿದೆ. ರಾಜ್ಯದ ಹಣಕಾಸು ಕೊರತೆ ೧೯೯೧-೯೨ರಲ್ಲಿ ೫೧೩ ಕೋಟಿ ಇದ್ದುದು ಇಂದು ೫೧೨೭ ಕೋಟಿಗೆ ಏರಿದೆ. ಜಿಲ್ಲಾ ಪರಿಷತ್ತುಗಳ ಯೋಜನಾ ವೆಚ್ಚವು ೧೯೮೮ರಲ್ಲಿ ೩೨.೨೪%ರಷ್ಟಿದ್ದುದು ಇಂದು ಶೇ. ೨೦ಕ್ಕಿಳಿದಿದೆ. ೧೯೯೧ರಲ್ಲಿ ಆದಾಯದ ೧೧.೨%ರಷ್ಟು ಬಡ್ಡಿ ಮತ್ತು ಸಾಲದ ಕಂತಿಗೆ ಹೋಗುತ್ತಿದ್ದರೆ, ಇಂದು ೨೭.೩%ರಷ್ಟು ಹೋಗುತ್ತಿದೆ. ಸಾರ್ವಜನಿಕ ಉದ್ದಿಮೆಗಳಲ್ಲಿ ೨೨೦೦೦ ಕೋಟಿಗಳಷ್ಟು ಬಂಡವಾಳವನ್ನು ಹೂಡಿದ್ದಾರೆ. ಅದಕ್ಷ-ಅಸಮರ್ಪಕ ನಿರ್ವಹಣೆಯಿಂದಾಗಿ ಪ್ರತಿವರ್ಷ ೧೭೦೦ ಕೋಟಿ ನಷ್ಟ ಅನುಭವಿಸುತ್ತಿದೆ. ಇದರಾಚೆಗೆ ರಾಜ್ಯದ ಬೃಹತ್ ಯೋಜನೆಗಳ ವೈಫಲ್ಯ ಗುಟ್ಟಾಗಿ ಉಳಿದಿಲ್ಲ. ಈ ಅಂಕಿ-ಸಂಖ್ಯೆಗಳು ಅವಾಸ್ತವಿಕ ಆರ್ಥಿಕ ನೀತಿ ಮತ್ತು ಸಂಪತ್ತಿನ ಕ್ರೋಢೀಕರಣದ ವೈಫಲ್ಯತೆಗೆ ಸಾಕ್ಷಿಯಾಗಿವೆ.

**ಅಭಿವೃದ್ಧಿ ಎಷ್ಟು?**

ಸ್ವಾತಂತ್ರ್ಯ ಪೂರ್ವದಲ್ಲೇ ಎಂ. ವಿಶ್ವೇಶ್ವರಯ್ಯನವರಂತಹ ದೂರದರ್ಶಿತ್ವ ಉಳ್ಳವರ ನೇತೃತ್ವದಲ್ಲಿ ಸರ್ವಾಂಗೀಣ ಪ್ರಗತಿಗೆ ಭದ್ರ ಬುನಾದಿ ದೊರಕಿತ್ತು. ಆದರೂ ಏಕೀಕರಣದ ನಂತರ ಕರ್ನಾಟಕದ ಪ್ರಗತಿ ಮೂರನೇ ಪಂಚವಾರ್ಷಿಕ ಯೋಜನೆಯಿಂದ ಇಂದಿನವರೆಗೆ ರಾಷ್ಟ್ರೀಯ ಸರಾಸರಿಗಿಂತ ಕೆಳಗಿರುವುದನ್ನು ಇಲ್ಲಿನ ಅಂಕಿ-ಸಂಖ್ಯೆಗಳು ಸಾದರಪಡಿಸುತ್ತವೆ.

ಆರ್ಥಿಕ (ಉತ್ಪಾದನೆ) ಬೆಳವಣಿಗೆಯನ್ನು ೩ ವಲಯಗಳಾಗಿ ವಿಂಗಡಿಸುತ್ತಾರೆ. ಪ್ರಥಮ ವಲಯದಲ್ಲಿ

| ಪಂಚವಾರ್ಷಿಕ ಯೋಜನೆ | ಕರ್ನಾಟಕ | | ಭಾರತ | |
|---|---|---|---|---|
| | ೮೦-೮೧ರ ಬೆಲೆಯಲ್ಲಿ | ಪ್ರಸ್ತುತ ಬೆಲೆಯಲ್ಲಿ | ೮೦-೮೧ರ ಬೆಲೆಯಲ್ಲಿ | ಪ್ರಸ್ತುತ ಬೆಲೆಯಲ್ಲಿ |
| ಮೂರನೇ ಯೋಜನೆ | ೨.೧೩ | ೧೦.೬೧ | ೨.೪೨ | ೯.೪೬ |
| ನಾಲ್ಕನೇ ಯೋಜನೆ | ೪.೨೫ | ೧೩.೧೯ | ೩.೩೨ | ೧೧ |
| ಐದನೇ ಯೋಜನೆ | ೪.೧ | ೭.೧೬ | ೫ | ೧೦.೩೬ |
| ಆರನೇ ಯೋಜನೆ | ೩.೮ | ೧೪.೫೪ | ೫.೪ | ೧೫ |
| ಏಳನೇ ಯೋಜನೆ | ೫.೪ | ೧೩.೩೧ | ೫.೮೪ | ೧೪.೧ |
| ಎಂಟನೇ ಯೋಜನೆ | ೪.೯ | ೧೧.೩೪ | ೬.೮ | ೧೬.೩ |
| ಒಂಬತ್ತನೇ ಯೋಜನೆ | ೫.೭ | - | ೬.೧ | -೭ |

* ಆಧಾರ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ

(ಕೃಷಿ, ಹೈನುಗಾರಿಕೆ, ಕಾಡು), ದ್ವಿತೀಯ ವಲಯ (ಉತ್ಪಾದನೆ, ಗಣಿ, ವಿದ್ಯುತ್, ನೀರು ಸರಬರಾಜು, ನಿರ್ಮಾಣ, ಗೃಹ ಕೈಗಾರಿಕೆ) ಮತ್ತು ತೃತೀಯ ವಲಯದಲ್ಲಿ (ವ್ಯಾಪಾರ, ವಾಣಿಜ್ಯ ಸಾರಿಗೆ, ಸೇವೆ, ಇತ್ಯಾದಿ) .

ರಾಜ್ಯದ ಉತ್ಪಾದನಾ ಪ್ರಗತಿಯು ಕೆಟ್ಟದೆ ಎಂದು ಹೇಳುವುದು ಸರಿಯಾಗಲಾರದು. ಆದರೆ ರಾಷ್ಟ್ರೀಯ ಸರಾಸರಿಯು ರಾಜ್ಯದ ಪ್ರಗತಿಗಿಂತ ನಿರಂತರವಾಗಿ ಮೇಲಿರುವುದನ್ನು ಗಮನಿಸಿದಾಗ ನಿರೀಕ್ಷಿತ ಬೆಳವಣಿಗೆ ಆಗಿಲ್ಲ ಎಂದು ಹೇಳಬಹುದು. ರಾಷ್ಟ್ರಮಟ್ಟದಲ್ಲಿ ದೊಡ್ಡ ಹೆಸರು ಮಾಡಿರುವ ಬೆಂಗಳೂರು ಸೇರಿದಂತೆ ರಾಜ್ಯದಲ್ಲಿ ಸಾಕಷ್ಟು ಕೈಗಾರಿಕೆ, ಸೇವಾ ವಲಯಗಳಿದ್ದರೂ ಕೃಷಿ ಆಧಾರಿತ ಚಟುವಟಿಕೆಗಳನ್ನು ಹಿಮ್ಮೆಟ್ಟಲು ಸಾಧ್ಯವಾಗದೆ, ಇಂದಿಗೂ ರಾಜ್ಯದ ಹೆಚ್ಚು ಉತ್ಪಾದನೆಯು ಪ್ರಥಮ ವಲಯದಿಂದಲೇ ಬರುತ್ತಿದೆ. ಮತ್ತು ಕರ್ನಾಟಕವು ಕೈಗಾರಿಕೆ ಮತ್ತು ಮೂಲಭೂತ ಸೌಲಭ್ಯದ ಮಹತ್ವವನ್ನು ಅರಿತಿಲ್ಲ ಮತ್ತು ಆಗಿರುವ ಲೋಪವನ್ನು ಸರಿಪಡಿಸಲು ಪ್ರಯತ್ನಿಸಿಲ್ಲ ಎಂಬುದನ್ನು ಕೆಳಗಿನ ಅಂಕಿ – ಅಂಶಗಳು ಸ್ಪಷ್ಟಪಡಿಸುತ್ತವೆ. ೧೯೭೦ರಿಂದ ದ್ವಿತೀಯ ವಲಯದ ಬೆಳವಣಿಗೆ ಸ್ಥಗಿತವಾಗಿದೆ.

| | ೮೦-೮೧ | ೯೦-೯೧ | ೯೨-೯೩ | ೯೪-೯೫ |
|---|---|---|---|---|
| **ಕರ್ನಾಟಕ** | | | | |
| ಪ್ರಥಮ ವಲಯ | ೪೬ | ೩೫ | ೩೭ | ೩೪ |
| ಎರಡನೇ ವಲಯ | ೨೧ | ೨೪ | ೨೩ | ೨೫ |
| ಮೂರನೇ ವಲಯ | ೩೩ | ೪೧ | ೪೦ | ೪೧ |
| **ಭಾರತ** | | | | |
| ೧ನೇ ವಲಯ | ೪೧ | ೩೪ | ೩೪ | ೩೧ |
| ೨ನೇ ವಲಯ | ೨೩ | ೨೭ | ೨೫ | ೨೮ |
| ೩ನೇ ವಲಯ | ೩೬ | ೩೯ | ೪೧ | ೪೧ |

**ವಲಯವಾರು ಯೋಜನಾವಾರು ಪ್ರಗತಿ(೮೦-೮೧ರ ಸ್ಥಿರ ಬೆಲೆಯಲ್ಲಿ)**

| ಯೋಜನೆ | ಕರ್ನಾಟಕ | | ಭಾರತ | |
|---|---|---|---|---|
| | ಪ್ರಥಮ | ದ್ವಿತೀಯ | ಪ್ರಥಮ | ದ್ವಿತೀಯ |
| ಮೂರನೇ | ೦.೧೩ | ೯.೧೪ | .೦೯ | ೬.೮೮ |
| ನಾಲ್ಕು | ೩.೨ | ೬.೭೬ | ೨.೭೨ | ೩.೮೫ |
| ಐದು | ೨.೫೪ | ೫.೯೨ | ೩.೬೪ | ೬.೪೪ |
| ಆರು | ೩.೨೪ | ೧.೪೨ | ೫.೭೬ | ೬.೦೭ |
| ಏಳು | ೨ | ೮.೭ | ೩.೬೬ | ೭.೪೬ |
| ಎಂಟು | ೪.೪೮ | ೪.೫೪ | ೪.೬೬ | ೫.೭೩ |

ರಾಜ್ಯದ ನಿವ್ವಳ ಆದಾಯ ೧೯೫೬-೫೭ರಲ್ಲಿ ೪೯೫ ಕೋಟಿ ಇದ್ದುದು ೭೧ರಲ್ಲಿ ೯೩೦ ಕೋಟಿಗೆ ಏರಿತು. ೧೯೬೦-೬೧ರಿಂದ ೧೯೯೬-೯೭ರ ನಡುವೆ ರಾಜ್ಯದ ನಿವ್ವಳ ಆದಾಯವು ೧೯೮೧ರ ಸ್ಥಿರ ಬೆಲೆಯಲ್ಲಿ ೨೯೭೭ ಕೋಟಿಯಿಂದ ೧೩೦೪೭ ಕೋಟಿಗೆ ಏರಿತು. ಇಂದು ೧೭೦೦೦ ಕೋಟಿಗೆ ಏರಿದೆ ಎಂದು ಅಂದಾಜು ಮಾಡಲಾಗಿದೆ. ಆದರೆ ತಲಾ ಆದಾಯವು ಇದೇ ಅವಧಿಯಲ್ಲಿ ೧೨೭೩ರಿಂದ ೨೬೬೮ಕ್ಕೆ ಏರಿತು ಅಂದರೆ ಎರಡು ಪಟ್ಟು ಮಾತ್ರ ಹೆಚ್ಚಿದೆ. ಬಡತನವು ಕಡಿಮೆ ಆಗಿದ್ದರೂ ಸರ್ಕಾರದ ಅಂಕಿ ಅಂಶವೇ ಪ್ರತಿ ೪ ಜನರಲ್ಲಿ ಒಬ್ಬರು ಬಡತನದ ರೇಖೆಗಿಂತ ಕೆಳಗಿದ್ದಾರೆ ಅನ್ನುತ್ತದೆ. ಕೆಲವರು ಇದನ್ನು ಪ್ರಶ್ನಿಸಿದ್ದಾರೆ.

**ಆರ್ಥಿಕ ಬೆಳವಣಿಗೆಯ ಅತಂತ್ರ ಸ್ಥಿತಿ**

ಕಳವಳಕಾರಿಯಾದ ಸಂಗತಿಯೆಂದರೆ ೫ನೇ ಪಂಚವಾರ್ಷಿಕ ಯೋಜನೆಯಿಂದ ಅಂದರೆ ಸುಮಾರು ¼ ಶತಮಾನದಿಂದ ರಾಷ್ಟ್ರೀಯ ಸರಾಸರಿಯಷ್ಟು ಪ್ರಗತಿಯನ್ನು ದಾಖಲಿಸಲು ರಾಜ್ಯವು ವಿಫಲವಾಗಿರುವುದಾಗಿದೆ. ಯೋಜನೆಗಳ ಅನುಷ್ಠಾನದಲ್ಲಿ ಭದ್ರ ಬುನಾದಿ, ಪೂರಕವಾಗಿ ಪ್ರಕೃತಿ ಮತ್ತು ಮಾನವ ಸಂಪನ್ಮೂಲಗಳು ಹೇರಳವಾಗಿದ್ದರೂ, ರಾಜ್ಯವು ಯಶ ಸಾಧಿಸುವಲ್ಲಿ ಎಡವಿರುವುದು ಅರ್ಥವಾಗದ ಸಂಗತಿ. ೧೯೭೧ರಲ್ಲಿ ಕರ್ನಾಟಕದ ತಲಾ ಆದಾಯ ೬೮೫ ಇದ್ದು ರಾಷ್ಟ್ರದ ಸರಾಸರಿ ೬೩೩ ಆಗಿತ್ತು. ೧೯೮೧ರಲ್ಲಿ ಇದು ೬೩೭ ಮತ್ತು ೬೯೭ ಆಯಿತು. ಇದಕ್ಕೆಲ್ಲ ಕಾರಣ ಯೋಜನೆಗಳ ಅನುಷ್ಠಾನದ ಮಂದಗತಿಯೇ ಆಗಿದೆ. ೧೯೬೨ರಲ್ಲಿ ಪ್ರಾರಂಭವಾದ ಕೃಷ್ಣ ಕಣಿವೆಯ ಯೋಜನಾ ವೆಚ್ಚ ೧೨೭ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಿ ▪ ವರ್ಷಗಳಲ್ಲಿ ಪೂರ್ಣವಾಗುವುದೆಂದು ಹೇಳಲಾಗಿತ್ತು. ಆದರೆ ಯೋಜನೆಯ ಅನುಷ್ಠಾನದಲ್ಲಿ ಶಿಸ್ತಿನ ಕೊರತೆ, ಅನಗತ್ಯ ಮಾರ್ಪಾಡು, ಜಲ ವಿವಾದಗಳಿಂದಾಗಿ ೪೦ ವರ್ಷಗಳು ಕಳೆದ ನಂತರವೂ ಈ ಯೋಜನೆ ಪೂರ್ಣಗೊಂಡಿಲ್ಲ. ಅಂದಾಜು ವೆಚ್ಚದ ೧೦೦ ಪಟ್ಟು ಹೆಚ್ಚು ಖರ್ಚಾಗಿದೆ. ೧೯೭೩ರಿಂದ ಬಡತನ ಸರಾಸರಿ ವರ್ಷಕ್ಕೆ ೧%ರಷ್ಟು ಮಾತ್ರ ಕಮ್ಮಿ ಆಗಿದೆ.

**ಆರ್ಥಿಕತೆಯ ವಾಸ್ತವ ಸ್ಥಿತಿ**

- ರಾಜ್ಯ ಸರ್ಕಾರವು ವಿಶ್ವಬ್ಯಾಂಕ್ ಸೇರಿದಂತೆ ವಿವಿಧ ಮೂಲಗಳಿಂದ ಈವರೆಗೆ ಪಡೆದಿರುವ ಸಾಲದ ಮೊತ್ತ ಸುಮಾರು ೩೨೦೦೦ ಕೋಟಿ ರೂಪಾಯಿಗಳು. ಈ ಸಾಲಿನ ಬಜೆಟ್‌ನಲ್ಲಿ ೨೮%ರಷ್ಟು ಸಾಲದಿಂದ ನಿರೀಕ್ಷಿಸಲಾಗಿದೆ. ಅಂದರೆ ಸುಮಾರು ೭೫೦೦ ಕೋಟಿ ರಾಜ್ಯದ ಆದಾಯದಲ್ಲಿ ೧೫%ರಷ್ಟು ಬಡ್ಡಿಯನ್ನೇ ಕೊಡಬೇಕಾಗುತ್ತದೆ. ಅಸಲು ತೀರಿಸುವುದು ಹೇಗೆ ? ಆನಂತರ ರಾಜ್ಯ ನಡೆಸುವುದು ಹೇಗೆ ?
- ಇದಲ್ಲದೆ ಕೃಷ್ಣ ಜಲನಿಗಮ ಬಾಂಡುಗಳ ಮೂಲಕ ಸಂಗ್ರಹಿಸುವ ೫೦೦೦ ಕೋಟಿಯನ್ನು ೩ ವರ್ಷಗಳ ನಂತರ ಬಡ್ಡಿ ಸಮೇತ ಹಿಂದಿರುಗಿಸಬೇಕಿದೆ.
- ಅತ್ಯಂತ ಮಹತ್ವದ ಮತ್ತು ಅತ್ಯಗತ್ಯವಾದ ಯೋಜನೆ ಎಂದು ಪರಿಗಣಿಸಲ್ಪಟ್ಟಿರುವ ಕೆರೆಗಳ ಹೂಳೆತ್ತುವ ಯೋಜನೆಗೆ ೪೦೦ ಕೋಟಿ ರೂ. ಸಾಲ ಪಡೆದಿದೆ. ಅಬ್ಬರದ ಪ್ರಚಾರದೊಂದಿಗೆ ಹೂಳೆತ್ತುವ ಕಾರ್ಯದ ಉದ್ಘಾಟನೆ ಆಯಿತು. ತಮಿಳುನಾಡಿನ ಆಕ್ಷೇಪಣೆ ಹಾಗೂ ಅಧಿಕಾರಿಶಾಹಿಗಳ ಕೆಂಪು ಪಟ್ಟಿಯಿಂದ ಕೆಲಸ ಪೂರ್ಣಪ್ರಮಾಣದಲ್ಲಿ ಆರಂಭವೇ ಆಗಲಿಲ್ಲ.
- ವಾಣಿಜ್ಯ ತೆರಿಗೆ ಮತ್ತು ಅಬಕಾರಿ ಬಾಬ್ತು ೬೦೦೦ ಕೋಟಿ ರೂ. ಗಳನ್ನು ಸಂಗ್ರಹಿಸುವ ಗುರಿಯನ್ನು ೨೦೦೦-೦೧ರಲ್ಲಿ ಹೊಂದಲಾಗಿತ್ತು. ಆದರೆ, ಸಂಗ್ರಹವಾದದ್ದು ೩೫೦೦ ಕೋಟಿ ಮಾತ್ರ. ನಕಲಿ ಛಾಪ ಕಾಗದದ ಜಾಲದಿಂದ ಸಾವಿರಾರು ಕೋಟಿ ನಷ್ಟವಾಗಿದೆ.
- ರಾಜ್ಯದ ತೆರಿಗೆಯೇತರ ಆದಾಯ ದಶಕಗಳ ಹಿಂದೆ ೧೨%ರಷ್ಟಿದ್ದುದು, ಇಂದು ೯%ಕ್ಕಿಳಿದಿದೆ.
- ೧೯೯೯-೨೦೦೦ ದ ಸಾಲಿನಲ್ಲಿ ತೆರಿಗೆ ಮತ್ತಿತರ ಮೂಲಗಳಿಂದ ೮೦೨೫ ಕೋಟಿ ರೂ.ಗಳನ್ನು ಸಂಗ್ರಹಿಸಲಾಯಿತು. ರಾಜ್ಯ ಸರ್ಕಾರದ ೬ ಲಕ್ಷ ನೌಕರರ ಸಂಬಳ ಮತ್ತು ನಿವೃತ್ತ ನೌಕರರ ಪಿಂಚಣಿಗೇ ೬೧೦೦ ಕೋಟಿ ಖರ್ಚಾಗಿದೆ. ಇದರಾಚೆಗೆ ಕೈಗಾರಿಕೆಗಳ ನಷ್ಟ, ನಿಗಮಗಳ ಸಾಲ ಇವೆಲ್ಲ ನೆನೆದರೆ ನಾಳೆಗಳು ನಡುಕ ಹುಟ್ಟಿಸುತ್ತವೆ.
- ೧೯೮೦-೮೧ರಿಂದ ೧೯೯೦-೯೧ರ ವರೆಗಿನ ಅವಧಿಯಲ್ಲಿ ಕರ್ನಾಟಕದ ನಿವ್ವಳ ದೇಶೀಯ ಉತ್ಪನ್ನವು ೫೬೦೦ ಕೋಟಿ ರೂಪಾಯಿಗಳಿಂದ ೯೯೦೦ ಕೋಟಿಗೇರಿತ್ತು. ಈ ಅವಧಿಯಲ್ಲಿನ ವಾರ್ಷಿಕ ಬೆಳವಣಿಗೆ ದರವಾದ ೪.೮೯%, ಅಖಿಲ ಭಾರತ ಮಟ್ಟದ ಬೆಳವಣಿಗೆ ದರ ೫.೫%ಕ್ಕಿಂತ ಕೆಳಗಿದೆ. ಆರ್ಥಿಕ ಅಭಿವೃದ್ಧಿ ಮಾನದಂಡದ ದೃಷ್ಟಿಯಿಂದ ಕರ್ನಾಟಕ ಕೆಳಗಿಳಿಯುತ್ತಿರುವುದಕ್ಕೆ ಇದು ಸ್ಪಷ್ಟ ಉದಾಹರಣೆ.

ಅಭಿವೃದ್ಧಿ ಅನ್ನುವುದು ಒಂದು ಸತತ ಕ್ರಿಯೆ. ಮೇಲಿನ ಕೋಷ್ಟಕದಲ್ಲಿನ ಅಂಶಗಳು ಆಶಾದಾಯಕವಾಗಿ ಕಾಣಿಸುತ್ತವೆ. ಆದರೆ, ಆಂತರಿಕ ಉತ್ಪನ್ನದ ಹೆಚ್ಚಳವನ್ನು ಅಭಿವೃದ್ಧಿ ಎಂದು ಹೇಳಿದರೆ ಅರ್ಧಸತ್ಯವಾಗುತ್ತದೆ. ಕಾರಣ ಇತ್ತೀಚಿನ ಸರ್ವೇಕ್ಷಣಾದಂತೆ

## ಕೋಷ್ಟಕ -೩
### ೧೯೯೩-೯೪ರಿಂದ ೨೦೦೧-೨೦೦೨ರವರೆಗೆ
### ಕರ್ನಾಟಕ ರಾಜ್ಯದ ನಿವ್ವಳ ಆಂತರಿಕ ಉತ್ಪನ್ನ ಹಾಗೂ ನಿವ್ವಳ ತಲಾವಾರು ಆದಾಯ

| ವರ್ಷ | ಪ್ರಸಕ್ತ ಬೆಲೆಗಳಲ್ಲಿ | | | | ಸ್ಥಿರ (೧೯೯೩-೯೪) ಬೆಲೆಗಳಲ್ಲಿ | | | |
|---|---|---|---|---|---|---|---|---|
| | ಒಟ್ಟು ನಿವ್ವಳ ಆಂತರಿಕ ಉತ್ಪನ್ನ (ಕೋಟಿ ರೂ.ಗಳಲ್ಲಿ) | ಶೇಕಡಾ ವಾರು ಬೆಳವಣಿಗೆ | ತಲಾ ಆದಾಯ (ರೂ. ಗಳಲ್ಲಿ) | ಶೇಕಡಾ ವಾರು ಬೆಳವಣಿಗೆ | ಒಟ್ಟು ನಿವ್ವಳ ಆಂತರಿಕ ಉತ್ಪನ್ನ (ಕೋಟಿ ರೂ.ಗಳಲ್ಲಿ) | ಶೇಕಡಾ ವಾರು ಬೆಳವಣಿಗೆ | ತಲಾ ಆದಾಯ (ರೂ. ಗಳಲ್ಲಿ) | ಶೇಕಡಾ ವಾರು ಬೆಳವಣಿಗೆ |
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧೯೯೩-೯೪ | ೩೬೯೮೨ | - | ೭೮೩೮ | - | ೩೬೯೮೨ | - | ೭೮೩೮ | - |
| ೧೯೯೪-೯೫ | ೪೩೦೬೫ | ೧೬.೪ | ೮೯೬೦ | ೧೪.೩ | ೩೮೯೧೭ | ೫.೨ | ೮೦೯೭ | ೩.೩ |
| ೧೯೯೫-೯೬ | ೫೦೦೨೮ | ೧೬.೨ | ೧೦೨೧೭ | ೧೪.೦ | ೪೦೯೭೪ | ೫.೩ | ೮೩೬೮ | ೩.೪ |
| ೧೯೯೬-೯೭ | ೫೮೦೭೧ | ೧೬.೧ | ೧೧೬೭೦ | ೧೪.೨ | ೪೪೭೩೭ | ೯.೨ | ೮೯೯೦ | ೭.೪ |
| ೧೯೯೭-೯೮ | ೬೩೪೧೪ | ೯.೨ | ೧೨೫೬೬ | ೭.೭ | ೪೬೫೧೯ | ೪.೦ | ೯೨೧೮ | ೨.೫ |
| ೧೯೯೮-೯೯ | ೭೮೮೭೪ | ೨೪.೪ | ೧೫೪೨೦ | ೨೨.೭ | ೫೪೨೫೫ | ೧೬.೬ | ೧೦೬೦೭ | ೧೫.೧ |
| ೧೯೯೯-೨೦೦೦ | ೮೬೨೯೬ | ೯.೪ | ೧೬೬೫೪ | ೮.೦ | ೫೮೩೧೩ | ೭.೫ | ೧೧೨೫೪ | ೬.೧ |
| ೨೦೦೦-೨೦೦೧* | ೯೪೬೩೫ | ೯.೭ | ೧೮೦೪೧ | ೮.೩ | ೬೨೪೭೭ | ೭.೧ | ೧೧೯೧೦ | ೫.೮ |
| ೨೦೦೧-೨೦೦೨** | ೧೦೧೪೬೮ | ೭.೨ | ೧೯೧೧೮ | ೬.೦ | ೬೫೫೨೮ | ೪.೯ | ೧೨೩೪೬ | ೩.೭ |

*ಶೀಘ್ರ ಅಂದಾಜುಗಳು **ನಿರೀಕ್ಷಿತ ಅಂದಾಜುಗಳು

ಆಧಾರ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು

ಕರ್ನಾಟಕದಲ್ಲಿ ಬಡತನದ ರೇಖೆಗಿಂತ ಕೆಳಗಿರುವವರ ಸಂಖ್ಯೆ ೨೯%. ತಲಾ ಆದಾಯದ ದೃಷ್ಟಿಯಿಂದ ೧೧ನೇ ಸ್ಥಾನಕ್ಕಿಳಿದಿದೆ. ಪಕ್ಕದ ರಾಜ್ಯಗಳಾದ ಮಹಾರಾಷ್ಟ್ರದ ತಲಾ ಆದಾಯ ೨೨೬೦೪ ರೂ.ಗಳಾಗಿದ್ದು ತಮಿಳುನಾಡು ೧೮೬೨೩, ಕೇರಳ ೧೮೨೬೨ ರೂ. ಗಳಾಗಿದ್ದು ಕರ್ನಾಟಕದ ತಲಾ ಆದಾಯ ೧೬೨೪೨ ರೂ. ಗಳಾಗಿದ್ದು ರಾಷ್ಟ್ರದ ತಲಾ ಆದಾಯ ೧೫೯೬೨ಕ್ಕೆ ಸಮೀಪದಲ್ಲಿದೆ. ತೆರಿಗೆಯೇತರ ಆದಾಯ ೧೨%ರಷ್ಟಿದ್ದು ಇಂದು ೯%ಕ್ಕಿಳಿದಿದೆ. ತಲಾ ಆಂತರಿಕ ಉತ್ಪನ್ನದಲ್ಲಿ ಕರ್ನಾಟಕ ೧೨ನೇ ಸ್ಥಾನದಲ್ಲಿದೆ. ಪಕ್ಕದ ರಾಜ್ಯಗಳಾದ ತಮಿಳುನಾಡು ೨ನೇ ಸ್ಥಾನ, ಕೇರಳ ೪ನೆಯ, ಮಹಾರಾಷ್ಟ್ರ ೮ನೇ ಹಾಗೂ ಆಂಧ್ರ ೧೦ನೇ ಸ್ಥಾನದಲ್ಲಿವೆ.

**ಕರ್ನಾಟಕದ ಪ್ರಗತಿ ಹೀಗೇಕೆ ?**

**ತಜ್ಞರ ಎರಡು ದೃಷ್ಟಿ**

'ಕರ್ನಾಟಕದಲ್ಲಿ ಆರ್ಥಿಕಾಭಿವೃದ್ಧಿಯನ್ನು ತ್ವರಿತಗೊಳಿಸುವ ಪ್ರಯತ್ನ ನಡೆದಿದ್ದರೂ ಸಹ ಬಡತನ, ನಿರುದ್ಯೋಗ, ಆರ್ಥಿಕ ಅಸಮಾನತೆಗಳು ಮುಂದುವರಿದಿರುವುದು ಒಂದು ಅಸಂಗತವೇ ಸರಿ. ಇಂತಹ ಅಸಂಗತಕ್ಕೆ ಕಾರಣವೆಂದರೆ ಯೋಜನಾ ಕಾರ್ಯಗತಿಯಲ್ಲಿ ಇಲ್ಲಿಯತನಕ ಕೈಗೊಂಡಂತಹ ಅಭಿವೃದ್ಧಿ. ವ್ಯೂಹದ ಸ್ವಭಾವ. ಇಲ್ಲಿಯತನಕ ಯೋಜನೆಗಳನ್ನು ರಾಜಧಾನಿಯಲ್ಲಿಯೇ ಕುಳಿತು ತಜ್ಞರು ರಚಿಸಿದ ಕಾರಣ, ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಅವು ರೂಪಿತಗೊಳ್ಳಲಿಲ್ಲ ಹಾಗೂ ಅವುಗಳ ಅನುಷ್ಠಾನದಲ್ಲೂ ತೊಂದರೆ ಉಂಟಾಯಿತು. ಇದಲ್ಲದೆ ಹೆಚ್ಚಿನ ಪ್ರಮಾಣದಲ್ಲಿ ಬೃಹತ್ ಯೋಜನೆಗಳನ್ನು ಕೈಗೊಂಡ ಕಾರಣ ಅವುಗಳಿಂದ ಸಾಮಾನ್ಯ ಜನರಿಗೆ ಬೇಕಾಗುವಂತಹ ಉದ್ಯೋಗಾವಕಾಶಗಳ ಸೃಷ್ಟಿಯೂ ತಕ್ಕ ಪ್ರಮಾಣದಲ್ಲಿ ಆಗಲಿಲ್ಲ' ಎಂದು ಡಾ|| ಅಬ್ದುಲ್ ಅಜೀಜ್ ಹೇಳುತ್ತಾರೆ.

'ಅತಿಯಾದ ರಾಜಕೀಯ ಅವಕಾಶವಾದಿತ್ವದ ಇಂದಿನ ಸನ್ನಿವೇಶದಲ್ಲಿ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಅಲ್ಪಾವಧಿಯ ವೈಯಕ್ತಿಕ ಲಾಭಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಶಾಶ್ವತ ಪ್ರಯೋಜನ ಇಲ್ಲದ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ ಎಂದು ಪ್ರೊ|| ಯು. ಆರ್. ರಾವ್ ಅನಿಸಿಕೆ.

ರಾ. ನಂ. ಚಂದ್ರಶೇಖರ
ಶ್ರೀ ಲಕ್ಷ್ಮಿ ಕೆಮಿಕಲ್ಸ್, ನಂ. ೬, ರಾಘವೇಂದ್ರ ಕಾಂಪ್ಲೆಕ್ಸ್
೨ನೇ ಅಡ್ಡರಸ್ತೆ, ಸಿ.ಕೆ. ಜಿ. ಗಾರ್ಡನ್. ಬೆಂಗಳೂರು-೨೭

# ಕನ್ನಡ ಸಾಹಿತ್ಯ - ಧರ್ಮ ಸಾಮರಸ್ಯದ ನೆಲೆಗಳು

*'ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ*
*ವೇದಾಂತಿನೋ*
*ಅರ್ಹನ್ನಿತ್ಯಥ ಜೈನಶಾಸನ ರತಾಃ ಕರ್ಮೇತಿ ಮೀಮಾಂಸಕಾಃ*
*ಬೌದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ*
*ಯೋಯಂವೈದದಾತು ವಾಂಛಿತಫಲಂ ಶ್ರೀ ಕೇಶವಸ್ಸದಾ॥"*

ಸಾಮರಸ್ಯವೆಂದರೆ ಬಗೆಬಗೆಯ ವೈವಿಧ್ಯಮಯ ವಸ್ತುಗಳ, ವಿಷಯಗಳ ಅಥವಾ ಅಂಗಗಳ ನಡುವೆ ಇರುವ ಹೊಂದಾಣಿಕೆ, ಅನ್ಯೋನ್ಯತೆ, ಸಮಗ್ರ ಸೌಂದರ್ಯ. ಅನೇಕ ರಸಗಳು ಕೂಡಿ ಸಮರಸ - ಸಾಮರಸ್ಯ ಉಂಟಾಗುತ್ತದೆ. ಉಪ್ಪು ಹುಳಿ ಖಾರ ಕಹಿ ಸಿಹಿ ಮುಂತಾದವು ಸೇರಿ ರುಚಿಯಾದ ಭೋಜನವಾಗುವಂತೆ – ಅನೇಕ ಶ್ರುತಿಗಳು ಕೂಡಿ ಸಂಗೀತವಾಗುವಂತೆ. ಇದನ್ನೇ Harmony in Variety ಎನ್ನುತ್ತಾರೆ. ಈ ಸಾಮರಸ್ಯ ನೆಲೆಗೊಂಡಾಗ ಬದುಕು ಸುಂದರವಾಗುತ್ತದೆ, ಸುಖಮಯವಾಗುತ್ತದೆ. ಸಾಮರಸ್ಯವಿಲ್ಲದಾಗ ಬದುಕು ನೀರಸವೋ, ವಿರಸವೋ, ಅಸಹ್ಯವೋ ಆಗುತ್ತದೆ. ಸಾಮರಸ್ಯವು ಜಗತ್ತನ್ನು ನಡೆಸುವ ಬಹುದೊಡ್ಡ ಸತ್ಯ. ದೇಹದ ವಿವಿಧ ಅಂಗಾಂಗಗಳ ಚಟುವಟಿಕೆಗಳ ನಡುವಿರುವ ಸಾಮರಸ್ಯದಿಂದ ಹಿಡಿದು ವಿಶ್ವದ ಎಲ್ಲ ವ್ಯಾಪಾರಗಳು, ಪಂಚಭೂತಗಳು, ಜಡ ಚೇತನಗಳು, ಸಸ್ಯ - ಪ್ರಾಣಿಕೋಟಿಗಳು, ಋತುಮಾನ ಭೇದಗಳು, ಸೃಷ್ಟಿಲಯಗಳು, ಆಕಾಶಕಾಯಗಳು ಇವೆಲ್ಲವುಗಳ ನಡುವೆ ಸಾಮರಸ್ಯ ತಂತಾನೇ ನಡೆದಿದೆ.

ದೇಶದ ಸಮಗ್ರತೆಯಲ್ಲಿ ಎಲ್ಲ ರಾಜ್ಯಗಳ ನಡುವೆ, ಜನಾಂಗ, ಭಾಷೆ, ಜಾತಿ ಮತ, ಸಂಸ್ಕೃತಿಗಳ ನಡುವೆ ಸಾಮರಸ್ಯ ಬೇಕೇಬೇಕು. ರಾಜ್ಯಾಡಳಿತದಲ್ಲಿ ಎಲ್ಲ ಇಲಾಖೆಗಳ ನಡುವೆ, ಪ್ರತಿ ಇಲಾಖೆಯಲ್ಲಿ ಎಲ್ಲ ಹಂತ ಆಯಾಮಗಳ ನಡುವೆ ಸಾಮರಸ್ಯ ಇರಲೇಬೇಕು. ಆಧುನಿಕ ಯುಗದಲ್ಲಿ ಎಲ್ಲ ರಾಷ್ಟ್ರಗಳ ನಡುವೆ, ಪೂರ್ವ ಪಶ್ಚಿಮಗಳ ನಡುವೆ, ವಿಭಿನ್ನ ರಾಜಕೀಯ - ಧಾರ್ಮಿಕ ಸಿದ್ಧಾಂತಗಳನ್ನು ಆಧಾರವಾಗಿ ಹೊಂದಿರುವ ದೇಶ ಜನಾಂಗಗಳ ನಡುವೆ ಸಾಮರಸ್ಯ ಬೇಕಾಗಿದೆ.

ಭಾರತದಂಥ ವೈವಿಧ್ಯಮಯ ಭಾಷೆಗಳು, ಜನಾಂಗಗಳು, ಜಾತಿ ಉಪಜಾತಿ, ವರ್ಣಗಳು, ಮತ ಧರ್ಮ ಸಂಸ್ಕೃತಿಗಳು, ವಿಭಿನ್ನ ನಾಗರಿಕ ಹಂತಗಳು, ಮುಂತಾದವುಗಳನ್ನು ಹೊಂದಿರುವ ದೇಶದಲ್ಲಿ ಜನರು ಸುಖ ನೆಮ್ಮದಿಯಿಂದ ಬಾಳಲು ಸಾಮರಸ್ಯ-ಭಾವೈಕ್ಯ ಅತ್ಯಂತ ಮುಖ್ಯವಾದ ಮಾರ್ಗದರ್ಶಕ ಸೂತ್ರವಾಗುತ್ತದೆ. ಪ್ರಾಚೀನ ಕಾಲದಿಂದಲೂ ಇಲ್ಲಿನ ಬೌದ್ಧಿಕ ಮತ್ತು ಭಾವನಾತ್ಮಕ ಚಿಂತನೆಗಳೆಲ್ಲಾ ಈ ದಿಶೆಯಲ್ಲೇ ಸಾಗಿ ಬಂದಿವೆಯೆಂಬುದನ್ನು ಗುರುತಿಸಬಹುದು. ಎಲ್ಲ ವೈವಿಧ್ಯಗಳ ವೈರುಧ್ಯಗಳ ನಡುವೆ ಹೊರಗಿನಿಂದ ಬಂದ ಅನೇಕ ಪ್ರಭಾವಗಳನ್ನೂ ಅರಗಿಸಿಕೊಂಡು ತನ್ನ ಸ್ವಂತಿಕೆಯನ್ನು ಬಿಟ್ಟುಕೊಡದಂಥ ಅತಿ ದೊಡ್ಡ ಸಂಸ್ಕೃತಿಯೊಂದು ನೆಲೆಗೊಂಡಿರುವುದು ಈ ಸೂತ್ರದ ಆಧಾರದ ಮೇಲೆಯೇ.

ಸಾಮರಸ್ಯಕ್ಕೆ ಅನೇಕ ಆಯಾಮಗಳಿದ್ದರೂ ನಾವಿಲ್ಲಿ ಮತೀಯ - ಧಾರ್ಮಿಕ ಸಾಮರಸ್ಯಕ್ಕೆ ಅದರಲ್ಲೂ ಕನ್ನಡ ಸಾಹಿತ್ಯಕ್ಕೆ ನಮ್ಮ ಆಲೋಚನೆಗಳನ್ನು ಸೀಮಿತಗೊಳಿಸಿಕೊಂಡು ವಿಚಾರ ಮಾಡೋಣ.

ವೈವಿಧ್ಯತೆ ಮತ್ತು ಐಕ್ಯತೆ ಇವೆರಡು ಜಗತ್ತನ್ನು ಜೀವನವನ್ನು ನಡೆಸುತ್ತಿರುವ ಮೂಲ ತತ್ವಗಳು. ಎರಡೂ ಪ್ರಕೃತಿ ಸಹಜವಾದ ಸತ್ಯದ ಎರಡು ಮುಖಗಳು. ಆದ್ದರಿಂದ ಪ್ರಕೃತಿಗೆ, ಮಣ್ಣಿಗೆ, ಮಣ್ಣಿನ ಬದುಕಿಗೆ ಸಮೀಪವಾಗಿ ಬದುಕುವ ಜನ ಈ ಎರಡು ಸತ್ಯಗಳನ್ನು ಮೇಳೈಸಿಕೊಂಡು ಬದುಕುತ್ತಿರುತ್ತಾರೆ. ಮೇಲ್ಪದರಿನ ವರ್ಗಗಳ ಜನ ಪ್ರತ್ಯೇಕಿಸಿ, ಭೇದಿಸಿ, ವೈಯಕ್ತೀಕರಿಸಿ ಆಲೋಚಿಸುತ್ತಾ ಐಕ್ಯತಾ ತತ್ವಕ್ಕೆ ಭಂಗ ತರುತ್ತಿರುತ್ತಾರೆ. ಆದ್ದರಿಂದ ಚಿಂತಕರು, ಕವಿಗಳು, ತತ್ವಜ್ಞಾನಿಗಳು, ಸಮಾಜ ಸುಧಾರಕರು ಈ ಐಕ್ಯತಾ ತತ್ವವನ್ನು ಪದೇ ಪದೇ ಒತ್ತಿ ಹೇಳುವ, ಸಾರುವ ಅವಶ್ಯಕತೆ ಉಂಟಾಗುತ್ತದೆ. "love thy neighbour as thyself" 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ', 'ಸರ್ವೇಜನಾಃ ಸುಖಿನೋ ಭವಂತು', 'ಮಾನವ ಕುಲಂ ಒಂದೆ ವಲಂ','ರಸವೆ ಜನನ ವಿರಸ ಮರಣ ಸಮರಸವೇ ಜೀವನ', 'ಮನುಜ ಮತ ವಿಶ್ವಪಥ'... ಮುಂತಾದ ಮುತ್ತಿನಂಥ ಮಾತುಗಳು ಕಾಲ ಕಾಲಕ್ಕೆ ಮೊಳಗುತ್ತಾ ಬಂದಿವೆ. ಮಾನವರೆಲ್ಲರ ಸೋದರತೆ ಸಮಾನತೆಗಳ ವಿಶ್ವಸತ್ಯವನ್ನೂ ಮತ್ತೆ ಮತ್ತೆ ನೆನಪಿಸಬೇಕಾದ ಅವಶ್ಯಕತೆ ಎಂದಿಗಿಂತ ಇಂದು ಹೆಚ್ಚಾಗಿದೆ.

ಬಹಳ ಪ್ರಾಚೀನ ಕಾಲದಲ್ಲಿ ವೈದಿಕ ಸಂಪ್ರದಾಯ ಈ ದೇಶದಲ್ಲಿ ಹುಟ್ಟಿ ಬೆಳೆದಿತ್ತು. ಆದರೆ ಅಚರಲ್ಲಿ


**ದೇಶದ ಸಮಗ್ರತೆಯಲ್ಲಿ ಎಲ್ಲ ರಾಜ್ಯಗಳ ನಡುವೆ, ಜನಾಂಗ, ಭಾಷೆ, ಜಾತಿ ಮತ, ಸಂಸ್ಕೃತಿಗಳ ನಡುವೆ ಸಾಮರಸ್ಯ ಬೇಕೇ ಬೇಕು. ರಾಜ್ಯಾಡಳಿತದಲ್ಲಿ ಎಲ್ಲ ಇಲಾಖೆಗಳ ನಡುವೆ, ಪ್ರತಿ ಇಲಾಖೆಯಲ್ಲಿ ಎಲ್ಲ ಹಂತ ಆಯಾಮಗಳ ನಡುವೆ ಸಾಮರಸ್ಯ ಇರಲೇಬೇಕು. ಆಧುನಿಕ ಯುಗದಲ್ಲಿ ಎಲ್ಲ ರಾಷ್ಟ್ರಗಳ ನಡುವೆ, ಪೂರ್ವ ಪಶ್ಚಿಮಗಳ ನಡುವೆ, ವಿಭಿನ್ನ ರಾಜಕೀಯ - ಧಾರ್ಮಿಕ ಸಿದ್ಧಾಂತಗಳನ್ನು ಆಧಾರವಾಗಿ ಹೊಂದಿರುವ ದೇಶ ಜನಾಂಗಗಳ ನಡುವೆ ಸಾಮರಸ್ಯ ಬೇಕಾಗಿದೆ.**



ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ


ಮಾನವರನ್ನು ಶ್ರೇಣೀಕೃತವಾಗಿ ವಿಂಗಡಿಸಿ ಮೇಲು ಕೀಳು ವರ್ಣವ್ಯವಸ್ಥೆಯನ್ನು ಖಾಯಂಗೊಳಿಸಿ ಒಂದು ಸಣ್ಣ ವರ್ಗ ತನ್ನ ಸ್ವಾರ್ಥಕ್ಕೆ ಇಡೀ ದೇಶದ ಜನತೆಯನ್ನು ಅಜ್ಞಾನ ಮೌಢ್ಯದಲ್ಲಿರುವಂತೆ ಮಾಡಿತ್ತು. ಹಲವರನ್ನು ಕೆಲವರು ಶೋಷಣೆ ಮಾಡುವ ವ್ಯವಸ್ಥೆಯನ್ನೇ ಧರ್ಮವೆಂದು ಸಾರುತ್ತ, ಆಳುವ ವರ್ಗದ ಆಶ್ರಯ ಪಡೆದು ಅದರ ಬೆಂಬಲದಿಂದ ಈ ವರ್ಣಾಶ್ರಮ ವ್ಯವಸ್ಥೆಯನ್ನು ಸ್ಥಿರವಾಗಿ ಉಳಿಸಿಕೊಳ್ಳುತ್ತಾ ಬಂತು. ಇದು ಸಾವಿರಾರು ವರ್ಷ ಗಳಿಂದ ಈ ದೇಶದ ಪ್ರಬಲವಾದ ತಿರೋಗಮನ ಶಕ್ತಿಯಾಗಿ ಉಳಿದು ಬಂದಿದೆ. ನಮ್ಮ ದೇಶದಲ್ಲಿ ನಡೆಯುತ್ತಾ ಬಂದ ಧಾರ್ಮಿಕ ವಿಪ್ಲವಗಳು – ಬೌದ್ಧ, ಜೈನ, ಚಾರ್ವಾಕ, ವೀರಶೈವ ಮುಂತಾದುವೆಲ್ಲ ಇದರ ವಿರುದ್ಧವಾಗಿಯೇ ಹುಟ್ಟಿಕೊಂಡವು. ಇಂಥ ಜನಪರವಾದ ಧರ್ಮಗಳ ಪ್ರಾಬಲ್ಯ ಹೆಚ್ಚಾದಾಗಲೆಲ್ಲ ಸನಾತನ ವಾದಿಗಳು ಶೈವ ವೈಷ್ಣವ ಪುರಾಣ ಕಥೆಗಳ ಮೂಲಕ ಮೂರ್ತಿಪೂಜೆ ದೇಗುಲ ಪದ್ಧತಿಗಳ ಮೂಲಕ ತಾನೂ ಪ್ರಭಾವಶಾಲಿಯಾಗಿ ಬೆಳೆಯಿತು. ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಭಕ್ತಿ ಪಂಥ ಮುಂತಾದವುಗಳ ಮೂಲಕ ಹೊಸರೂಪಗಳನ್ನು ತಳೆಯುತ್ತಾ ಸಮಾಜವನ್ನು ಹಳೇ ಚೌಕಟ್ಟಿನಲ್ಲೇ ಉಳಿಯುವಂತೆ ಮಾಡುವುದರಲ್ಲಿ ಸಾರ್ಥಕವಾಗುತ್ತ ಬಂತು. ಇವೆಲ್ಲವುಗಳ ನಡುವೆ ಮೇಲಾಟ ಕಚ್ಚಾಟಗಳು ನಡೆಯುತ್ತಾ ಎಲ್ಲರೂ ಕೂಡಿ ಬಾಳಬೇಕಾದ ಅನಿವಾರ್ಯತೆಯಲ್ಲಿ ಮೇಲ್ನೋಟಕ್ಕೆ ಸಾಮರಸ್ಯವನ್ನು ಸಾಧಿಸಿಕೊಳ್ಳಲು ಯತ್ನಿಸುತ್ತಾ ಬಂದಿರುವುದು ನಮ್ಮ ದೇಶದ ಸಾಮಾಜಿಕ ಧಾರ್ಮಿಕ ಭೂಮಿಕೆಯಾಗಿದೆ.

ಕನ್ನಡದಲ್ಲಿ ಸಾಹಿತ್ಯ ನಿರ್ಮಾಣ ಪ್ರಾರಂಭವಾಗುವ ವೇಳೆಯಲ್ಲಿ, ಜೈನ ಧರ್ಮ ಮತ್ತು ವೈದಿಕ ಧರ್ಮಗಳು ಪ್ರಬಲವಾಗಿದ್ದಂಥ ಭೂಮಿಕೆ ಇತ್ತು. ಅಷ್ಟು ಹೊತ್ತಿಗಾಗಲೇ ಬೌದ್ಧಧರ್ಮ ದೇಶದಿಂದ ಹೊಡೆದೋಡಿಸಲ್ಪಟ್ಟಿತ್ತು. ಜೈನ ಧರ್ಮವು ಮೂರ್ತಿಪೂಜೆ, ಅವತಾರ ಭವಾವಳಿಗಳ ಅಂಶಗಳನ್ನು ಸೇರಿಸಿಕೊಂಡು ಬ್ರಾಹ್ಮಣ ಧರ್ಮಕ್ಕೆ ಹೋಲಿಕೆಗಳನ್ನು ಹೊಂದಿತ್ತು. ಕರ್ನಾಟಕದ ಪ್ರಮುಖ ಧರ್ಮವೂ ಆಗಿತ್ತು. ಪ್ರಾರಂಭದಲ್ಲಿ ಉಲ್ಲೇಖಿಸಿದ ಶ್ಲೋಕವು ಸುಮಾರು ಇದೇ ಅವಧಿಯಲ್ಲಿ ಶಿಲಾಶಾಸನದಲ್ಲಿ ಕಂಡುಬರುತ್ತದೆ. ಆ ಕಾಲದ ಮತಗಳ ಮೇಲಾಟ, ಅವುಗಳ ನಡುವೆ ಸಾಮರಸ್ಯವನ್ನು ಕುದುರಿಸುವ ಪ್ರಯತ್ನವಾಗಿ ಇದು ಲಿಖಿತವಾಗಿದೆ. ಇದೊಂದು ಸುತ್ತ್ಯರ್ಹ ಪ್ರಯತ್ನ. ಇಂಥ ಮಾತುಗಳು ಅಂದಿನ ಕಾಲದ ಜನರಿಗೆ ಹಾಗೂ ಕವಿಗಳಿಗೆ ಮಾರ್ಗದರ್ಶಕವಾಗಿದ್ದವು – ಅವರಲ್ಲಿ ಪರಮತ ಸಹಿಷ್ಣುತೆಯನ್ನು ರೂಪಿಸಿದ್ದವು.

ಪಂಪಪೂರ್ವ ಹಾಗೂ ಪಂಪಯುಗಗಳಲ್ಲಿ ಜೈನ ಧರ್ಮವೇ ಪ್ರಧಾನವಾಗಿದ್ದರೂ ಆ ಕವಿಗಳು ವಿಶಾಲ ಮಾನವ ಧರ್ಮವನ್ನು ಅಭಿವ್ಯಕ್ತಿಸಲು ಅದು ಅಡ್ಡಿಯಾಗಲಿಲ್ಲ. ಆಗ ಅವರಲ್ಲಿ ಎರಡು ಮುಖ್ಯ ನಿಷ್ಠೆಗಳಿದ್ದವು. ಒಂದು ತಾವು ಹುಟ್ಟಿ ಬಂದ ಹಾಗೂ ಶ್ರದ್ಧೆಯಿಂದ ಅವಲಂಬಿಸಿದ್ದ ಧರ್ಮವಾದರೆ ಇನ್ನೊಂದು ನಿಷ್ಠೆ, ತಾವು ಆಶ್ರಯಿಸಿದ್ದ ರಾಜನ ಬಗ್ಗೆ ಗುಣವರ್ಮ, ಪಂಪ, ರನ್ನ, ಪೊನ್ನ ಮುಂತಾದವರು ಒಂದು ಧಾರ್ಮಿಕ ಇನ್ನೊಂದು ಲೌಕಿಕ ಹೀಗೆ ಎರಡೆರಡು ಕಾವ್ಯಗಳನ್ನು ರಚಿಸಿದ್ದಾರೆ. ರಾಜನು ತಾನು ಯಾವುದೇ ಧರ್ಮದ

ಅನುಯಾಯಿಯಾಗಿದ್ದರೂ ತನ್ನ ನಾಡಿನ ಎಲ್ಲ ಮತಗಳ ಜನರನ್ನು ಸಮಾನವಾಗಿ ಪಾಲಿಸಬೇಕಾಗಿರುತ್ತಿದ್ದುದರಿಂದ ಆತನನ್ನು ಮೆಚ್ಚಿಸಲು ಆ ಮೂಲಕ ಇತರ ಮತಗಳ ಎಲ್ಲ ಸಭಿಕರನ್ನು ಮೆಚ್ಚಿಸಬಹುದಾದಂಥ ಕೃತಿಯನ್ನು ಕವಿಯು ರಚಿಸುತ್ತಿದ್ದ. ಅದೇ ಲೌಕಿಕ ಕಾವ್ಯ. ಅದು ಸಾಮಾನ್ಯವಾಗಿ ಪ್ರಾಚೀನ ಕಾಲದ ರಾಮಾಯಣ - ಮಹಾಭಾರತ ಮುಂತಾದ ಮೂಲಕಥೆಯನ್ನು ಆಧರಿಸಿರುತ್ತಿತ್ತು. ತಮ್ಮ ರಾಜ ನಿಷ್ಠೆಯನ್ನು ತೋರಿಸಲು ಕನ್ನಡದ ಕವಿಗಳು ಕಂಡುಕೊಂಡ ಒಂದು ವಿಶಿಷ್ಟ ಪದ್ಧತಿ ಎಂದರೆ ಕಥಾ ನಾಯಕನಲ್ಲಿ ತಮ್ಮ ಆಶ್ರಯದಾತ ರಾಜನನ್ನು ಆರೋಪಿಸಿ ಹೇಳುವುದು. ಇದರಿಂದ ಆ ಕಾವ್ಯಕ್ಕೆ ಮತಾತೀತವಾದ ಸಾರ್ವತ್ರಿಕತೆಯ ಸ್ವರೂಪ ಬರುತ್ತಿತ್ತು. ಬೇರೆ ಮತಗಳ ವರಿಂದಲೂ ಮಾನ್ಯತೆ ದೊರೆಯುತ್ತಿತ್ತು. ಆ ಕವಿಗಳ ಮತೀಯ ಕಾವ್ಯಗಳಿಗಿಂತಲೂ ಅವರ ಇಂಥ ಲೌಕಿಕ ಕಾವ್ಯಗಳಿಂದ ಕನ್ನಡ ಸಾಹಿತ್ಯ ಹೆಚ್ಚು ಶ್ರೀಮಂತವಾಗಿದೆ. ಧರ್ಮಸಾಮರಸ್ಯದ ಉದಾಹರಣೆಗಳಾಗಿಯೂ ಇವು ಗಳನ್ನು ನಾವು ನೆನೆಯಬೇಕು.

ಹಳಗನ್ನಡದ ಕವಿಗಳು ತಮ್ಮ ಜಾತಿಮತಗಳನ್ನು ಮೀರಿ ನಿಂತು ಮಾನವೀಯ ನೆಲೆಯಲ್ಲಿ ಆಲೋಚಿಸಿದ್ದಾರೆ. ರನ್ನನು ಹೇಳುವಂತೆ 'ಕುಲಂ ಕುಲಮಲ್ತು, ಛಲಂ ಕುಲಂ, ಅಣ್ಮುಕುಲಂ...' ಎಂಬ ಮಾತು ಇದನ್ನೇ ಬಿಂಬಿಸುತ್ತದೆ. ಅಲ್ಲಿಯವರೆಗೆ ಕೇವಲ ದುರಂತ ನಾಯಕನಾಗಿದ್ದ ಕರ್ಣನನ್ನು ಪಂಪ ಉದಾತ್ತೀಕರಿಸಿ ಚಿತ್ರಿಸಿದ. 'ನೆನೆಯುವೊಡೆ ಭಾರತದಲ್ಲಿ ಇನ್ನಾರನೂ ನೆನೆಯ ಬೇಡ - ಕರ್ಣನನ್ನು ನೆನೆ... ಕರ್ಣನಿಂದಲೇ ಭಾರತವು ಕರ್ಣರಸಾಯನ ವಾಯಿತು' ಎನ್ನುವಲ್ಲಿ ಜಾತ್ಯತೀತ ದೃಷ್ಟಿ ಸ್ಪಷ್ಟವಾಗುತ್ತದೆ. ದುರ್ಯೋಧನ ಕರ್ಣರ ಸ್ನೇಹ ಜಾತಿಗಳನ್ನು ಮೀರಿದ್ದಾಗಿತ್ತು. ಕರ್ಣನನ್ನು ಕುರಿತ ದುರ್ಯೋಧನನ ಪ್ರಲಾಪವು ಕನ್ನಡದ ಸುಂದರ ಶೋಕ ಭಾವಗೀತೆಯಾಗಿದೆ.

೧೨ನೇ ಶತಮಾನದಲ್ಲಿ ನಡೆದ ಶರಣರ ಸಾಮಾಜಿಕ, ಧಾರ್ಮಿಕ ಕ್ರಾಂತಿ ಅಲ್ಲಿಂದೀಚೆಗಿನ ಸಾಹಿತ್ಯದ ದಾರಿ ಸ್ವರೂಪಗಳನ್ನು ಬಹಳಷ್ಟು ಬದಲಿಸಿತು. ಕಾವ್ಯವು ರಾಜಾಶ್ರಯದಿಂದ ಹೊರಬಂದು ಜನಸಮ್ಮುಖ ವಾಯಿತು. ಮೊದಲಿದ್ದ ಎರಡು ಬಗೆಯ ಕಾವ್ಯ ಪ್ರತ್ಯೇಕೀಕರಣ ಇಲ್ಲವಾಯಿತು. ವೈಯಕ್ತಿಕ ಆಧ್ಯಾತ್ಮಿಕ ಸಾಧನೆ, ನೈತಿಕತೆ, ಅಂತರಂಗ ಶುದ್ಧಿ, ಮಾನವೀಯತೆಗಳ ಆಧಾರದ ಮೇಲೆ ಚಿಂತನೆ ಮಾಡಿದ ಶರಣರು ಸಮಾನತೆಯ ಶೋಷಣಾರಹಿತ ಸಮಾಜವೊಂದನ್ನು ನಿರ್ಮಿಸಲು ಪ್ರಯತ್ನಿಸಿದರು. ಇಹ - ಪರ, ನಡೆ - ನುಡಿ, ವ್ಯಷ್ಟಿ - ಸಮಷ್ಟಿ, ದುಡಿಮೆ - ಚಿಂತನೆ, ಭಕ್ತ - ದೇವರು, ಲೌಕಿಕ - ಧಾರ್ಮಿಕ, ಗಂಡು - ಹೆಣ್ಣು, ಮೇಲು - ಕೀಳು ಮುಂತಾದವುಗಳ ನಡುವಿನ ಕಂದಕವನ್ನು ಕಡಿಮೆ ಮಾಡಿ ಬದುಕಿನಲ್ಲಿ ಅದ್ಭುತ ಸಾಮರಸ್ಯವನ್ನು ಸಾಧಿಸಿ ತೋರಿಸಿದವರು ಬಸವಾದಿ ಶರಣರು. ಅವರ ವಚನಗಳು ಕೇವಲ ಒಂದು ಮತಕ್ಕೆ ಸೀಮಿತವಾದುವಲ್ಲ– ಅವು ಇಡೀ ಮಾನವತೆಗೆ ವಿಶ್ವ ಮಾನವತೆಗೆ ಅವರು ಕೊಟ್ಟ ಅಮೂಲ್ಯ ಕೊಡುಗೆ. ಇಷ್ಟಾದರೂ ಅಂದಿನ ಯುಗಧರ್ಮದಂತೆ ಅವರೂ ಒಂದು ವಿಶಾಲ ತಳಹದಿಯ ಮತವನ್ನೇ ಪ್ರತಿನಿಧಿಸುತ್ತಾರೆ. ಕನ್ನಡ ಜನಸಾಮಾನ್ಯರ ಬಹುಭಾಗವನ್ನು ಶರಣರ ಚಳುವಳಿ ತನ್ನ ತೆಕ್ಕೆಗೆ ತೆಗೆದುಕೊಂಡು ವೀರಶೈವ ಧರ್ಮವು ಕರ್ನಾಟಕದ ಪ್ರಧಾನ ಧರ್ಮವಾಗಿ ಬೆಳೆಯಿತು. ಅಲ್ಲಿಯವರೆಗಿದ್ದ ಜೈನ ಧರ್ಮದ ಪ್ರಾಬಲ್ಯ ಇಳಿಮುಖವಾಯಿತು.

ಮತಧರ್ಮಗಳು ವಿಶಾಲ ಉದ್ದೇಶಕ್ಕಾಗಿ ಹುಟ್ಟಿಕೊಂಡು ಮಾನವನ ಬದುಕನ್ನು ಉನ್ನತಿಯ ಕಡೆಗೇರಿಸಲು, ಸಮಗ್ರತೆಯ ಕಡೆಗೆ ಕೊಂಡೊಯ್ಯಲು, ಅತ್ಯಂತ ಸಾರ್ಥಕ ಬದುಕನ್ನು ಕಟ್ಟಿ ಕೊಡಲು ಪ್ರಯತ್ನಿಸುತ್ತವೆ. ಆದರೆ ಬರುಬರುತ್ತಾ ಪ್ರತ್ಯೇಕತಾ ಶಕ್ತಿ ಸಂಪ್ರದಾಯ ಶಕ್ತಿ ಪ್ರಬಲವಾಗುತ್ತಾ ಭೇದಗಳು ತೀವ್ರಗೊಂಡು ಸಾಮರಸ್ಯ ಹಿಂದೆ ಸರಿಯುತ್ತದೆ. ಕನ್ನಡದ ಸಮಾಜದಲ್ಲಿ ಹಾಗೂ ಸಾಹಿತ್ಯದಲ್ಲಿ ಶರಣರ ಧರ್ಮವೂ ಇಂಥ ತಿರೋಗಾಮೀ ಶಕ್ತಿಗಳ ಕೈಯಲ್ಲಿ ಸಿಕ್ಕು ಸಂಕುಚಿತವಾಗುತ್ತಾ ಬಂತು. ಜಗತ್ತಿನ ಎಲ್ಲ ಧರ್ಮಗಳ ಸ್ಥಿತಿಯೂ ಹೀಗೇ ಆಗುತ್ತಾ ಬಂದಿದೆ.

೧೨ನೇ ಶತಮಾನಕ್ಕೂ ಹಿಂದೆ ವೈದಿಕ ಧರ್ಮದಲ್ಲಿಯೇ ಒಂದು ಸಮನ್ವಯ ಸಾಧನೆಯ ಪ್ರಯತ್ನ ನಡೆದಿದ್ದನ್ನು ನಾವು ಚರಿತ್ರೆಯಲ್ಲಿ ಗುರುತಿಸಬಹುದು. ಅದೇ ಹರಿ-ಹರ ಸಮನ್ವಯ. ಶಿವಾಗಮ, ಶಿವ ಪುರಾಣಗಳಿಂದ ಶಿವಪಾರಮ್ಯವೂ ವೈಷ್ಣವಾಗಮ ಪುರಾಣಗಳಿಂದ ಹರಿಪಾರಮ್ಯವೂ ಬಹಳ ಹಿಂದಿನಿಂದ ಬೆಳೆದು ಬಂದಿದ್ದವು. ಶೈವ ವೈಷ್ಣವ ಎಂಬ ಎರಡು ಪಂಥಗಳು ಶ್ರೇಷ್ಠತೆಗಾಗಿ ಕಚ್ಚಾಡುತ್ತಾ ಇದ್ದವು – ಅದು ಹಾಗೇ ಮುಂದುವರಿದುಕೊಂಡೇ ಬಂದಿದೆ. ಈ ಭೇದವನ್ನು ಅಳಿಸಲು ಹರಿಹರ ಸಮನ್ವಯ ಮಾರ್ಗವೊಂದು ಜಾರಿಗೆ ಬಂದಿತ್ತೆಂಬುದು ಹರಿಹರ ನಗರದ ಹರಿಹರೇಶ್ವರ ದೇವಾಲಯದಿಂದ ತಿಳಿಯುತ್ತದೆ. ಹರಿಹರ, ರಾಘವಾಂಕ ಕವಿಗಳ ಹೆಸರುಗಳೂ, ದೇವರ ದಾಸಿಮಯ್ಯನ 'ರಾಮನಾಥ' ಎಂಬ ಅಂಕಿತ, ಶಿವನ ಅರ್ಧನಾರೀಶ್ವರ ರೂಪ, ರಾಮೇಶ್ವರ, ಸಿದ್ಧರಾಮೇಶ್ವರ ಎಂಬ ಹೆಸರಿನ ದೈವ ಮುಂತಾದುವೆಲ್ಲ ಇಂಥ ಪಂಥವೊಂದಿದ್ದುದರ ಕಡೆಗೆ ಬೆರಳು ಮಾಡಿ ತೋರಿಸುತ್ತವೆ. ತೆಲುಗಿನಲ್ಲಿ ತಿಕ್ಕನ ಎಂಬ ಕವಿ ಹರಿಹರ ದೈವದ ಸಂಪ್ರದಾಯವನ್ನು ಪ್ರಚಾರ ಮಾಡಿದನೆಂದು ಸ್ಪಷ್ಟವಾಗಿ ಗುರುತಿಸಲ್ಪಟ್ಟಿದ್ದಾನೆ.

ಕನ್ನಡದಲ್ಲಿ ಇದೊಂದು ಪಂಥವಾಗಿ ರೂಪುಗೊಳ್ಳದಿದ್ದರೂ ರುದ್ರಭಟ್ಟ, ಕುಮಾರವ್ಯಾಸ, ಕನಕದಾಸ ಮುಂತಾದ ಕವಿಗಳು ಹರಿಹರರನ್ನು ಸಮಾನವಾಗಿ ಗೌರವಿಸುವ ಸಾಮರಸ್ಯವನ್ನು ತೋರಿದ್ದಾರೆ ಎಂದು ಕಂಡುಬರುತ್ತದೆ. ಸರ್ವಜ್ಞನು ವೀರಶೈವನಾದರೂ 'ಕೊಲಬಾರದೆಂದು ಸಾರುವ ಜೈನಧರ್ಮ ನನ್ನ ತಲೆಯ ಮೇಲಿರಲಿ' ಎಂದು ಪರಮತ ಸಹಿಷ್ಣುತೆ ಮೆರೆದಿದ್ದಾನೆ. ರತ್ನಾಕರವರ್ಣಿಯು ಜೈನನಾಗಿದ್ದರೂ ವೀರಶೈವ ಧರ್ಮದ ಅಂಶಗಳನ್ನು ವ್ಯಕ್ತ ಮಾಡಿದ್ದಾನೆಂದು ಆ ಕಾಲದಲ್ಲಿ ಜೈನರಿಂದಲೇ ಬಹಿಷ್ಕೃತನಾಗಿದ್ದನಂತೆ.

ಎಲ್ಲ ಮತಗಳ ಗುರಿ ಒಂದೇ ಎಂಬ ಸತ್ಯವನ್ನು ಕನ್ನಡದ ಬಹಳಷ್ಟು ಕವಿಗಳು ನಂಬಿದ್ದರು ಎಂಬುದು ಅವರ ಕಾವ್ಯಗಳಿಂದ ಗೊತ್ತಾಗುತ್ತದೆ. ಯಾವ ಯಾವ ಕೃತಿಗಳಲ್ಲಿ, ವಚನಗಳಲ್ಲಿ, ಕೀರ್ತನೆಗಳಲ್ಲಿ, ಕಾವ್ಯಗಳಲ್ಲಿ ವಿಶ್ವವಿಶಾಲವಾದ ಏಕದೇವನ ಪರಿಕಲ್ಪನೆ ಬಂದಿದೆಯೋ ಅಲ್ಲೆಲ್ಲ ಮತೀಯ ಸಾಮರಸ್ಯವೇ ಧ್ವನಿಸುತ್ತದೆ ಎಂದು ಹೇಳಲಡ್ಡಿಯಿಲ್ಲ.

ವಿಜಯನಗರದ ಬುಕ್ಕರಾಯನು ಜೈನರಿಗೂ ವೈದಿಕರಿಗೂ ತಿಕ್ಕಾಟ ಬಂದಾಗ ಹೋಗಿ ಕಲಹವನ್ನು ಬಗೆಹರಿಸಿ ಎಲ್ಲ ಧರ್ಮದವರೂ ಸಮಾನರು, ಎಲ್ಲರೂ ಬೇರೆ ಧರ್ಮಗಳನ್ನು ತಮ್ಮ ಧರ್ಮದಂತೆಯೇ ಗೌರವಿಸಬೇಕು, ಪರಸ್ಪರರು ಅನ್ಯೋನ್ಯವಾಗಿ ಬಾಳಬೇಕೆಂದು ಒಂದು ಶಿಲಾ ಶಾಸನವನ್ನೇ ಬರೆಸಿದನಂತೆ. ಇದೊಂದು ಅಪೂರ್ವವಾದ ಧರ್ಮ ಸಾಮರಸ್ಯದ ಚಾರಿತ್ರಿಕ ಘಟನೆ. ಕನ್ನಡಿಗರು ಶತಮಾನಗಳಿಂದ ಇಂಥ ಪರಧರ್ಮ ಸಹಿಷ್ಣುತೆಯನ್ನು ಚೆನ್ನಾಗಿ ಮೈಗೂಡಿಸಿಕೊಂಡು ಬಂದಿದ್ದಾರೆ.

ಮುಪ್ಪಿನ ಷಡಕ್ಷರಿಗಳ ಒಂದು ತತ್ವಪದ ಸುಂದರ ಸಾಮರಸ್ಯದ ಗೀತೆಯಾಗಿದೆ.

*ಅವರವರ ಭಾವಕ್ಕೆ ಅವರವರ ದರುಶನಕೆ*
*ಅವರವರಿಗೆಲ್ಲ ಗುರು ನೀನೊಬ್ಬನೆ*
*ಹೋರಾಟವಿಕ್ಕಿಲು ಬೇಡಾದೆಯಲ್ಲದೆ*
*ಬೇರುಂಟೆ ಜಗದೊಳಗೆ ಎಲೆ ದೇವನೆ*

ಈ ಮಾತು ಹಿಂದಿಗೂ ಇಂದಿಗೂ ಮುಂದೆಯೂ ಎಲ್ಲ ಮತಧರ್ಮದವರಿಗೆ ದಾರಿದೀಪವಾಗುವಂತಿದೆ. ಕನ್ನಡಿಗರ ಕನ್ನಡ ಕವಿಗಳ ವಿಶಾಲ ಭಾವನೆಗೂ ಇದು ಹಿಡಿದ ಕನ್ನಡಿಯಾಗಿದೆ.

ಇಸ್ಲಾಂ ಧರ್ಮದ ಪ್ರವೇಶವು ಧರ್ಮಸಾಮರಸ್ಯದ

## ನಮ್ಮನ್ನು ಆಳುವವರು ಎಂಥವರಿರಬೇಕು ?

ಚುನಾವಣಾ ಸಂದರ್ಭಗಳಲ್ಲಿ ಅಭ್ಯರ್ಥಿಗಳ ಪೂರ್ವಾಪರಗಳನ್ನು ಕುರಿತಂತೆ ಸಾರ್ವಜನಿಕರಿಗೆ ಎಲ್ಲ ಮಾಹಿತಿಯೂ ಲಭ್ಯವಿರಬೇಕೆಂಬ ಉದ್ದೇಶದಿಂದ ಕೆಲವು ನಿಯಮಗಳ ಸುಧಾರಣೆ ಅಗತ್ಯವಿದೆಯೆಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ. ಅದು ಸಾರ್ವಜನಿಕರ ಅಭಿಪ್ರಾಯವೂ ಆಗಿರುವುದರಿಂದ ಅದನ್ನು ಜಾರಿಗೊಳಿಸುವುದು ಅವಶ್ಯಕ. ಈ ಸಂಬಂಧದಲ್ಲಿ ಕೇಂದ್ರ ಸರ್ಕಾರವು ಸುಗ್ರೀವಾಜ್ಞೆಯೊಂದನ್ನು ಹೊರಡಿಸಿರುವುದು ನಿಮಗೆ ತಿಳಿದಿದೆ. ಅಪರಾಧಗಳ ಹಿನ್ನೆಲೆಯುಳ್ಳ ವ್ಯಕ್ತಿಗಳಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಕೊಡದೆಂದು ಸಲಹೆ ಮಾಡಲಾಗಿದೆ. ಅಪರಾಧವು ಸಾಬೀತಾಗುವ ಮೊದಲು ಆಪಾದಿತರಾಗಿರುವವರಿಗೂ ಇಂತಹ ಅವಕಾಶ ನಿರಾಕರಿಸಲ್ಪಡಬೇಕೇ ? ಎಂತಹ ಅಪರಾಧಗಳು ಈ ಪಟ್ಟಿಯಲ್ಲಿರಬೇಕು ? ನಿರಾಕರಣೆಗೆ ಗಡುವೇನಾದರೂ ಇರಬೇಕೆ ? ಅಪರಾಧಿ ಅಥವಾ ಆಪಾದಿತ ಅಭ್ಯರ್ಥಿಯ ನಾಮಪತ್ರವನ್ನು ತಿರಸ್ಕರಿಸುವ ಅಧಿಕಾರ ಯಾರಿಗಿರಬೇಕು ? ಆಪಾದನೆಯಷ್ಟೇ ಸಾಕೆಂದಾದರೆ ಅದನ್ನು ದುರುಪಯೋಗ ಮಾಡಿಕೊಳ್ಳುವ ಸಾಧ್ಯತೆ ಎಷ್ಟು ? ಸ್ವಚ್ಛ ಹಾಗೂ ಮುಕ್ತ ವಾತಾವರಣದಲ್ಲಿ ಚುನಾವಣೆ ನಡೆಯಬೇಕಾದರೆ ಕೈಗೊಳ್ಳಬೇಕಾದ ಸಮಗ್ರ ಕ್ರಮಗಳು ಯಾವುವು ?

ಚುನಾವಣಾ ಅಭ್ಯರ್ಥಿಗಳು ತಮ್ಮ ಆಸ್ತಿಯ ವಿವರಗಳನ್ನು ಘೋಷಿಸಬೇಕೆಂಬ ಇನ್ನೊಂದು ನಿಬಂಧವಿದೆ. ಅದು ಎಲ್ಲ ಅಭ್ಯರ್ಥಿಗಳಿಗೂ ಅನ್ವಯವಾಗಬೇಕೋ ಅಥವಾ ಆರಿಸಿಬಂದ ಅಭ್ಯರ್ಥಿಗಳಿಗೆ ಅನ್ವಯವಾದರೆ ಸಾಕೋ ?

ಈ ಎಲ್ಲ ವಿಷಯಗಳನ್ನು ಕುರಿತಂತೆ ನಿಮ್ಮ ಅಭಿಪ್ರಾಯಗಳನ್ನು ಸುಮಾರು ನಾಲ್ಕುನೂರು ಪದಗಳಲ್ಲಿ ಬರೆದು ಕಳಿಸಿ. ಆಯ್ದ ಕೆಲವು ಬರಹಗಳನ್ನು ಜನವರಿ ೨೦೦೩ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ ಮತ್ತು ಪುಸ್ತಕರೂಪದಲ್ಲಿ ಕೆಲವು ಬಹುಮಾನಗಳನ್ನು ನೀಡುತ್ತೇವೆ. ಬರಹಗಳು ಇದೇ ಅಕ್ಟೋಬರ್ ೨೫ರೊಳಗೆ 'ಹೊಸತು' ಕಾರ್ಯಾಲಯಕ್ಕೆ ತಲುಪುವಂತೆ ಕಳಿಸಿಕೊಡಿ.

– ಸಂಪಾದಕ

ಪರಿಸ್ಥಿತಿಗೆ ಒಂದು ಹೊಸ ಸವಾಲಾಗಿ ನಮ್ಮ ದೇಶದಲ್ಲಿ ಪರಿಣಮಿಸಿತು. ೧೩-೧೪ನೇ ಶತಮಾನಗಳಿಂದ ಪ್ರಾರಂಭ ವಾದ ಮುಸ್ಲಿಮ್ ಆಡಳಿತಗಾರರ ಪ್ರಾಬಲ್ಯ ಬ್ರಿಟಿಷರ ರಂಗಪ್ರವೇಶ ಮತ್ತು ವ್ಯಾಪ್ತಿಯವರೆಗೆ ನಡೆಯಿತು. ಬಲವಂತದಿಂದಲೋ ಸ್ವಇಚ್ಛೆಯಿಂದಲೋ ಭಾರತೀಯರ ಮತಾಂತರ ವ್ಯಾಪಕವಾಗಿ ನಡೆದು ಧರ್ಮಾ ಚರಣೆಯ ಕ್ಷೇತ್ರದಲ್ಲಿ ಮುಸ್ಲಿಂ ಧರ್ಮವೂ ಸೇರಿತು. ನಮ್ಮ ದೇಶೀಯ ಜಾತಿಮತಗಳು, ಸಂಸ್ಕೃತಿ, ವಿಚಾರಧಾರೆಗಳ ಮೇಲೂ ಬಹಳಷ್ಟು ಪ್ರಭಾವ ಬೀರಿತು. ದೇಶೀಯರಲ್ಲಿ ಮತಪಂಥ ಗಳ ಸಾಂಪ್ರದಾಯಕ ಕಟುತನವು ಸ್ವಲ್ಪ ಮಟ್ಟಿಗೆ ಕಡಮೆಯಾಗಿ ವಿಶಾಲತೆಯ ದೃಷ್ಟಿಕೋನ ಹೆಚ್ಚುತ್ತಾ ಬಂತು.

ಹಿಂದೂ ಧರ್ಮದಲ್ಲಿ ನಿರಾಕಾರ ಮತ್ತು ಸಾಕಾರ ಎಂಬ ಎರಡು ಉಪಾಸನಾ ಮಾರ್ಗಗಳಿವೆ. ದೇವಸ್ಥಾನ ಮೂರ್ತಿಪೂಜೆಗಳ ಸುತ್ತ ಸಾಕಾರೋಪಾಸನೆಯು ಬೆಳೆದು ಬಂದಿದೆ. ಅನೇಕ ದೈವಗಳ ಉಪಭೇದಗಳು ಇದರಲ್ಲಿದ್ದು ಜನಸಾಮಾನ್ಯರ ದೊಡ್ಡ ಪ್ರವಾಹವನ್ನು ಇದು ಒಳಗೊಂಡಿದೆ. ಈಗ ಹಿಂದೂಧರ್ಮವೆಂದು ಸ್ಥೂಲವಾಗಿ ಗುರುತಿಸಲ್ಪಡುವ ಮಾರ್ಗ ಇದೇ ಆಗಿದೆ. ಇನ್ನೊಂದು ನಿರಾಕಾರ ಅಥವಾ ನಿರ್ಗುಣ ಉಪಾಸನಾ ಮಾರ್ಗ – ವೇದೋಪನಿಷತ್ತುಗಳ ಕಾಲದಿಂದಲೂ ಬುದ್ಧಿಜೀವಿಗಳ – ಚಿಂತಕರ ಮಟ್ಟದಲ್ಲಿ ಅನುಸರಿಸಲ್ಪಡುವಂಥದ್ದು – ವಿಶಾಲ ತಾತ್ವಿಕ ತಳಹದಿ ಹೊಂದಿರುವಂಥದ್ದು – ಸಾಕಾರೋ ಪಾಸನೆಗೂ ಕೂಡಾ ಹಿನ್ನೆಲೆಯಾಗಿ ಅಂತಿಮ ಗಮ್ಯವಾಗಿ ಇರುವಂಥಾದ್ದಾಗಿದೆ. ಹಿಂದೆ ವೀರಶೈವರು ಧರ್ಮವನ್ನು ಪುರೋಹಿತ ವರ್ಗ – ದೇವಾಲಯಗಳ ಗೊಡವೆ ಇಲ್ಲದೆ ರೂಪಿಸಲು ಯತ್ನಿಸಿದ್ದೂ ಇದೇ ನೆಲೆಯಲ್ಲೇ.

ಹೊಸದಾಗಿ ಬಂದ ಇಸ್ಲಾಂ ಧರ್ಮವು ಶುದ್ಧ ನಿರಾಕಾರ ವಾದಿಯಾಗಿತ್ತು. ಮೂರ್ತಿಪೂಜಾ ನಿಷೇಧಕ ವಾಗಿತ್ತು. ಸಮಾನತೆಯ ದೃಷ್ಟಿ ಉಳ್ಳದ್ದಾಗಿತ್ತು. ಹಿಂದೂ ಗಳಲ್ಲಿರುವ ನಿರಾಕಾರೋಪಾಸನೆಗೂ ಮುಸ್ಲಿಮರ ನಿರಾಕಾರ ವಾದಕ್ಕೂ ತಾತ್ವಿಕವಾಗಿ ಭೇದವಿಲ್ಲದ್ದರಿಂದ ಇವೆರಡರ ನಡುವೆ ಸಾಮ ರಸ್ಯದ ಸೇತುವೆಯನ್ನು ಏಕೆ ನಿರ್ಮಿಸಬಾರದೆಂಬ ಯೋಚನೆ ಕೆಲವು ಚಿಂತಕರಲ್ಲಿ ಬಂದದ್ದು ಸಹಜವೇ. ಅಕ್ಬರನ 'ದೀನ್ ಇಲಾಹಿ' ಮತದ ಪರಿಕಲ್ಪನೆ ಇಂಥ ಪ್ರಯತ್ನವಾಗಿತ್ತು. ಯಾಕೋ ಏನೋ ಅದು ಪ್ರಚಾರ ಪಡೆಯಲಿಲ್ಲ.

ಸೂಫೀ ಸಂತರ ಪ್ರಯತ್ನ ಈ ದಿಶೆಯಲ್ಲಿ ಅಮೂಲ್ಯ ವಾದುದು. ಇವರು ಹಿಂದೂ ಮುಸ್ಲಿಂ ಎರಡರ ಸಾಮರಸ್ಯ ವನ್ನು ನೆಲೆಗೊಳಿಸಿ ಭಾರತದಲ್ಲಿ ಅನೇಕ ಶತಮಾನಗಳಿಂದ ಎಲ್ಲ ಧರ್ಮದವರೂ ಅನ್ಯೋನ್ಯವಾಗಿ ಬಾಳುವಂತೆ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಬಿಜಾಪುರ ಸುಲ್ತಾನರ ಕಾಲದಲ್ಲಿ ಸೂಫಿ ಧರ್ಮಕ್ಕೆ ಬಹಳಷ್ಟು ಪ್ರೋತ್ಸಾಹ ದೊರೆಯಿತು. ಎರಡನೆ ಇಬ್ರಾಹಿಮ್ ಆದಿಲ್‌ಷಾ ಧರ್ಮಸಮನ್ವಯಕ್ಕೆ ಶ್ರಮಿಸಿದ ಮಹಾ ಪುರುಷ. ಈತನು ಬರೆದ 'ಕಿತಾಬ್-ಎ-ನವರಸ್'ನಲ್ಲಿ ಹಿಂದೂ ದೇವತೆಗಳ ಸ್ತುತಿ ಇದೆ. 'ನವರಸಪುರ' ಎಂಬ ಸಂಗೀತಪುರವನ್ನೇ ಈತನು ಕಟ್ಟಿಸಿದ.

*'ಭಾಶಾ ನ್ಯಾರೋ ನ್ಯಾರೋ ಭಾವ ಏಕ್*
*ಕಹಾ ತುರಕ ಕಹಾ ಬರಹಮಾನ್'*

(ಭಾಷೆಗಳು ಬೇರೆ ಬೇರೆ ಭಾವ ಒಂದೇ, ಎಲ್ಲಿಯ ತುರುಕ ಎಲ್ಲಿಯ ಬ್ರಾಹ್ಮಣ ಎಲ್ಲಾರೂ ಒಂದೇ)

ಎಂಬ ಈತನ ಮಾತು ಎಂಥ ಅಮೂಲ್ಯವಾದುದು !

ಗುಲಬರ್ಗಾದ ಫಿರೋಜ್‌ಷಾ ಸೂಫಿ ಸಂತ ಬಂದೆನವಾಜರ ಪರಮಭಕ್ತ. ಬಂದೆನವಾಜರು ಶರಣಬಸಪ್ಪನವರೂ ಸ್ನೇಹ ಸೌಹಾರ್ದತೆ ಬೆಳೆಸಿದರು.

೧೫-೧೬ನೇ ಶತಮಾನಗಳಲ್ಲಿದ್ದ ತಿಂಥಿಣಿ ಮೌನೇಶ್ವರರು, ಶಿರಹಟ್ಟಿಯ ಫಕೀರೇಶ್ವರರು, ಸಾವಳಗಿ ಶಿವಲಿಂಗ ಮುಂತಾದವರೆಲ್ಲ ಮುಸ್ಲಿಂ ಆಡಳಿತಕ್ಕೆ ಒಳಗಾಗಿದ್ದ ಉತ್ತರ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಗಳಲ್ಲಿ ಹಿಂದೂ ಮುಸ್ಲಿಮರ ಸೌಹಾರ್ದತೆಗಾಗಿ ಶ್ರಮಿಸಿದವರು. ಕನ್ನಡ ಸಾಹಿತ್ಯದ ಸಂದರ್ಭಕ್ಕೆ ಸಂಬಂಧ ಪಟ್ಟಂತೆ ತಿಂಥಿಣಿ ಮೌನೇಶ್ವರರ ಹೆಸರನ್ನು ಉಲ್ಲೇಖಿಸಲೇ ಬೇಕಾಗುತ್ತದೆ. ಅನೇಕ ವಚನಗಳನ್ನು 'ಬಸವಣ್ಣ' ಎಂಬ ಅಂಕಿತದಲ್ಲಿ ರಚಿಸಿದ ಅವರು ಎರಡೂ ಧರ್ಮಗಳ ಸಾರ ಹೀರಿದವರು. ಮೂರ್ತಿಪೂಜೆ, ಬ್ರಾಹ್ಮಣಿಕೆ, ಶೀಲ ವಂತಿಕೆ, ಜಾತೀಯತೆ, ಮೌಢ್ಯಗಳನ್ನು ಕಠೋರವಾಗಿ ಖಂಡಿಸಿರುವ ಅವರು ಎರಡೂ ಧರ್ಮದವರಲ್ಲಿ ಸಾಮರಸ್ಯವನ್ನು ನೆಲೆಗೊಳಿಸಿ ದವರು. ಮುಸ್ಲಿಮರ ಮಸೀದಿಯ ರೀತಿಯಲ್ಲೇ ನಿರ್ಮಿತ ವಾದ ಅವರ ಗುಡಿಗಳು ವರವಿ ಮತ್ತು ತಿಂಥಿಣಿಗಳಲ್ಲಿವೆ. ಅಲ್ಲಿ ಇಂದಿಗೂ ಸ್ತೋತ್ರವಾಗಿ

*''ಓಂ ಏಕ್ ಲಾಖ್ ಐಸೀಹಜಾರ್ ಮೌನದೀನ್*
*ಜಿತಾ ಪೀರ್ ಪೈಗಂಬರ್ ಮೌನದೀನ್*
*ಕಾಶೀಪತೇ ಗಂಗಾಧರ ಹರಹರ ಮಹದೇವ''*

ಎಂಬ ವಾಣಿ ಮೊಳಗುತ್ತಿದೆ.

ಹಳ್ಳಿ ಹಳ್ಳಿಗಳಲ್ಲೂ ಹಿಂದೂ ಮುಸ್ಲಿಮರು ಅಣ್ಣ ತಮ್ಮಂದಿರಂತೆ ಅನ್ಯೋನ್ಯವಾಗಿ ಬಾಳುತ್ತಾ ಬಂದಿದ್ದಾರೆ. ಇತ್ತೀಚೆಗೆ ಮತಾಂಧರು ಈ ಸಾಮರಸ್ಯವನ್ನು ಹದಗೆಡಿಸುತ್ತಿದ್ದಾರೆ. ಅದು ಇಡೀ ರಾಷ್ಟ್ರದ ಶಾಂತಿ ಸಹಬಾಳ್ವೆಯನ್ನೇ ಹಾಳುಮಾಡುವಂತಾಗಿರುವುದು ಎಂಥ ದುರಂತ !

ನಮ್ಮ ದೇಶಕ್ಕೆ ಕ್ರಿಶ್ಚಿಯನ್ ಧರ್ಮವೂ ಪ್ರವೇಶಿಸಿತು. ನಮ್ಮ ಜನರು ಅದಕ್ಕೂ ಮತಾಂತರ ಹೊಂದಿದರು. ಆಧುನಿಕತೆ, ಇಂಗ್ಲಿಷ್ ಶಿಕ್ಷಣ, ವ್ಯವಹಾರಗಳಲ್ಲಿ ದೇಶೀಯರೊಡನೆ ಕ್ರಿಶ್ಚಿಯನ್ನರು ಸಲೀಸಾಗಿ ಹೊಂದಿಕೊಂಡಿರುವುದರಿಂದ ಧಾರ್ಮಿಕ ಸಾಮರಸ್ಯದ ಸಮಸ್ಯೆಯೇ ಇವರೊಡನೆ ತಲೆದೋರಿಲ್ಲ. ದೇಶೀಯ ಸಾಹಿತ್ಯ ಭಾಷೆಗಳ ಉದ್ಧಾರಕ್ಕೆ ಸಾಕಷ್ಟು ಶ್ರಮಿಸಿದ ಕ್ರಿಶ್ಚಿಯನ್ ಪಾದ್ರಿಗಳ ಸೇವೆಯನ್ನು ಕನ್ನಡಿಗರಾಗಲೀ ಇತರ ಭಾಷಿಕರಾಗಲೀ ಮರೆಯಲು ಸಾಧ್ಯವೇ ?




ಕನ್ನಡದ ಸಂಸ್ಕೃತಿಯೇ ಸಾಮರಸ್ಯಕ್ಕೆ ಇನ್ನೊಂದು ಹೆಸರು. ಕನ್ನಡದ ಶಿಷ್ಟ ಸಾಹಿತ್ಯಕ್ಕಿಂತಲೂ ಕನ್ನಡಿಗರ ಜನ ಜೀವನವು ಇದಕ್ಕೆ ಚೆನ್ನಾಗಿ ಪುರಾವೆ ಒದಗಿಸುತ್ತದೆ. ನಮ್ಮ ಜಾನಪದರು ಮತೀಯ ಸೌಹಾರ್ದತೆಯನ್ನು ಶತಶತ ಮಾನಗಳಿಂದ ಕಾಯ್ದುಕೊಂಡು ಬಂದಿದ್ದಾರೆ. ಅವರು ಅನೇಕ ದೇವರುಗಳನ್ನು ಪೂಜಿಸುತ್ತಾರೆ. ಮಹಾ ಪುರುಷ ರನ್ನು, ಪ್ರಕೃತಿ ಶಕ್ತಿಗಳನ್ನು, ಕೃಷಿ ಸಂಬಂಧಿ ವಿಷಯ ವಸ್ತುಗಳನ್ನು ಅಷ್ಟೇ ಏಕೆ ಕೆಡುಕು ರೋಗ ರುಜಿನಗಳನ್ನು ಶನಿದೇವ, ಇದಿಮಾಯಿ, ಸೆಟಿಗೆಮ್ಮ, ಮಾರಿ ಮುಂತಾಗಿ ಪೂಜಿಸುತ್ತಾರೆ. ಇವುಗಳೊಡನೆ ಪರ ಧರ್ಮೀಯರೊ ಡನೆಯೂ ಸ್ನೇಹದಿಂದ ಬಾಳುತ್ತಿದ್ದಾರೆ. ಜಾನಪದ ಹಾಡು ಗಳಲ್ಲಿ ಅವರ ಧರ್ಮ ಸಾಮರಸ್ಯ ಎದ್ದು ಕಾಣುತ್ತದೆ.

ಇನ್ನು ಮತೀಯ ಚೌಕಟ್ಟಿನಿಂದ ಹೊರಬಂದು ಬೆಳೆದುಬಂದಿರುವ ಹೊಸಗನ್ನಡ ಸಾಹಿತ್ಯದ ಬಗ್ಗೆ ಹೇಳುವುದೇನು ? ಅದು ಜಾತ್ಯತೀತ - ಮತಾತೀತ - ಮಾನವೀಯ - ವಿಶ್ವಮಾನವೀಯ ಎನ್ನುವ ಲಕ್ಷಣಗಳನ್ನು ಒಳಗೊಂಡಿದೆ. ಎಲ್ಲ ಮತಗಳನ್ನು ಮೀರಿ ಕೇವಲ ಮಾನವಧರ್ಮವನ್ನು ಅನುಸರಿಸಬೇಕಾಗಿರುವುದು ಇಂದಿನ ಯುಗಧರ್ಮ ಎಂಬ ತಿಳುವಳಿಕೆಯನ್ನು ಆಧುನಿಕ ಸಾಹಿತ್ಯ ಸಾರುತ್ತಿದೆ. ಕುವೆಂಪುರವರ 'ವಿಶ್ವಮಾನವ ಸಂದೇಶ', ಕಾವ್ಯಾನಂದರ 'ಏನಾದರೂ ಆಗು ಮೊದಲು ಮಾನವನಾಗು' ಮುಂತಾದ ವಾಣಿಗಳು ಕನ್ನಡಿಗರಲ್ಲಿ ರಿಂಗಣಗೊಳ್ಳುತ್ತಿವೆ. ಈ ಬಗ್ಗೆ ವಿವರವಾಗಿ ಚರ್ಚಿಸಲು ಈ ಪ್ರಬಂಧ ಪರಿಮಿತಿಯಲ್ಲಿ ಸಾಧ್ಯವಿಲ್ಲ. ಈ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ ಎಂಬಷ್ಟು ವಿಪುಲ ಸಾಮಗ್ರಿ ಇದೆ.

ದುರಂತವೆಂದರೆ ಸಾಮರಸ್ಯ ಸೂತ್ರವು ಒಂದು ಭಾಷೆ - ಸಾಹಿತ್ಯ, ಒಂದು ರಾಜ್ಯ - ರಾಷ್ಟ್ರ, ಒಂದು ಜನಾಂಗ - ಧರ್ಮ, ಅಲ್ಲ ಇಡೀ.ವಿಶ್ವದ ಸಿದ್ಧಾಂತವಾಗ ಬೇಕಾಗಿರುವ ಈ ೨೧ನೇ ಶತಮಾನದಲ್ಲಿ ಮತಾಂಧತೆ - ಮೂಲಭೂತವಾದಗಳು ಇನ್ನೂ ಘೋರವಾಗಿ ಪ್ರಬಲ ಗೊಳ್ಳುತ್ತಾ ರಾಷ್ಟ್ರ ರಾಷ್ಟ್ರಗಳನ್ನು, ಜನಾಂಗ ಜನಾಂಗ ಗಳನ್ನು ಮಾರಣಹೋಮಕ್ಕೆ ಗುರಿಮಾಡುವಂಥ ದುರ್ದೆಸೆ ಬಂದಿದೆ. ಜನಸಾಮಾನ್ಯರು ಇಂಥ ದುಷ್ಟಶಕ್ತಿಗಳ ವಿರುದ್ಧ ಹೋರಾಡಬೇಕಾದ ಅವಶ್ಯಕತೆ ತಲೆದೋರಿದೆ.

ಮತಗಳು ದೇವರುಗಳೆಲ್ಲ ಮನುಷ್ಯರ ಸೃಷ್ಟಿ, ಮನುಷ್ಯ ಬದುಕಿನ ಕೂಸು. ಬದುಕು ಎಲ್ಲ ಮತಗಳಿಗಿಂತ, ಜಾತಿಗಳಿಗಿಂತ ಇತರ ಅನೇಕ ಭೇದಗಳಿಗಿಂತ ದೊಡ್ಡದು. ಮತಗಳಿಗಿಂತ ಬದುಕಿಗೆ ಪ್ರಾಧಾನ್ಯತೆ ಬಂದಾಗ ಉಳಿದವೆಲ್ಲ ಕಳಚಿಬೀಳುತ್ತವೆ.

*''ನಾನಾ ದೇವರು ಎಲ್ಲ ಬಾನಿನ ಮಕ್ಕಳು*
*ಯೋನಿಯ ಮಕ್ಕಳು ಜಗವೆಲ್ಲ*
*ನಾ ನನ್ನ ಜ್ಞಾನ ಬಂದಂತೆ ಉಸುರುವೆನು ಬಸವಣ್ಣ''*

ಎಂಬ ಮೌನೇಶ್ವರರ ಮಾತುಗಳು ಸಾಂದರ್ಭಿಕವಾಗಿವೆ.

**ಡಾ|| ವೃಷಭೇಂದ್ರಾಚಾರ್ ಅರ್ಕಸಾಲಿ**
ಪ್ರಾಚಾರ್ಯರು, ಎಸ್. ಈ. ಎಸ್. ಮಹಾವಿದ್ಯಾಲಯ
ಸಂಡೂರು, ಬಳ್ಳಾರಿ ಜಿಲ್ಲೆ



# ನಾ ಕಂಡಂತೆ ನಮ್ಮ ಮೇಷ್ಟ್ರು

ಮಂಗಳಾ ಎನ್.

ರಂಗಭೂಮಿಯ ದಿಗ್ಗಜ ಶ್ರೀ ಬಿ. ವಿ. ಕಾರಂತರು ಇನ್ನಿಲ್ಲ. ದಿಗ್ಗಜರೆನಿಸಿಕೊಂಡ ಇವರು ಕೆಲವರಿಗೆ ಭೀಷ್ಮರಾಗಿ ಮತ್ತೂ ಕೆಲವರಿಗೆ ದ್ರೋಣರಾಗಿದ್ದರು. ಹಾರ್ಮೋನಿಯಂ ಮೇಷ್ಟ್ರಾಗಿದ್ದರು. ನಾಟಕದ ನಿರ್ದೇಶಕರಾಗಿದ್ದರು. ಸಂಗೀತದ ಗುರುವಾಗಿದ್ದರು. ಉತ್ತರ ಭಾರತದ ಜನಕ್ಕೆ ಬಾಬಾ ಆಗಿದ್ದರು. ನಮಗೆಲ್ಲ ಮೇಷ್ಟ್ರಾಗಿದ್ದರು. ಒಟ್ಟಿನಲ್ಲಿ ಹೇಳಬೇಕೆಂದರೆ ಇಡೀ ರಂಗಭೂಮಿಯ ಜನಕ್ಕೆ, ರಂಗಾಸಕ್ತರಿಗೆ 'ಕಿಂದರಿಜೋಗಿ' ಆಗಿದ್ದರು. ಹಿಂದೆ ದಂಡು ಕಟ್ಟಿಕೊಂಡು ಮುಂದಕ್ಕೆ ಸಾಗುತ್ತಿದ್ದ ಜೋಗಿ ಇಂದು ದಂಡನ್ನು ಹಿಂದೆಯೇ ಬಿಟ್ಟು ಏಕಾಂಗಿಯಾಗಿ ಮುಂದೆ ಚಲಸಿಬಿಟ್ಟಿದ್ದಾರೆ. 'ಕಿಂದರಿ ಜೋಗಿ' ನಾಟಕದ ಕುಂಟನಂತೆ ಅಳುವ ಸರದಿ ನಮ್ಮದಾಗಿದೆ : 'ಅಯ್ಯೋ ಹೋಯಿತೆ . ಆ ನಾಕ... ಅಯ್ಯೋ ಬಂದಿತೆ ಈ ಲೋಕ...' ಮೇಷ್ಟ್ರು ಇಲ್ಲದ ಲೋಕ ಈಗ ನಮ್ಮ ಪಾಲಿಗಿದೆ. ಮನಸ್ಸು ಖಾಲಿ ಅನ್ನಿಸಲು ಪ್ರಾರಂಭಿಸಿದೆ. ಯಾರಿಗೂ ಹೇಳಿಕೊಳ್ಳಲಾಗದಂತಹ ಖಾಲಿತನ ! ಮೇಷ್ಟ್ರು ನಮ್ಮನ್ನು ಎಷ್ಟೊಂದು ಆವರಿಸಿ ಬಿಟ್ಟಿದ್ದರು ಎನ್ನುವ ಸತ್ಯ, ಈಗಲ್ಲ, ಇನ್ನು ಮುಂದಿನ ದಿನಗಳಲ್ಲಿ ಹೆಚ್ಚು ಹೆಚ್ಚು ಅರ್ಥವಾಗುತ್ತದೆ. ಅದೇ ಅವರ ವ್ಯಕ್ತಿತ್ವ. ಯಾಕೆಂದರೆ ನಮ್ಮ ೧೩ ವರ್ಷಗಳ ಒಡನಾಟದಲ್ಲಿ ರಂಗಾಯಣದ ಪ್ರಾರಂಭದ ಮೊದಲೆರಡು ವರ್ಷಗಳಲ್ಲಿ ಅವರಾಡುತ್ತಿದ್ದ ಮಾತುಗಳು ನಮಗೆ ಅಂದು ಅರ್ಥವಾಗದೆ ಇವತ್ತಿಗೆ ಅರ್ಥವಾಗಿದೆ. ಹಾಗೆಯೇ ನಿನ್ನೆ ಮೊನ್ನೆ ಅವರಾಡಿದ ಅಸಂಖ್ಯ ಅಸಂಗತ ವಿಷಯಗಳು ಮುಂದೆ ನಮ್ಮನ್ನು ಕಾಡಲು ಸನ್ನದ್ಧವಾಗಿವೆ. ಅವರೊಡನೆ ನಾವು ಬೆಳೆದು ಬಂದದ್ದೇ ಹೀಗೆ. ಅವರ ಮಾತುಗಳನ್ನು ಅರ್ಥವಾಗಿಸಿಕೊಳ್ಳಲು ಬಹಳ ಶ್ರಮಪಟ್ಟಿದ್ದೇವೆ. ಕಣ್ಣರಳಿಸಿ ಸುಮ್ಮನೆ ಕೇಳಿಕೊಂಡ ಕ್ಷಣಗಳಲ್ಲಿ 'ನಿಮಗೆ ಅರ್ಥವಾಗೋಲ್ಲ' ಎಂದು ಬಯ್ಸಿಕೊಂಡಿದ್ದೇವೆ. ನಮ್ಮ ಪೆದ್ದುತನಗಳಿಗೆ ಅವರು ಸಿಟ್ಟು ಮಾಡಿಕೊಳ್ಳಲಾಗದೆ ತಲೆ ಚಚ್ಚಿಕೊಂಡು ಒದ್ದಾಡುವುದನ್ನು ಕಂಡಿದ್ದೇವೆ. ಹಾಗೆಯೇ ನಂತರದ ದಿನಗಳಲ್ಲಿ ಅವರಾಡಿದ ಮಂತ್ರಕ್ಕೆ ತಿರುಮಂತ್ರ ಒಡ್ಡಿದಾಗ ಅಚ್ಚರಿಯಿಂದ ನಮ್ಮನ್ನು ಅಡಿಯಿಂದ ಮುಡಿಯವರೆಗೆ ದೃಷ್ಟಿಸಿ ಗಡ್ಡದ ಮರೆಯಲ್ಲಿ ಸೊಟ್ಟ ನಗೆ ನಕ್ಕು ನನಗೆ ಬೇಕಾಗಿದ್ದದ್ದು ಇದೇ ಎನ್ನುವಂತೆ ನೆಟ್ಟಗೆ ಮುಂದೆ ಸಾಗಿದ್ದನ್ನು ನೋಡಿದ್ದೇವೆ. ''ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ, ಎಂದು ಹೇಳಬಾರದು'' ಎಂದು ಹಾಡಿದ ಮೇಷ್ಟ್ರು ಯಾವಾಗಲೂ ನಮಗೆ ರಂಗಾಯಣದಲ್ಲಿ ಹೇಳುತ್ತಿದ್ದರು : ''ನನ್ನನ್ನು ಮೀರಿ ನೀವು ಬೆಳೀಬೇಕು. ನನ್ನನ್ನು ದಾಟಿ ಹೋಗಬೇಕು'' ಎಂದು. ಹಾಗಾಗಿಯೇ ಅವರು ಅಷ್ಟೊಂದು ದೊಡ್ಡ ವ್ಯಕ್ತಿಯಾಗಿದ್ದರೂ ಅವರೊಡನೆ ನಾವು ಮನಸ್ಸು ಬಿಚ್ಚಿ ಜಗಳವಾಡಿದ್ದೇವೆ. ಭಿನ್ನಾಭಿಪ್ರಾಯವನ್ನು ಯಾವ ಎಗ್ಗಿಲ್ಲದೆ ನಿರ್ಭೀತಿಯಿಂದ ಹೇಳಿದ್ದೇವೆ. ಒಪ್ಪದ ವಿಷಯವನ್ನು ಖಂಡಿಸಿದ್ದೇವೆ. ಮುನಿಸಿಕೊಂಡು ಮಾತು ಬಿಟ್ಟಿದ್ದೇವೆ. ಇದಾವುದನ್ನೂ ತಲೆಗೆ ಹಚ್ಚಿಕೊಳ್ಳದೆ ಮೇಷ್ಟ್ರು ಮತ್ತೆ ಮೊದಲಿನಂತೆಯೇ ವರ್ತಿಸಿದ್ದಾರೆ. ಅವಕಾಶ ಸಿಕ್ಕಾಗ ಚುಚ್ಚು ನುಡಿಗಳಿಂದ ಹಂಗಿಸಿದ್ದಾರೆ; ತೀರಾ ಸಾಮಾನ್ಯನಂತೆ ವರ್ತಿಸಿ ಅನಗತ್ಯ ಅವಮಾನಿಸಿದ್ದಾರೆ; ಅವರ ವರ್ತನೆಗೆ ನಾವು ಹೇಗೆ ಪ್ರತಿಕ್ರಿಯಿಸಬಹುದೆಂದು ಪರೀಕ್ಷಿಸಿದ್ದಾರೆ. ಆದರೆ ಯಾರಿಗೂ ದುಷ್ಟರಾಗಲಿಲ್ಲ. ರಂಗಭೂಮಿಯಲ್ಲಿ ಈ ಎಲ್ಲಾ ಭಾವನೆಗಳು ಸಂಚಾರಿ ಭಾವ, ಬಹಳ ದಿನ ಉಳಿಯುವುದಿಲ್ಲ ಎಂದು ಸಮಾಧಾನ ಮಾಡುತ್ತಲೇ ಸ್ಥಾಯಿಭಾವ ಸಂಚಾರಿ ಭಾವಗಳ ಪಾಠ ಮಾಡಿದ್ದಾರೆ.

ಮೇಷ್ಟ್ರು ಕೆಲವು ಬಾರಿ ಸಿಕ್ಕಾಪಟ್ಟೆ ಬಯ್ಯುತ್ತಿದ್ದರು. ನಮಗೆ ಅವರು ಯಾಕೆ ಬಯ್ಯುತ್ತಿರಬಹುದು ಎಂದು ಕೂಡ ಅರ್ಥವಾಗುತ್ತಿರಲಿಲ್ಲ. ಇನ್ನು ಕೆಲವು ಬಾರಿ ಅಷ್ಟೇ ಹೊಗಳುತ್ತಿದ್ದರು. ಒಂದಲ್ಲ ಒಂದು ಬಾರಿ ಎಲ್ಲರಿಗೂ ಈ ರೀತಿ ಅನುಭವವಾಗಿತ್ತು. ಕೆಲವು ಸಲ ನಾವು ಸಿಟ್ಟು ಮಾಡಿಕೊಂಡು ಮಾತು ಬಿಟ್ಟದ್ದು ಉಂಟು. ಕೆಲವರು ಸಂಸ್ಥೆಯನ್ನು ಬಿಡುವ ಯೋಚನೆಯನ್ನೂ ಮಾಡಿದ್ದಿದೆ. ನಮ್ಮ ಈ ಅಸಮಾಧಾನದ ವಾಸನೆ ಅವರಿಗೆ ತಟ್ಟಿರಬೇಕು. ಹಾಗಾಗಿ ಒಂದು ದಿನ ಈ ವಿಷಯದ ಬಗ್ಗೆ ಪ್ರಸ್ತಾಪ ಬಂದಾಗ ಅವರು ಹೇಳಿದ ಮಾತು ಆಶ್ಚರ್ಯ ತರಿಸಿತ್ತು. ''ಶಿಷ್ಯವರ್ಗದಲ್ಲಿ ಎಲ್ಲಾ ತರಹದ ಶಿಷ್ಯರಿರುತ್ತಾರೆ. ಎಲ್ಲರೂ ಒಂದೆ ರೀತಿ ಇರುವುದಿಲ್ಲ. ಕೆಲವರು ಅರ್ಜುನನ ರೀತಿ ಇರ್ತಾರೆ. ಆಗ ಅವರು ಎಷ್ಟೇ ಒಳ್ಳೆಯ ಕೆಲಸ ಮಾಡಿದರೂ ಬಯ್ಯಬೇಕಾಗತ್ತೆ. ಯಾಕೆಂದರೆ ಹಾಗೆ ಬಯ್ಯುವುದರಿಂದ ಅವರು ಸಿಟ್ಟಿಗೆದ್ದು ಮತ್ತಷ್ಟು ಒಳ್ಳೆಯ ಕೆಲಸ ಮಾಡ್ತಾರೆ. ಆದರೆ ಕರ್ಣನಂಥ ಶಿಷ್ಯರು ಸ್ವಲ್ಪ ಉತ್ತಮ ಕೆಲಸ ಮಾಡಿದರೂ ಹೊಗಳಬೇಕಾಗತ್ತೆ. ಯಾಕೆಂದರೆ ಅವರು ಮತ್ತಷ್ಟು ಮುದುಡಬಹುದು ಅನ್ನೋ ಆತಂಕ ನನಗೆ.'' ಒಮ್ಮೆ ಮೇಷ್ಟ್ರಿಗೂ, ಅರುಣನಿಗೂ ಹೀಗೆ ಯಾವುದೋ ಕೆಲಸಕ್ಕೆ ಸಂಬಂಧಪಟ್ಟಂತೆ ಮಾತುಕತೆಯಾಗಿ ಮೇಷ್ಟ್ರು ಅವನನ್ನು ಚೆನ್ನಾಗಿ ಬಯ್ದಿದ್ದರು. ಕೆಲಸದ ಬಗ್ಗೆ, ಅವನ ಕಲ್ಪನೆಗಳನ್ನು ಸಾಕ್ಷಾತ್ಕರಿಸುವುದರ ಬಗ್ಗೆ ಎಂದೂ ರಾಜಿಯಾಗದ ಅರುಣನಿಗೆ ಮೇಷ್ಟ್ರ ಬಗ್ಗೆ ವಿಪರೀತ ಸಿಟ್ಟು ಬಂದಿತ್ತು. ಮೇಷ್ಟ್ರು ಬಯ್ದು ಮನೆಗೆ ತೆರಳಿದ್ದರು. ಆದರೆ ಅರುಣ ಇಡೀ ರಾತ್ರಿ ಕೆಲಸ ಮಾಡಿ ಬೆಳಗ್ಗೆ ಅವರು ಬರುವ ವೇಳೆಗೆ ಎಲ್ಲವನ್ನೂ ಮುಗಿಸಿ ಮನೆಗೆ ಹೊರಟಿದ್ದ. ಸಿಟ್ಟು ಆರಿರಲಿಲ್ಲ. ಆದರೆ ಕಾರಂತರು ನಗುತ್ತಾ ಅವನನ್ನು ಸಂತೈಸಿ ನೀನು ಈ ಕೆಲಸ ಮಾಡ್ತೀಯ ಅಂತ ಗೊತ್ತಿತ್ತು. ಅದಕ್ಕೇ ಬಯ್ದೆ ಎಂದಾಗ ಅರುಣನಿಗೆ ಅವರ ಮೇಲಿದ್ದ ಸಿಟ್ಟು ಮಂಗಮಾಯ ! ಈ ರೀತಿ ತಮ್ಮ ಶಿಷ್ಯವರ್ಗಕ್ಕೆ ಅವರು ಅವರದೇ ಆದ ರೀತಿಯ ಭಾವನಾತ್ಮಕವಾದ ಚಿಕಿತ್ಸೆ ನೀಡುವ ಮೂಲಕ ಪಾಠ ಹೇಳುತ್ತಿದ್ದರು.

ಮೇಷ್ಟ್ರು ಎಂದೂ, ಯಾವತ್ತೂ, ಯಾವ ಗಳಿಗೆಯಲ್ಲೂ ಅಪ್ಪಿ ತಪ್ಪಿ ಕೂಡ 'ಅವಾಚ್ಯ' ಎಂದು ಕರೆಸಿಕೊಳ್ಳುವಂತಹ ಯಾವ ಬಯ್ಗಳನ್ನು ಬಳಸಿದವರಲ್ಲ. ಆದರೆ ಅವುಗಳ ಬಗ್ಗೆ ಕುತೂಹಲ ಇಟ್ಟುಕೊಂಡಿದ್ದರು. ಅವರು ಯಾವಾಗಲೂ ಹೇಳುತ್ತಿದ್ದ ಮಾತು ನೆನಪಾಗುತ್ತದೆ :

'ಬ್ರಾಹ್ಮಣ ಬಯ್ಗಳು - ಅಂದರೆ, ಮನೆ ಹಾಳಾಗ್ಹೋಗ, ನೆಗೆದು ನೆಲ್ಲಿಕಾಯಾಗ್ಹೋಗ, ಬೆಂಕಿ ಹಾಕ, ನಾಶ ಆಗ್ಹೋಗ, ಮುಂಡೇದೆ...' ಮುಂತಾದವು destructive ಬಯ್ಗಳಗಳು. ಆದರೆ ಶೂದ್ರ ಬಯ್ಗಳು... 'ಅಮ್ಮ... ಅಕ್ಕ... ಮುಂತಾದವು productive ಬಯ್ಗಳು' ಅಂತ. ಬಯ್ಗಳಲ್ಲಿಯೂ ಎಷ್ಟೊಂದು ವೈವಿಧ್ಯತೆ ಇದೆ ನೋಡಿ. ಅವುಗಳಿಗೂ ಅದರದೇ ಆದ pitch, tone ಎಲ್ಲಾ ಇರುತ್ತೆ. ಗಮನಿಸಿ ನೋಡಿ. ನಮ್ಮಲ್ಲಿ ಕೆಲವರಿಗೆ ಚೆನ್ನಾಗಿ ಬಯ್ಯೋಕೂ ಬರೋಲ್ಲ'' (ಅವರೂ ಸೇರಿಕೊಂಡಂತೆ) ಎಂದು ಹೇಳುತ್ತಿದ್ದರು.

ಒಮ್ಮೆ ನಾವು ಬಸು ನಿರ್ದೇಶನದ ವೋಲೆ ಸೋಯಂಕನ 'ರೋಡ್' ನಾಟಕ ಮಾಡುವ ಸಂದರ್ಭದಲ್ಲಿ ಮೇಷ್ಟ್ರು ಒಂದು ಪೋಲಿ ಹಾಡಿಗೆ ಸಂಗೀತ ಸಂಯೋಜನೆ ಮಾಡಬೇಕಾಗಿ ಬಂತು. (ನಡುವಾ ಮೇಲೆತ್ತಿ ನಡೆದೋಳೆ... ನನ್ನ ಚಡ್ಡಿ ಒದ್ದೆಯಾಯಿತು). ಈ ಹಾಡಿನ ಸಾಲುಗಳ ಮಧ್ಯದಲ್ಲಿ ಕೆಲವು ಬಯ್ಗಳಗಳನ್ನು ಸೇರಿಸಿಕೊಂಡು ಹಾಡಬೇಕಿತ್ತು. ಈ ಹಾಡನ್ನು ಕೃಷ್ಣಪ್ರಸಾದ್ ಮತ್ತು ಪಿಚ್ಚಳ್ಳಿ ಶ್ರೀನಿವಾಸ ಹಾಡುತ್ತಿದ್ದರು. ತಾಲೀಮು ಮಾಡಿಸುತ್ತ ಮೇಷ್ಟ್ರು ಪಿಚ್ಚಳ್ಳಿಗೆ ಬಯ್ಗಳಗಳನ್ನು ಒಮ್ಮೆ ಬಯ್ದು ತೋರಿಸು ಎಂದು ಹೇಳಿದರು. ಪಿಚ್ಚಳ್ಳಿ Force ನಿಂದ ಬಯ್ಗಳನ್ನು ಬಯ್ದು ತೋರಿಸಿದನು. ಆಗ ಮೇಷ್ಟ್ರು, ''ಪಿಚ್ಚಳ್ಳಿ, ಅಷ್ಟೊಂದು ಫೋರ್ಸ್ ಹಾಕಿ ಬಯ್ಯಬೇಡ, ಬಯ್ಗಳನ್ನು ಬಯ್ದರೆ ಸಾಕು. ಪಿಸುಗುಟ್ಟಿದರೂ ಬಯ್ಗಳವೇ, ಮನಸ್ಸಿನಲ್ಲಿ ಬಯ್ದುಕೊಂಡರೂ ಬಯ್ಗಳವೇ. ಬಯ್ಗಳಿಗೆ ಅದರದೇ ಆದ ಗುಣವಿದೆ'' ಎಂದಾಗ ಪಿಚ್ಚಳ್ಳಿಯ ಮುಖ ನೋಡಿ ಎಲ್ಲರಿಗೂ ನಗು.

ಮತ್ತೊಮ್ಮೆ ನಾವು 'ಕುಸುಮಬಾಲೆ' ನಾಟಕ ಮಾಡುವ ಸಂದರ್ಭದಲ್ಲಿ ದೇವನೂರ ಮಹದೇವ ಅವರನ್ನು ರಂಗಾಯಣಕ್ಕೆ ಆಹ್ವಾನಿಸಿದ್ದೆವು. 'ಕುಸುಮಬಾಲೆ'ಯ ಬಗ್ಗೆ ಅಭಿಪ್ರಾಯವಿನಿಮಯ, ಚರ್ಚೆ, ಪ್ರಶ್ನೆ.... ಇವುಗಳು ಹೀಗೆ ನಡೆಯುತ್ತಿರುವಾಗ ಮೇಷ್ಟ್ರು ದೇವನೂರ ಅವರನ್ನು ಕುರಿತು ''ಅಲ್ಲಾ ಮಾದೇವ ಅವರೇ, ನಿಮ್ಮ ಕಾದಂಬರಿ ಉದ್ದಕ್ಕೂ ಮನುಷ್ಯ ಸಂಬಂಧಗಳ ಬಗ್ಗೆಯೇ ಹೇಳ್ತಾ ಹೋಗ್ತೀರಿ. ಎಲ್ಲೂ ಇಡೀ ಕಾದಂಬರಿಗೆ ಕೇಂದ್ರ ಬಿಂದು ಅಂತ ಇಲ್ಲ. ಅದು ಎಲ್ಲರ ಕತೆ ಅನ್ನೋ ಹಾಗೆ ಅನ್ನಿಸುತ್ತೆ, ಅಲ್ಲದೆ ನಿಮ್ಮ ಕಾದಂಬರಿಯಲ್ಲಿ ಬಯ್ಗಳನ್ನು ಚೆನ್ನಾಗಿ ಬಳಸಿದೀರಿ. ಅಷ್ಟೊಂದು ವಿಧವಿಧವಾದ ಬಯ್ಗಳು ನಿಮಗೆ ಹೇಗೆ ಹುಟ್ಟಿದವು ಅಂತ' ಎಂದರು. ಆಗ ದೇವನೂರು ತಮ್ಮ ಮಾಮೂಲು ಶೈಲಿಯಲ್ಲಿ ಪಟಕ್ಕನೆ ಉತ್ತರ ಕೊಡದೆ ಸಿಗರೇಟಿನ ಧಂ ಅನ್ನು ಒಂದೆರಡು ಬಾರಿ ಎಳೆದು, 'ಮತ್ತೆ... ಅದು... ಅದು...' ಎನ್ನುತ್ತಾ 'ನೋಡಿ ಸಾರ್, ಬ್ರಾಂಬರಿಗೆ ಓಂ ಅಂದ್ರೂ ಒಂದೆ, ದಲಿತರಿಗೆ ನಿಮ್ಮಮ್ಮನ್ ಅಂದ್ರೂ ಒಂದೆ' ಎಂದಾಗ ಎಲ್ಲರೂ ತಬ್ಬಿಬ್ಬು. ಒಂದು ಕ್ಷಣ ಸುಮ್ಮನಾದ ಮೇಷ್ಟ್ರು ನಂತರ ನಮ್ಮ ಬಳಿ ಬಂದು 'ನಟರಿಗೆ ರಂಗಭೂಮೀಲಿ ಬಯ್ಗಳೂ ಮುಖ್ಯ, ಅವುಗಳ ಬಗ್ಗೇನೂ ಒಂದು workshop ಮಾಡಿಸಬೇಕು' ಅಂದರು.

ಹುಟ್ಟು ಮತ್ತು ಸಾವಿನ ಬಗ್ಗೆ ಮೇಷ್ಟ್ರು ಹೀಗೆ ಹೇಳ್ತಿದ್ದರು : 'ಹುಟ್ಟು routine ಆದರೆ ಸಾವು creative'. ರಂಗದ ಮೇಲೆ ಸಾಯುವಾಗ ಸುಮ್ಮನೆ ದೊಪ್ ಎಂದು ಬಿದ್ದುಬಿಟ್ಟರೆ, 'ಸಾವು ತುಂಬಾ creative. ಎಷ್ಟು ರೀತಿ ಸಾಯಬಹುದು ! ಸಾಯೋನು ಕಾಲನ್ನು ಮೇಲೆತ್ತಿಕೊಂಡು ಕೂಡ ಸಾಯಬಹುದು. ಎಲ್ಲರೂ ಒಂದೇ ರೀತಿ ಸಾಯೋದಿಲ್ಲ ನೋಡಿ' ಎಂದು ಹೇಳುತ್ತಿದ್ದರು. ಅವರ ನಿರ್ದೇಶನದ 'ಚಂದ್ರಹಾಸ' ನಾಟಕದಲ್ಲಿ ಪುಳಿಂದಕನ ಜೊತೆ ಹೋರಾಡಿದ ಹುಲಿ ಕೊನೆಗೆ ಸಾವನ್ನಪ್ಪಿ ಕೆಳಗೆ ಬೀಳುತ್ತದೆ. ಹುಲಿ ಸತ್ತಿತು ಎಂದು ಜನ ಅಂದುಕೊಳ್ಳುವಷ್ಟರಲ್ಲಿ ಸತ್ತ ಹುಲಿ ಎದ್ದು ಪುಳಿಂದಕನ ಬೆನ್ನ ತಟ್ಟಿ ಚೆನ್ನಾಗಿ ಕೊಂದೆ ಎಂಬರ್ಥದಲ್ಲಿ ಶಹಬಾಸ್‌ಗಿರಿಕೊಟ್ಟು ಮತ್ತೆ ಸತ್ತು ಬೀಳುತ್ತದೆ. ಆಗ ಪ್ರೇಕ್ಷಕನ ತುಟಿಯಂಚಿನಲ್ಲಿ ನಗು ಹಾದು ಹೋಗುತ್ತದೆ. ಪುಳಿಂದಕನಾಗಿ ಮಹದೇವ ಮತ್ತು ಹುಲಿಯಾಗಿ ಕೃಷ್ಣಕುಮಾರ ನಟಿಸುತ್ತಿದ್ದರು. ಸತ್ತು ಬಿದ್ದಂತೆ ನಟಿಸಿದ ಕೃಷ್ಣನಿಗೆ ಮೇಷ್ಟ್ರು, ''ಸತ್ತ ಮೇಲೆ ಏನು ಮಾಡಬಹುದು ಅಂತ ಯೋಚನೆ ಮಾಡು. ನಿಮ್ಮ ದಕ್ಷಿಣ ಕನ್ನಡದ ಯಕ್ಷಗಾನದಲ್ಲಿ ಏನು ಮಾಡ್ತಾರೆ' ಎಂದು ಅವನನ್ನು ಮೇಲೆ ಹೇಳಿದಂತೆ ಮಾಡಲು ಪ್ರೇರೇಪಿಸಿದ್ದರು. ಸಾವು ಬದುಕಿನ ನಡುವೆ ಹೋರಾಡುತ್ತಿದ್ದ ಕಾರಂತರು ಇನ್ನೇನು ವೆಂಟಿಲೇಟರ್ಸ್ ತೆಗೆದ ತಕ್ಷಣ ಹೊರಟೇ ಬಿಡುವರು ಎಂಬ ಆತಂಕದಲ್ಲಿ ಹಾಸ್ಪಿಟಲ್‌ನ ಮುಂದೆ ನೆರೆದಿದ್ದ ಅಸಂಖ್ಯ ಅಭಿಮಾನಿ ಪ್ರೇಕ್ಷಕರಿಗೆ ವೆಂಟಿಲೇಟರ್ಸ್ ತೆಗೆದ ತಕ್ಷಣ ತಮ್ಮ ಆರೋಗ್ಯಸ್ಥಿತಿಯನ್ನು ಮತ್ತೆ ಮಾಮೂಲು ಸ್ಥಿತಿಗೆ ತರಿಸಿಕೊಂಡು ಎಲ್ಲರ ನಿರೀಕ್ಷೆಯನ್ನು ಸುಳ್ಳು ಮಾಡಿದ್ದರು. ನಾವು ರಂಗಾಯಣಕ್ಕೆ ಸೇರಿಕೊಂಡಾಗ ಅವರು ಸದಾ ಹೇಳುತ್ತಿದ್ದ ಪಾಠ ನೆನಪಾಗುತ್ತದೆ : Actor should break the expectation of the audience'.

ರಂಗಾಯಣದ 'ಭೂಮಿಗೀತ' ರಂಗಮಂದಿರ ಕೂಡ ಈ ಕಾರಣಕ್ಕಾಗಿಯೇ ನಿರ್ಮಿಸಲ್ಪಟ್ಟಿತ್ತು. ನಾಟಕ ಎಲ್ಲಿ ನಡೆಯುತ್ತದೆ ಎಂಬುದು ಪ್ರೇಕ್ಷಕರಿಗೆ ಗೊತ್ತಾಗಬಾರದು, ಬೆಳಕು ಬಂದೆಡೆ ನಾಟಕ ನೋಡುವಂತಾಗಬೇಕು ಎನ್ನುತ್ತಿದ್ದರು. ರಂಗದ ನಾಲ್ಕೂ ಬದಿಯಲ್ಲಿ ನಾಟಕ ಮಾಡುವ ಅವಕಾಶ ಇತ್ತು. ನಾಟಕದಿಂದ ನಾಟಕಕ್ಕೆ ಜನ ಕುಳಿತುಕೊಳ್ಳುವ ಸ್ಥಳ ಕೂಡ ಬದಲಾಗುತ್ತಿತ್ತು. 'ಮಗ್ಗದವರು' ನಾಟಕಕ್ಕೆ ಜನ ಮಧ್ಯದಲ್ಲಿ ನೆಲದ ಮೇಲೆ ಕುಳಿತು ಸುತ್ತಲೂ ನೋಡುತ್ತಿದ್ದರು. 'ಭೂಮಿಗೀತ' ನಾಟಕಕ್ಕೆ ಜನ ಮೂರು ದಿಕ್ಕುಗಳಲ್ಲಿ ಕುಳಿತು ನಾಟಕ ನೋಡುತ್ತಿದ್ದರು. "Mid-summer Nights Dream' ನಾಟಕಕ್ಕೆ ಪ್ರೇಕ್ಷಾಂಗಣ ರಂಗವಾಗಿ, ರಂಗಭೂಮಿ ಪ್ರೇಕ್ಷಾಂಗಣವಾಗಿತ್ತು. ಈ ರೀತಿ ನಾಟಕದಿಂದ ನಾಟಕಕ್ಕೆ ಬದಲು ಮಾಡಿಕೊಳ್ಳಬಹುದಾದಂತಹ ಚಲನಾಶಕ್ತಿ 'ಭೂಮಿಗೀತ' ರಂಗಮಂದಿರಕ್ಕೆ ಇತ್ತು. ಕಾರಂತರು ಎಂದೂ ತಮ್ಮ ಕಲ್ಪನೆಗೆ ಚೌಕಟ್ಟು ಹಾಕಿಕೊಳ್ಳುತ್ತಿರಲಿಲ್ಲ. ಅವರಿಗೆ ಕಣ್ಣು ಹಾಯಿಸಿದ ಕಡೆಗೆ ನಾಟಕ ಕಾಣಿಸಬೇಕಿತ್ತು. ಅವರ ಕಲ್ಪನೆ ಚೌಕಟ್ಟಿನೊಳಗೆ ಸಿಲುಕುತ್ತಿರಲಿಲ್ಲ. ಪ್ರೇಕ್ಷಕ ತುಂಬಾ ಆರಾಮಾಗಿ ಕುಳಿತು ನಾಟಕ ನೋಡುವುದು ಅವರಿಗೆ ಬೇಕಾಗಿರಲಿಲ್ಲ. ಅವರು ನಿರ್ಮಿಸಿದ 'ವನರಂಗ' ಬಯಲುರಂಗಮಂದಿರದಲ್ಲೂ ಪ್ರೇಕ್ಷಕ ಒರಗಿ ಕುಳಿತುಕೊಳ್ಳುವ ಅವಕಾಶ ಇರಲಿಲ್ಲ. ಅವರು ದೇಸೀ ರಂಗಮಂದಿರಗಳಿಗೆ ಹೆಚ್ಚು ಒತ್ತು ಕೊಡುತ್ತಿದ್ದರು.

ಅವರು ಯಾವತ್ತೂ ಗುಂಪಿನ ದೃಶ್ಯಗಳಿಗೆ, ಗುಂಪು ಇರುವಂತಹ ನಾಟಕಗಳಿಗೆ ಹೆಚ್ಚು ಮಹತ್ವ ಕೊಡುತ್ತಿದ್ದರು. ಅವರು ರಂಗಭೂಮಿಯಲ್ಲಿ ಒಬ್ಬನನ್ನು ಅಥವಾ ಒಬ್ಬಳನ್ನು ನೋಡಲು ಇಷ್ಟಪಡುತ್ತಿರಲಿಲ್ಲ, ಒಂದು ಸಮೂಹವನ್ನು ನೋಡುವುದಕ್ಕೆ ಹಾತೊರೆಯುತ್ತಿದ್ದರು. ಅವರ ಹೆಚ್ಚು ಕಡಿಮೆ ಎಲ್ಲಾ ನಾಟಕಗಳಲ್ಲೂ ಗುಂಪು ದೃಶ್ಯಗಳು ವಿಜೃಂಭಿಸಿವೆ. ಎನ್.ಎಸ್.ಡಿ.ಯ ಮ್ಯಾಕ್‌ಬೆತ್, ರಂಗಮಂಡಲದ ಮಹಾನಿರ್ವಾಣ, ಘಾಸಿರಾಂ ಕೊತ್ವಾಲ, ಹಯವದನ, ರಂಗಾಯಣದ ಕಿಂದರಿಜೋಗಿ, ಮೂಕನ ಮಕ್ಕಳು, ಚಂದ್ರಹಾಸ, ಅಗ್ನಿವರ್ಣ, ನೀನಾಸಂನ ಗೋಕುಲ ನಿರ್ಗಮನ, ಬೆಂಗಳೂರು ಕಲಾವಿದರಿಗೆ ಮಾಡಿಸಿದ ಜೋಕುಮಾರ ಸ್ವಾಮಿ, ಹಯವದನ – ಹೀಗೇ ಇನ್ನೂ ಹಲವು ನಾಟಕಗಳು ಉದಾಹರಣೆಗಿವೆ. ಮೇಷ್ಟ್ರಿಗೆ ನಟರ ಗುಂಪು ಎದ್ದು ಕಾಣಿಸಬೇಕಿತ್ತು. ಯಾವಾಗಲೂ



ಕಾರಂತರು ತಮ್ಮ ಶಿಷ್ಯವರ್ಗದೊಂದಿಗೆ

ಹೇಳ್ತಿದ್ದರು : ''ಗುಬ್ಬಿ ಕಂಪನಿಯಿಂದ ಒಬ್ಬ ರಾಜಕುಮಾರ ಹುಟ್ಟಿ ಬಂದರೆ, ನನಗೆ ಗುಂಪು ಗುಂಪು ರಾಜಕುಮಾರ್‌ಗಳು ಹುಟ್ಟಿ ಬರಬೇಕು. ಯಾರು, ಯಾವಾಗ, ಯಾವ ಪಾತ್ರವನ್ನು ಬೇಕಾದರೂ ಮಾಡುವಷ್ಟು ಪರಿಣತರಿರಬೇಕು. ಇದೇ ನನ್ನ ಕನಸು'', ಎಂದು ಹೇಳುತ್ತಿದ್ದರು. ಸಂಸರ ಬಿರುದಂತೆಂಬರ ಗಂಡ ಮತ್ತು ಮಂತ್ರಶಕ್ತಿ ನಾಟಕಗಳ ಬಗ್ಗೆ ಅವರಿಗೆ ತುಂಬಾ ಒಲವಿತ್ತು. 'ಅವೆರಡು ತುಂಬಾ ಕಷ್ಟವಾದ ನಾಟಕಗಳು. ಅವುಗಳನ್ನು ಮಾಡೋಕೆ ತುಂಬಾ ಪರಿಣತರಾದ ತಂಡ ಬೇಕು. ಅದೇ ನನ್ನ ಕನಸು', ಎಂದೆಲ್ಲ ಹೇಳುತ್ತಿದ್ದರು.

ಇನ್ನು ನಾಟಕಗಳನ್ನು ಕಟ್ಟುವ ಪ್ರಕ್ರಿಯೆಯಲ್ಲಿ ಅವರು ಎಂದೂ ಯಶಸ್ಸಿನತ್ತ ಗಮನವಿಡುತ್ತಿರಲಿಲ್ಲ. 'ಕಿಂದರಿಜೋಗಿ'ಯಂಥ ಯಶಸ್ವಿ ನಾಟಕ ಕೊಟ್ಟು ಇಡೀ ಮೈಸೂರಿನ ಮಕ್ಕಳಿಗೆಲ್ಲ ಹುಚ್ಚೆಬ್ಬಿಸಿದ್ದು ಎಷ್ಟು ಸತ್ಯವೋ ಅಷ್ಟೇ ಸತ್ಯ 'ಮರ ಹೋತು ಮರ ಬಂತು ಡುಂ ಡುಂ ಡುಂ' ನಾಟಕ ವಿಳಾಸಕ್ಕೆ ಸಿಗದೆ ತೋಪಾದದ್ದು. ಅವರು ತುಂಬ risk ತಗೋತಿದ್ದರು. ನಾಟಕ ಹೇಗಪ್ಪಾ ಸಾಧ್ಯ ಎಂದು ಎಲ್ಲರೂ ತಲೆ ಮೇಲೆ ಕೈ ಹೊತ್ತು ಕುಳಿತುಕೊಳ್ಳುವಷ್ಟು ಹೆದರಿಸುತ್ತಿದ್ದರು. ಕೆಲವು ಬಾರಿ ಅಷ್ಟೇ ಸಂತೋಷ, ಸಂಭ್ರಮ, ತಮಾಷೆಗಳ ಮಧ್ಯೆ ಸಲೀಸಾಗಿ ನಾಟಕ ಮುಗಿಸುತ್ತಿದ್ದರು. ''ಎಲ್ಲಾ ನಾಟಕಗಳಿಗೂ ಅವುಗಳದ್ದೇ ಆದ destiny ಇರತ್ತೆ. ನಾವು ಬಲವಂತವಾಗಿ ಯಶಸ್ವಿಗೊಳಿಸೋಕೆ ಆಗಲ್ಲ. ನಾವು ಪ್ರಾಮಾಣಿಕವಾಗಿ ಕೆಲಸ ಮಾಡ್ತಾ ಹೋಗಬೇಕು ಅಷ್ಟೆ. ಯಶಸ್ಸು ನಿಮಿತ್ತ, ನಾವು ಅದರ ಬೆನ್ನು ಹತ್ತಬಾರದು'' ಎಂದು ಹೇಳುತ್ತಿದ್ದರು. ಈ ಮಾತು ಕೇವಲ ನಾಟಕ ತಯಾರಿಗಲ್ಲದೆ ನಮಗೆ ಜೀವನಕ್ಕೂ ಅಳವಡಿಸಿಕೊಳ್ಳಬೇಕಾದ ಪಾಠ ಎಂಬುದರಲ್ಲಿ ಸಂಶಯವಿಲ್ಲ.

ಇದೇ ಸಂದರ್ಭದಲ್ಲಿ ಮತ್ತೊಂದು ಮಾತು ನೆನಪಾಗುತ್ತಿದೆ. ನಾವೆಲ್ಲ ರಂಗಾಯಣಕ್ಕೆ ಬಂದ ಹೊಸತು. ಹೀಗೆ ರಂಗಭೂಮಿ ಬಗ್ಗೆ, ಅಲ್ಲಿನ ಅನಿಶ್ಚಿತ ಬದುಕಿನ ಬಗೆಗೆ, ಮುಂದೆ ಎದುರಿಸಬೇಕಾದ ಕಷ್ಟಗಳ ಬಗೆಗೆ ಕಾರಂತರು ಹೇಳುತ್ತಲೇ ಇರುತ್ತಿದ್ದರು. ಒಂದು ದಿನ ಅವರು 'ನೀವೆಲ್ಲ ಇಲ್ಲಿ ಒಳ್ಳೆಯ ಕಲಾವಿದರಾಗೋಕೆ ಬಂದಿದೀರ, ಸಂತೋಷ. ಒಳ್ಳೆ ಕಲಾವಿದರು ಕೂಡ ಆಗ್ತೀರಿ. ಅದರಲ್ಲಿ ನನಗೆ ಅನುಮಾನ ಇಲ್ಲ. ಆದರೆ ಮುಖ್ಯವಾಗಿ ಒಳ್ಳೆಯ ಮನುಷ್ಯರಾಗಬೇಕು ಅನ್ನೋದನ್ನ ಮರೀಬೇಡಿ. ನೀವು ಒಳ್ಳೆ ನಟ-ನಟಿಯರಾಗ ದಿದ್ರೂ ನನಗೆ ಬೇಸರ ಆಗಲ್ಲ, ಆದ್ರೆ ನೀವು ಒಳ್ಳೆ ಮನುಷ್ಯರಾಗದಿದ್ದರೆ ನನಗೆ ತುಂಬಾ ನೋವಾಗುತ್ತೆ.'' ಎಂದು ಎಚ್ಚರಿಸಿದ್ದರು.

ಸಾಮಾನ್ಯವಾಗಿ ಮೇಷ್ಟ್ರು ಎಂದೂ ಮದುವೆ, ಮುಂಜಿ, ತಿಥಿ, ಹಬ್ಬ ಎಂದು ಎಲ್ಲಿಗೂ ಹೋದವರಲ್ಲ. ರಂಗಭೂಮಿ ಅವರಿಗೆ ಸರ್ವಸ್ವ ಆಗಿತ್ತು. ಬೆಳಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೂ ಅವರು ಯೋಚನೆ ಮಾಡುತ್ತಿದ್ದುದು ರಂಗಭೂಮಿ ಬಗ್ಗೆಯೇ. ಒಂದು ಸಲ ಸಿಂಧುವಳ್ಳಿ ಅನಂತಮೂರ್ತಿಯವರ ಮನೆಯಲ್ಲಿ, ಅವರು ಸಾಕಿದ್ದ ಪ್ರೀತಿಯ ನಾಯಿ 'ರಂಗಣ್ಣ' ತೀರಿಕೊಂಡ. 'ರಂಗಣ್ಣ'ನನ್ನು ಬಹಳವಾಗಿ ಹಚ್ಚಿಕೊಂಡಿದ್ದ ಅನಂತಮೂರ್ತಿಯವರು ಅವನು ಸತ್ತಿದ್ದಕ್ಕೆ ತಿಥಿ ಮಾಡಲು ನಿರ್ಧರಿಸಿದ್ದರು ಮತ್ತು ಅದಕ್ಕೆ ರಂಗಭೂಮಿಯ ಗೆಳೆಯರನ್ನು ಕರೆದಿದ್ದರು. ಎಂದೂ ಅಂತಹ ಸಮಾರಂಭಗಳಿಗೆ ಹೋಗದ ಮೇಷ್ಟ್ರು 'ಇದು ನಾಯಿ ತಿಥಿ ಅಲ್ವಾ, ಹಾಗಾಗಿ ನಾನು ಹೋಗ್ತೀನಿ' ಎಂದು ಹೊರಟಿದ್ದರು. ಅವರಿಗೆ ನಾಯಿಗಳೆಂದರೆ ವಿಪರೀತ ಪ್ರೀತಿ. ಯಾವುದೇ ನಾಯಿ ಸಿಕ್ಕರೂ ಅವುಗಳೊಡನೆ ಮಾತಾಡಲು ಶುರು ಮಾಡುತ್ತಿದ್ದರು. ಅವರೇ ಸಾಕಿದ್ದ 'ನೀಂಜ'ನಿಗೆ ಸಂಗೀತ ಪಾಠ ಕೂಡ ಮಾಡುತ್ತಿದ್ದರು. ಮೇಷ್ಟ್ರು ಕಣ್ಮುಚ್ಚಿದ ದಿನ 'ನೀಂಜ'ನ ಮೂಕರೋದನ ಎಂಥವರಿಗೂ ಕರುಳು ಕಿವುಚುವಂತಹ ದೃಶ್ಯವಾಗಿತ್ತು.

ನಾವು, ರಂಗಾಯಣದವರು 'ಹಿಪ್ಪೋಲಿಟಸ್' ನಾಟಕ ತೆಗೆದುಕೊಂಡು ಅಮೇರಿಕಾದ ಲಾ.ಮಾ.ಮ. Experimenatl theatre groupನಲ್ಲಿ ಪ್ರದರ್ಶಿಸಲು NewYorkಗೆ ಹೋಗಿದ್ದೆವು. ಲಾಮಾನ ಮುಖ್ಯಸ್ಥೆ ಆಲೆನ್ ಸ್ಟೂವರ್ಟ್ ನಮ್ಮೆಲ್ಲರನ್ನು ವಿಚಾರಿಸುತ್ತ "Where is Karanth?' ಎಂದು ಮೇಷ್ಟ್ರಿಗಾಗಿ ಹುಡುಕಾಡುತ್ತಿದ್ದರು. ಮೇಷ್ಟ್ರು ಅಲ್ಲಿಯೇ ನಿಂತಿದ್ದರು. ಬಹುಶಃ ಆಕೆ ಕಾರಂತರನ್ನು ಸೂಟು-ಬೂಟಿನಲ್ಲಿ ನಿರೀಕ್ಷಿಸಿದ್ದರೇನೋ. ನಾವು ಇವರೇ ಕಾರಂತರು ಎಂದು ಆಕೆಗೆ ಹೇಳಿದಾಗ, ಆಕೆ ಆಶ್ಚರ್ಯದಿಂದ ಮೇಷ್ಟ್ರತ್ತ ನೋಡಿ ಉದ್ಗಾರಗಳೊಂದಿಗೆ ಅವರೆಡೆಗೆ ಹೋಗಿ ಲೊಚಕ್ಕನೆ ಮುತ್ತಿಟ್ಟಿದ್ದರು. ಮೇಷ್ಟ್ರಿಗೆ ತಮ್ಮ ಶಿಷ್ಯವರ್ಗದ ಮುಂದೆ ಈ ರೀತಿ ನಡೆದದ್ದು ಮುಜುಗರ, ನಾಚಿಕೆಯನ್ನು ತರಿಸಿತ್ತು. ಕೆಂಪಗಾಗಿ ಬಿಟ್ಟರು. ನಾವು ಮೊಟ್ಟಮೊದಲ ಬಾರಿಗೆ ಮೇಷ್ಟ್ರು ನಾಚಿಕೊಂಡದ್ದನ್ನು ನೋಡಿದೆವು. ನಾವೆಲ್ಲ ಬರುತ್ತಿದ್ದ ನಗುವನ್ನು ಹತ್ತಿಕ್ಕಿಕೊಂಡು ಆಲೆನ್ ಸ್ಟೂವರ್ಟ್‌ರ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದೆವು. ಆಕೆ ತನ್ನ ಮಾತುಗಳನ್ನು ಮುಗಿಸಿ ಹೊರಟ ತಕ್ಷಣ ಮೇಷ್ಟ್ರು ನಮ್ಮೆಲ್ಲರನ್ನು ಕುರಿತು ಗಂಭೀರವಾದದ್ದೇನೋ ಹೇಳುವಂತೆ ಒಂದೆಡೆ ಸೇರಿಸಿ, 'ಮತ್ತೆ, ಇದನ್ನ ಪ್ರೇಮಂಗೆ ಹೇಳಬೇಡಿ' ಎಂದು ನಗುತ್ತಾ ಹೊರಟುಬಿಟ್ಟರು.

ಹೀಗೆ ಅವರ ಬಗ್ಗೆ ಹೇಳುತ್ತ ಹೋದರೆ ಅದೆಷ್ಟು ನೆನಪುಗಳು ! ಹೇಳಿದ್ದಕ್ಕಿಂತ ಹೇಳದೇ ಉಳಿದದ್ದೇ ಜಾಸ್ತಿ ಇದೆ. ಎಲ್ಲಿಂದ ಶುರು ಮಾಡಬೇಕೋ, ಎಲ್ಲಿಗೆ ಮುಗಿಸಬೇಕೋ ಎಂಬುದು ಗೊತ್ತಾಗಲಾರದಷ್ಟು ಅನುಭವಗಳನ್ನು, ನೆನಪುಗಳನ್ನು ಅವರು ನಮ್ಮೊಡನೆ ಬಿಟ್ಟು ಹೋಗಿದ್ದಾರೆ. ನಿರಂತರವಾಗಿ ರಂಗಭೂಮಿಯ ಕೆಲಸ ಮಾಡುತ್ತಲೇ ಇದ್ದ ಮೇಷ್ಟ್ರು ಎಂದೂ ವಿಶ್ರಾಂತಿ ತೆಗೆದುಕೊಂಡವರಲ್ಲ. Fresh ಆಗಬೇಕು ಅಂದರೆ ಮತ್ತೆ ಹೊಸ ಕೆಲಸದಲ್ಲಿ ತೊಡಗಿಸಿಕೊಳ್ಳಬೇಕೇ ಹೊರತು ವಿಶ್ರಾಂತಿ ಪಡೆಯುವುದಲ್ಲ ಎನ್ನುತ್ತಿದ್ದರು. ಅವರು ಹಟ ಮಾಡದೆ ಆರೋಗ್ಯದ ಕಡೆ ಸ್ವಲ್ಪವಾದರೂ ಗಮನಕೊಟ್ಟು ಪ್ರೇಮ ಮೇಡಂ ಹೇಳಿದಂತೆ ಸರಿಯಾದ ಸಮಯಕ್ಕೆ ಡಾಕ್ಟರನ್ನು ಕಂಡು ಚಿಕಿತ್ಸೆ ಪಡೆದಿದ್ದರೆ ಇನ್ನೂ ಒಂದೆರಡು ವರ್ಷಗಳ ಕಾಲ ನಮ್ಮೊಡನಿರುತ್ತಿದ್ದರೇನೋ. ಕೊನೆಯ ಎರಡು ತಿಂಗಳು ಮಾತ್ರ ಅವರು ಕೆಲಸ ಮಾಡಲು ಶಕ್ತಿ ಕಳಕೊಂಡಿದ್ದರು. ಕೆಲಸ ಮಾಡೋಕೆ ಆಗದಿದ್ದ ಮೇಲೆ ಯಾಕಿರಬೇಕು ಎಂದು ಪರಿತಪಿಸುತ್ತಿದ್ದರು. ನಾವುಗಳು ಯಾರಾದರೂ ಹೋಗಿ ರಂಗಭೂಮಿಯ ಬಗ್ಗೆ ಮಾತಾಡಲು ಶುರು ಮಾಡಿದರೆ ದೇಹದ ಎಲ್ಲ ಶಕ್ತಿಯನ್ನು ಕಣ್ಣಿಗೇ ತಂದುಕೊಂಡಂತೆ ಕಣ್ಣಿನಲ್ಲಿ ಹೊಳಪು ತಂದುಕೊಂಡು ಸುಸ್ತಾಗುವವರೆಗೂ ಮಾತಾಡುತ್ತಿದ್ದರು.

ಮೇಷ್ಟ್ರು ತಮ್ಮ ರಂಗಭೂಮಿ ಜೀವನದಲ್ಲಿ ಯಶಸ್ಸಿನ ತುದಿಗೇರಿದ್ದಾರೆ. ಕೆಟ್ಟ ಸೋಲು ಗಳನ್ನ ಅನುಭವಿಸಿದ್ದಾರೆ. ಅವಮಾನಗಳನ್ನು ನುಂಗಿದ್ದಾರೆ. ಕಳಕೊಂಡಿದ್ದಾರೆ. ಪಡೆದು ಕೊಂಡಿದ್ದಾರೆ. ರಂಗಾಯಣದ ನಮ್ಮ ಗೆಳೆಯ 'ಕುಸುಮಬಾಲೆ'ಯ 'ಯಾಡಕಂದ' ಬಸವ ರಾಜ ಕೊಡಗೆ ಯಾರಿಗೂ ಸುದ್ದಿ ಕೊಡದೆ ನಮ್ಮೆಲ್ಲರನ್ನು ಬಿಟ್ಟು ಸುಮ್ಮನೆ ಹೊರಟುಬಿಟ್ಟದ್ದು ಎಲ್ಲರಿಗೂ ಆಘಾತವುಂಟುಮಾಡಿತ್ತು. ಈ ಸುದ್ದಿ ಕೇಳಿದ ಮೇಷ್ಟ್ರು ಮೌನವಾಗಿ ದುಃಖಿಸಿದರು. ತಮ್ಮ ಕಣ್ಣ ಮುಂದೆಯೇ ತನ್ನ ಶಿಷ್ಯನೊಬ್ಬನನ್ನು ಕಳೆದುಕೊಂಡ ದುಃಖ ಅವರನ್ನು ಬಾಧಿಸಿತ್ತು. ''ನನಗಿಂತಲೂ ಅವನಿಗೇ urgent ಆಗಿತ್ತೇನು ?'' ಎಂದಷ್ಟೇ ಹೇಳಿ ಗಂಟೆಗಟ್ಟಲೆ ಮೌನವಾಗಿ ಕುಳಿತಿದ್ದರು. ಒಂದು ತಿಂಗಳ ನಂತರ ಗಂಡನ ಸಾವಿನ ದುಃಖ ಹೊತ್ತ ಶಶಿಕಲಾ ಮತ್ತೆ ರಂಗಾಯಣಕ್ಕೆ ವಾಪಸ್ಸಾಗಿದ್ದಾಳೆ; ನಾಟಕಗಳಲ್ಲಿ ಅಭಿನಯಿಸುತ್ತಿದ್ದಾಳೆ ಎಂಬ ವಿಷಯ ಹೇಳಿದಾಗ ಕಣ್ತುಂಬ ನೀರು ತುಂಬಿಕೊಂಡು ಮೌನವಾಗಿ ರೋದಿಸಿದ್ದರು. ಅವರಿಗೆ ನಟಿಯರು ಎಲ್ಲಿ ರಂಗಭೂಮಿಯಿಂದ ದೂರ ಸರಿದುಬಿಡುವರೋ ಎನ್ನುವ ಆತಂಕ ಯಾವಾಗಲೂ ಕಾಡುತ್ತಿತ್ತು. ರಂಗಾಯಣಕ್ಕೆ ನಾವು ಆರು ಜನ ಹುಡುಗಿಯರು ಆಯ್ಕೆಯಾಗಿ ಹೋದಾಗ ನಮ್ಮೆಲ್ಲರ ಕೈಯಲ್ಲೂ ಭಾಷೆ ತೆಗೆದುಕೊಂಡಿದ್ದರು, ರಂಗಭೂಮಿಯಲ್ಲೇ ಉಳಿಯಿರಿ ಎಂದು ಪದೇ ಪದೇ ಹೇಳುತ್ತಿದ್ದರು. ರಂಗಾಯಣದ ಸಂದರ್ಶನಕ್ಕೆ ಒಟ್ಟು ಎಂಟು ಹುಡುಗಿಯರು ಬಂದಾಗ ಭೂಪಾಲ್ ಪ್ರಕರಣದಿಂದ ತೀರಾ ಹಣ್ಣಾಗಿದ್ದ ಕಾರಂತರು ''ಅಲ್ಲಾ ಭೂಪಾಲ್ case ನಂತರವೂ, ನಾನು ರಂಗಾಯಣ ಶುರು ಮಾಡ್ತೀನಿ ಅಂದಾಗ ಎಂಟು ಜನ ಹುಡುಗಿಯರು ಬಂದಿರೋದು ನೋಡಿದರೆ ಆಶ್ಚರ್ಯ ಆಗುತ್ತೆ. ಜೊತೆಗೇ ಸಂತೋಷವೂ ಆಗತ್ತೆ'' ಎಂದು ಶ್ರೀ ಎಂ. ಪಿ. ಪ್ರಕಾಶ್ ಬಳಿ ಹೇಳಿದ್ದರಂತೆ. ಮೇಷ್ಟ್ರು ಅಷ್ಟೊಂದು ಅಧೀರರಾಗಿದ್ದರು.

ಕೊನೆಕೊನೆಗೆ ಸಣ್ಣ ಮಗುವಿನಂತೆ ವರ್ತಿಸುತ್ತಿದ್ದರು. ಕೊನೆಯ ಒಂದು ತಿಂಗಳು ಭೂಪಾಲ್‌ನ ರಘುವೀರ್ ಹೊಳ್ಳ ಅವರ ಆರೈಕೆಯಲ್ಲಿದ್ದ ಮೇಷ್ಟ್ರು ಹೊಳ್ಳನ ಬಗ್ಗೆ, ಬಲವಂತಕ್ಕೆ ಊಟ ಮಾಡಿಸುತ್ತಿದ್ದ ರೀತಿಯ ಬಗ್ಗೆ, ಪ್ರೇಮ ಮೇಡಂ ಬಳಿ ಸಣ್ಣ ಮಗುವಿನಂತೆ 'ಹೊಳ್ಳ ಹೇಗೆ ಮಾಡ್ತಾನೆ ನೋಡು' ಎಂದು ಹೇಳುವಂತಾಗಿ ಬಿಟ್ಟಿದ್ದರು. ಪ್ರೇಮ ಮೇಡಂ ಮತ್ತು ರಘುವೀರ್ ಹೊಳ್ಳ ಅವರು ನಿರಂತರ ಆರೈಕೆ ಮಾಡುತ್ತ ಕಣ್ಣಿಗೆ ಎಣ್ಣೆ ಹಾಕಿಕೊಂಡು ಹಗಲು ರಾತ್ರಿ ಕಾಪಾಡಲು ಪ್ರಯತ್ನಿಸಿದರೂ ಉಳಿಯದೆ ತಮ್ಮ ಬೆಳಕನ್ನು ಚೆಲ್ಲಿ ಮುಂದೆ ಹೊರಟುಬಿಟ್ಟರು.

ಅಪರಿಮಿತದ ಕತ್ತಲೆಯೊಳಗೆ
ವಿಪರೀತದ ಬೆಳಕು ಅದೆ
ಕತ್ತಲೆ ಅದೆ ಬೆಳಕು ಅದೆ
ಸೋಜಿಗವೋ ಸೋಜಿಗ.

ಎಲ್ಲರಿಗೂ ಸೋಜಿಗವೆನಿಸಿಬಿಟ್ಟಿದ್ದ ಮೇಷ್ಟ್ರು ಈಗ ನಮ್ಮೊಡನಿಲ್ಲ. ಅವರ ನೆನಪುಗಳ ಗಂಟು ಹೊತ್ತು ನಾವು ಕ್ರಮಿಸಬೇಕಾದ ದಾರಿ ಇನ್ನೂ ದೂರ ಇದೆ. ನಾವೀಗ ನಮ್ಮ ಶಕ್ತಿ, ಯೋಗ್ಯತೆಗಳಿಗನುಸಾರವಾಗಿ ಕೆಲಸ ಮಾಡುತ್ತ ಸಾಂಸ್ಕೃತಿಕವಾಗಿ ಭ್ರಷ್ಟರಾಗದೇ ಉಳಿಯುವುದಷ್ಟೇ ನಾವು ಅವರಿಗರ್ಪಿಸುವ ಶ್ರದ್ಧಾಂಜಲಿ.

ಮಂಗಳಾ ಎನ್.
ರಂಗಾಯಣ - ನಾಟಕ, ಕರ್ನಾಟಕ ರಂಗ ಮಂದಿರ ಆವರಣ, ಹುಣಸೂರು ರಸ್ತೆ, ಮೈಸೂರು-೫೭೦ ೦೦೫



ನಾಚಿಗೆಕೇಡು!
ಎಷ್ಟೊಂದ್ ಮುದ್ದಾಗಿದೆ, ನನ್ ಚಿನ್ನ!
ಗುಜರಾತ್
ಅಮೆರಿಕನ್ ಭಾರತೀಯರ ಸಂಘ




ಅವಳಿ ಗೋಪುರಗಳು - 2002
ಅಮೆರಿಕಾ
ವಿಶ್ವಸಂಸ್ಥೆ




ಕಾವೇರಿ

# ಅಹಿಂಸೆಯಿಂದ ಅಖಂಡತ್ವ, ಸತ್ಯದಿಂದ ಸಾರ್ವಭೌಮತ್ವ, ಸಹಿಷ್ಣುತೆಯಿಂದ ಸಮಾನತೆ.




ಭಾರತ ಸ್ವಾತಂತ್ರ್ಯ ಗಳಿಸಿ 55 ವರ್ಷಗಳಾದವು. ಆರಂಭದ ವರ್ಷಗಳಲ್ಲಿ ಬಡತನ, ನಿರುದ್ಯೋಗ, ಅನಕ್ಷರತೆ, ಮಹಿಳೆಯರ ಶೋಷಣೆ, ವಸತಿ, ಕೃಷಿ ಸೌಕರ್ಯಗಳಂತಹ ತೀವ್ರತರ ಸಮಸ್ಯೆಗಳ ಸವಾಲುಗಳೇ ಸ್ವತಂತ್ರ ಭಾರತದ ಮುಂದಿದ್ದವು.

ಕಳೆದ ಈ ವರ್ಷಗಳಲ್ಲಿ ದೇಶ ಹಲವಾರು ಯೋಜನಾಬದ್ಧ ಕಾರ್ಯಕ್ರಮಗಳ ಮೂಲಕ ಸಮಸ್ಯೆಗಳಿಗೆ ತಕ್ಕಮಟ್ಟಿಗೆ ಪರಿಹಾರ ಕಂಡುಕೊಂಡಿದೆಯಾದರೂ ಕೆಲವು ಮೂಲಭೂತ ಸಮಸ್ಯೆಗಳು ಇನ್ನೂ ದೇಶವನ್ನು ಕಾಡುತ್ತಲಿವೆ.

**ಪ್ರಸಕ್ತ ಕರ್ನಾಟಕ ಸರ್ಕಾರ ಈ ಸಮಸ್ಯೆಗಳ ಪರಿಹಾರಕ್ಕಾಗಿ ಹಲವಾರು ಅನುಕರಣಾರ್ಹ ಮಾದರಿ ಯೋಜನೆಗಳನ್ನು ರೂಪಿಸಿ, ಅಭಿವೃದ್ಧಿಯ ಹಾದಿಯಲ್ಲೇ ಮುಂಚೂಣಿಯಲ್ಲಿದೆ.**

- ರಾಜ್ಯದಲ್ಲಿ ವಸತಿ ರಹಿತರಿಗೆ 5 ವರ್ಷಗಳ ಅವಧಿಯಲ್ಲಿ 11 ಲಕ್ಷ ಮನೆಗಳನ್ನು ನಿರ್ಮಿಸುವ ಮಹತ್ವಾಕಾಂಕ್ಷೆಯೊಂದಿಗೆ **ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮವನ್ನು** ಸ್ಥಾಪಿಸಿ ಕಾರ್ಯೋನ್ಮುಖವಾಗಿದೆ. ಕಳೆದ ಎರಡೂವರೆ ವರ್ಷಗಳಲ್ಲಿ 3,80,000 ಮನೆಗಳನ್ನು ನಿರ್ಮಿಸಲಾಗಿದೆ.

- ಮಹಿಳೆಯರು ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕವಾಗಿ ಸಶಕ್ತರಾಗಿ ಸ್ವಾವಲಂಬಿಗಳಾಗಲು ದೇಶದಲ್ಲೇ ಮಾದರಿಯೆನಿಸಿದ **ಸ್ತ್ರೀ ಶಕ್ತಿ** ಯೋಜನೆಯನ್ನು ರೂಪಿಸಿ ಆರ್ಥಿಕ ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಸಿದೆ. 75,660 ಸ್ವಸಹಾಯ ಸ್ತ್ರೀಶಕ್ತಿ ಗುಂಪುಗಳು ಇಂದು ರಾಜ್ಯದಲ್ಲಿ ಕಾರ್ಯನಿರತವಾಗಿ ರೂ.80 ಕೋಟಿಗಳ ಹಣ ತೊಡಗಿಸಿವೆ.

- 1 ರಿಂದ 12ನೆಯ ತರಗತಿಯವರೆಗೆ ಓದುತ್ತಿರುವ ಹೆಣ್ಣು ಮಕ್ಕಳಿಗೆ ಸಂಪೂರ್ಣ ಉಚಿತ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಲಾಗಿದೆ.

- ದೇಶದ ಆರ್ಥಿಕ ವ್ಯವಸ್ಥೆಯ ಬೆನ್ನೆಲುಬಾದ ಬೇಸಾಯದ ಸರ್ವತೋಮುಖ ಅಭಿವೃದ್ಧಿಗೆ ರಾಜ್ಯ ಸರ್ಕಾರ ಪ್ರಥಮ ಪ್ರಾಶಸ್ತ್ಯ ನೀಡಿದೆ. ಬೇಸಾಯದಲ್ಲಿ ಅಗತ್ಯ ಸಲಹೆ, ಸೂಚನೆ, ಗೊಬ್ಬರ, ಬೀಜ ಇತ್ಯಾದಿ ಸೌಕರ್ಯಗಳನ್ನು ಒದಗಿಸುವ 744 **ರೈತಮಿತ್ರ** ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಎಲ್ಲಾ ರೈತರ ಭೂದಾಖಲೆಗಳನ್ನು **ಭೂಮಿ** ಯೋಜನೆ ಮೂಲಕ ಕಂಪ್ಯೂಟರ್‌ಗೆ ಅಳವಡಿಸಲಾಗಿದೆ. ರೈತರ ಬೆಳೆಗಳಿಗೆ ಯೋಗ್ಯ ಬೆಲೆ ದೊರಕಿಸಿ ಕೊಡುವುದಕ್ಕಾಗಿ ಮಾರುಕಟ್ಟೆ ಮಧ್ಯಪ್ರವೇಶ, ಮಧ್ಯವರ್ತಿಗಳ ಹಾವಳಿಯನ್ನು ನಿರ್ಮೂಲಗೊಳಿಸುವ **ರೈತಸಂತೆ** ಯೋಜನೆ, ಪ್ರತ್ಯೇಕ **ತೊಗರಿ ಅಭಿವೃದ್ಧಿ ಮಂಡಳಿ** ಸ್ಥಾಪನೆ, ಇವು ಕೆಲವು ಪ್ರಮುಖ ಯೋಜನೆಗಳು.

- ರಾಜ್ಯದಲ್ಲಿ ಅತ್ಯುತ್ತಮ ಮೂಲಭೂತ ಸೌಕರ್ಯಗಳನ್ನು ಒದಗಿಸುವ ದಿಸೆಯಲ್ಲಿ ರಸ್ತೆ ಜಾಲ ನಿರ್ಮಾಣಕ್ಕಾಗಿ ಪ್ರತ್ಯೇಕ **ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮವನ್ನು** ಸ್ಥಾಪಿಸಿ 7,101 ಕಿ.ಮೀ. ಉದ್ದದ ಗ್ರಾಮೀಣ ರಸ್ತೆಗಳನ್ನು ಮತ್ತು 142 ಸೇತುವೆಗಳನ್ನು ನಿರ್ಮಿಸಲಾಗಿದೆ. ಮುಂಬರುವ ಅವಧಿಯಲ್ಲಿ ಸಂಪರ್ಕರಹಿತ 61 ಗ್ರಾಮಗಳಿಗೆ ರಸ್ತೆ ಸಂಪರ್ಕ ಕಲ್ಪಿಸುವುದರೊಂದಿಗೆ ವ್ಯವಸ್ಥಿತ ಸಂಪರ್ಕ ಜಾಲ.

ಈಗ 152 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ. ಅದನ್ನು ಸಮರ್ಥವಾಗಿ ಎದುರಿಸಲು ಕ್ರಮ. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶ, ಕುಡಿಯುವ ನೀರು ಮತ್ತು ದನಕರುಗಳಿಗೆ ಮೇವು ಪೂರೈಕೆ.



**"ಈ ಸಲದ ಮುಂಗಾರು ಮಳೆಯ ವೈಫಲ್ಯದಿಂದ ಇಂದು ನಮ್ಮ ರಾಜ್ಯದಲ್ಲಿ ಬರ ಪರಿಸ್ಥಿತಿ ತಲೆದೋರಿದೆ. ಈ ಸಂಕಷ್ಟ ಪರಿಸ್ಥಿತಿಯನ್ನು ನಾವೆಲ್ಲರೂ ಒಗ್ಗಟ್ಟಿನಿಂದ, ಧೈರ್ಯದಿಂದ ಎದುರಿಸಿ ರಾಜ್ಯವನ್ನು ಮುನ್ನಡೆಸಬೇಕಾಗಿದೆ. ಈ ನಿಟ್ಟಿನಲ್ಲಿ ಸರ್ಕಾರವು ಹಮ್ಮಿಕೊಂಡಿರುವ ಹಲವಾರು ಜನಪರ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಒಟ್ಟಾಗಿ ದುಡಿಯೋಣ. ಆ ಮೂಲಕ ರಾಜ್ಯದ ಸರ್ವಾಂಗೀಣ ಉನ್ನತಿಯನ್ನು ಸಾಧಿಸೋಣ".**

**ಜೈ ಹಿಂದ್! ಜೈ ಕರ್ನಾಟಕ !!**

**-ಎಸ್.ಎಂ. ಕೃಷ್ಣ**

56ನೇ ಸ್ವಾತಂತ್ರ್ಯೋತ್ಸವ ಶುಭಾಶಯಗಳು

## ಸ್ವಾತಂತ್ರ್ಯದ ಸ್ಫೂರ್ತಿಯೊಂದಿಗೆ ಮುನ್ನಡೆಯಲ್ಲಿ ಕರ್ನಾಟಕ.



**ಕರ್ನಾಟಕ ವಾರ್ತೆ**

"ಸರ್ವ ಜನಾಂಗದ ಶಾಂತಿಯ ತೋಟ... ಭಾರತ ಜನನಿಯ ತನುಜಾತೆ, ಜಯ ಹೇ ಕರ್ನಾಟಕ ಮಾತೆ". - ಕುವೆಂಪು



# ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ

ಸ. ರಘುನಾಥ

ಆದಿ ಇರುಳು ಆದಿ ಹಗಲಿನ ಲೀಲೆಯೊಂದಿಗಿನ ಚಟುವಟಿಕೆಯ ಪ್ರಕ್ರಿಯೆಯಲ್ಲಿ ತೊಡಗಿದ ಪ್ರಕೃತಿ ಜೀವಸಂಕುಲವನ್ನು ತಾಯಾಗಿ ಬೆಳೆಸಿ, ಬದುಕಿನ ಓನಾಮದೊಂದಿಗೆ ಸಂಗೋಪನೆ ಹಾಗೂ ಬೆಳೆಸಿಕೊಳ್ಳುವ ತತ್ವವನ್ನು ತನ್ನದೆ ಪರಿಭಾಷೆಯಲ್ಲಿ ಕೊಟ್ಟಿತು. ಜೀವ ಸಂಕುಲದೊಂದಿಗೆ ಬದುಕನ್ನು ರೂಪಿಸಿಕೊಳ್ಳತೊಡಗಿದ ಮನುಷ್ಯ, ತನ್ನ ಬೌದ್ಧಿಕ ವಿಕಸನದೊಂದಿಗೆ ತನ್ನ ಅನುಕೂಲತೆ ಗಳನ್ನು ಹೆಚ್ಚಿಸಿಕೊಳ್ಳುತ್ತ ನಾಗರಿಕತೆಯ ಚರಿತ್ರೆಯನ್ನು ಕಟ್ಟುತ್ತ, ಪ್ರಕೃತಿಯ ಸಮತೋಲನ ಸಿದ್ಧಾಂತದ ಗುಂಡಿಗೆಗೆ ತನ್ನ ನಾಗರಿಕತೆಯ ಕೈ ಹಾಕಿ ಪ್ರಕೃತಿ ತತ್ವವನ್ನು ಕಡೆಗಣಿಸಿದಾಗ ಪ್ರಕೃತಿ ಇವನ ವಂಚನೆಗೆ ಒಳಗಾಯಿತು. ನಾಗರಿಕತೆ ಬಳಕೆಯನ್ನು ಕಲಿಸಿಕೊಟ್ಟಂತೆ ಕಾಡುಗೂಡು ಒಂದಾಗಿ ಬಾಳುವ ಜನವರ್ಗಕ್ಕೆ ನಾಗರಿಕ ಜನವರ್ಗದೊಂದಿಗೆ ಸಂಘರ್ಷವೇರ್ಪಡಿಸಿಕೊಳ್ಳುವುದು ಅನಿವಾರ್ಯವಾಯಿತು. ಪ್ರಕೃತಿ ಮಡಿಲ ಜನ, ಬಳಕೆಯ ವಿಸ್ತರಣೆಯಲ್ಲಿ ತಮ್ಮ ಒಡಲನ್ನೇ ಹಿಂಡುವಂತೆ ದಾಳಿಯಿಡುವಂತಾದಾಗ ತೋರಿದ ಪ್ರತಿಭಟನೆ ಕೇವಲ ಪ್ರತಿಭಟನೆಯಾಗಿರದೆ ಅಸ್ತಿತ್ವದ ಉಳಿವಿನ ಬಂಡಾಯವಾಗಿತ್ತು. ಆರ್ಯ-ದ್ರಾವಿಡ ಸಂಘರ್ಷ ಪ್ರಕೃತಿ ಮತ್ತು ನಾಗರಿಕತೆಯ ಬಳಿದುಕೊಳ್ಳುವ ಸಂಸ್ಕೃತಿಯ ವಿರುದ್ಧವಾಗಿತ್ತು ಎಂಬುದು ಇತಿಹಾಸದ ಮೌನ ಅಧ್ಯಾಯ ತಿಳಿಸುತ್ತದೆ. ಈ ಮೌನ ಮುಂದಿನ ಜಾತಿ ವ್ಯವಸ್ಥೆಯಲ್ಲೂ ಮುಂದುವರೆಯಿತು. ಪ್ರಾಣಿ ಮತ್ತು ಮನುಷ್ಯ ಕಂಡುಕೊಂಡ ರಕ್ಷಣಾತ್ಮಕ ಕೂಟ ತಂತ್ರ ಮುಂದಿನ ವ್ಯವಸ್ಥೆಯಲ್ಲಿ ವರ್ಗದ ಹಿತರಕ್ಷೆಯ ನೆಪದ ಯುದ್ಧವಾಗಿ ಪರಿಣಮಿಸಿತು. ಅಡಿಯಾಳಾಗಿಸುವ ಎಲ್ಲ ಗುಣ ಲಕ್ಷಣಗಳೂ ಈ ಯುದ್ಧಕ್ಕೆ ಬಂದಿತು. ಸಾಮಾಜಿಕ ಶೋಷಣೆಗೆ ರೂಪ ಬಂದಿದ್ದು ಹೀಗೆ ಇರಬಹುದು.

ಕೂಟ ತಂತ್ರ, ಯುದ್ಧ ಸಂಸ್ಕೃತಿಗಳು ಪ್ರಕೃತಿಯ ಜೊತೆಗಿದ್ದಷ್ಟು ಕಾಲ ಸಮಷ್ಟಿಯಾಗಿದ್ದ ಬದುಕು ಭಾವಗಳನ್ನು ವಿಭಕ್ತಗೊಳಿಸಿತು. ಯುಕ್ತಿ - ಶಕ್ತಿಯಲ್ಲಿ ಮುಂದಿದ್ದ ವರ್ಗ ದುರ್ಬಲ ವಿಭಕ್ತ ವರ್ಗವನ್ನು ತನ್ನ ಸಂಪತ್ತನ್ನು ಹೆಚ್ಚಿಸುವ, ತನ್ನ ಸುಖಕ್ಕೆ ದುಡಿಯುವ ಸಾಧನವನ್ನಾಗಿ ಹಿಡಿತಕ್ಕೆ ತೆಗೆದುಕೊಂಡಿತು. ಪ್ರಕೃತಿಯನ್ನು ಸ್ವತಂತ್ರವಾಗಿ ಉಳಿಸುವ, ಅದರೊಂದಿಗೆ ಬದುಕನ್ನು ಅರಳಿಸಿಕೊಳ್ಳುವ ನಿಷ್ಠೆಗೆ ಬದ್ಧರಾದ ಜನ ಪ್ರಧಾನ-ಸಂಸ್ಕೃತಿಯನ್ನು ಆರಾಧಿಸುವಂತೆ ಮಾಡಲಾಯಿತು. ಆದರೂ ಪ್ರಕೃತಿಯ ಅದಮ್ಯ ಮೌನ ಶಕ್ತಿ ವಿಭಕ್ತ ಬಹುಜನ ಸಂಸ್ಕೃತಿಯನ್ನು ಬಹುಮುಖೀ ರೂಪದಲ್ಲಿ ಈ ಜನರಿಗೆ ಉಳಿಸಿಕೊಟ್ಟಿತು. ಇದನ್ನು ಜನ ತಮ್ಮ ಅಂಗಳದಲ್ಲಿ ಕಾಯ್ದುಕೊಂಡರು.

ಅಕ್ಷರ ಮತ್ತು ಜ್ಞಾನ ಸಂಸ್ಕೃತಿಯನ್ನು ತಮ್ಮ ಮುಷ್ಟಿ ಬಂಧಕ್ಕೆ ತೆಗೆದುಕೊಂಡ ವರ್ಗ ವರ್ಣಗಳನ್ನು ಸೃಷ್ಟಿಸಿತು. ಅದನ್ನು ಜಾತಿಗಳಾಗಿ ವಿಂಗಡಿಸಿತು. ಈ ಜಾತಿಗಳು ಸಂಘಟಿತವಾಗದಂತೆ ದೇವರುಗಳ ಭೀತಿಯನ್ನು ಉಣ್ಣಿಸಿತು. ಆಚಾರಗಳ ನಿಬಂಧನೆಗಳನ್ನು ಚಲಾವಣೆಗೆ ತಂದು ಶೋಷಣೆಯ ಪಾಶವನ್ನು ಬಿಗಿಗೊಳಿಸಿತು. ಬಲಿಷ್ಠವೆಂದು ಕಂಡ ಜಾತಿಗಳನ್ನು ಪುರಾಣಗಳ ಮೂಲಕ ನಿಯಂತ್ರಿಸಲಾಯಿತು. ಪವಿತ್ರತೆ ಎಂಬುದನ್ನು ಶ್ರೇಣೀಕರಿಸಿ ತಮ್ಮ ಹಿಡಿತದಿಂದ ಜಾರದಂತೆ ಸ್ಥಾನ-ಮಾನಗಳನ್ನು ಹಂಚಲಾಯಿತು. ಇದೊಂದು ಜಾಲ. ಇದರ ಐಂದ್ರಜಾಲಿಕತೆಯಲ್ಲಿ ಉಪಜಾತಿಗಳು ಏರ್ಪಟ್ಟು ಮೇಲು ಕೀಳಿನ ಭಾವವನ್ನು ಬಲಗೊಳಿಸಿ ತಮ್ಮ ಆಧಿಕ್ಯತೆಯನ್ನು ಮತ-ಧರ್ಮದ ಗುತ್ತಿಗೆದಾರಿ ಶಕ್ತಿಗಳು ಉಳಿಸಿಕೊಂಡವು. ಪ್ರಭುತ್ವ ಸಂಸ್ಕೃತಿ ಇದನ್ನು ಬೆಂಬಲಿಸಿತು. ಈ ಎರಡೂ, ಸಂಘಟಿತ ಪಟ್ಟಭದ್ರ ವ್ಯವಸ್ಥೆ ನಿಯಂತ್ರಕ ಶಕ್ತಿ ಕೇಂದ್ರಗಳಾಗಿ ರೂಪುಗೊಂಡವು. ರಾಜ ಪ್ರತ್ಯಕ್ಷ ದೇವರಾಗಿ ಬಿಂಬಿತನಾದ. ಹಾಗೆ ಬಿಂಬಿಸಿದವರು ಅವನಿಗೂ ಸಾಮಾನ್ಯರಿಗೂ ದೈವ ಸ್ವರೂಪಿಗಳಾದರು. ಪುರಾಣಗಳ ಜಾಲ ವಿಸ್ತಾರವಾದಂತೆ ದುಡಿಯುವ, ಉತ್ಪಾದಿಸುವ ಬಹುಜನ ಕಾರ್ಯಗೌರವದಿಂದಲೂ ವಂಚಿತರಾದರು. ಕೀಳರಿಮೆಯ ಬದುಕಿನಲ್ಲಿ ಮೌನಿಗಳಾದರು. ಅನುಭೋಗಿ ವರ್ಗದ ಭಜನೆ, ಅವರ ಹಿತದ ಕಾರ್ಯವಿಧಾನಗಳು, ಬದುಕಿನ ಶೈಲಿ, ನಿಯಂತ್ರಣ ವಿಧಾನಗಳು ಅವರ ಮೂಗಿನ ನೇರದ ವಿಚಾರಗಳು ಇತಿಹಾಸದ ಹೆಸರಿನಡಿ ಕಾರ್ಯನಿರತವಾಗಿದೆ. ಶೋಷಣೆಯ ನರಕದಲ್ಲಿದ್ದವರ ಮುಕ್ತಿಗೆ ಶೋಷಕರೇ ಮಧ್ಯವರ್ತಿಗಳಾದರು. ಅದಕ್ಕೂ ಶುಲ್ಕವಿಲ್ಲದೆ ಇದ್ದಿಲ್ಲ.

ಪ್ರಕೃತಿಯಲ್ಲಿದ್ದು, ಪ್ರಕೃತಿಗೆ ವಿರುದ್ಧವಾದದ್ದು, ಸಮನಲ್ಲದ್ದು ಶಿಥಿಲವಾಗಲೇಬೇಕು. ಹಸಿವೆ ಅನ್ನದ ದಾರಿಯನ್ನು ತೆರೆಯುತ್ತದೆ. ಬೆಳಕು ಕತ್ತಲಿನ ಪಾಪಗಳನ್ನು ತೋರಿಸಿ ಕೊಡುತ್ತದೆ. ಹಗಲಿನ ನಿಯಮವಿದು. ಪ್ರಕೃತಿಯ ಶಕ್ತಿ ಕೃತಕತೆಯನ್ನು ಮುರಿಯುತ್ತದೆ. ದಾಸ್ಯ, ಬದುಕಿನ ಅಪಮಾನ, ಒತ್ತಡಗಳು ಬಿಡುಗಡೆಯ ಪಂಜುಗಳನ್ನು ಹೊತ್ತಿಸುತ್ತವೆ.




ನಿಯಂತ್ರಕ ವರ್ಗ ಸ್ವಯಂಭದ್ರವಲ್ಲ. ಅದರ ವಲಯದೊಳಗಿಂದಲೇ ಅದನ್ನು ಛಿದ್ರಿಸುವ ವೀರಭದ್ರ ಶಕ್ತಿ ಹುಟ್ಟುತ್ತದೆ. ಈ ಅವಕಾಶದ ನಿರೀಕ್ಷೆಯ ನಿಯಂತ್ರಿತ ವರ್ಗ ಸ್ಫೋಟಗೊಳ್ಳುವ ಚೈತನ್ಯವನ್ನು ಪಡೆಯುತ್ತದೆ. ಆಗ ಸಂಘಟನೆಗೊಳ್ಳುವ ಬಂಡಾಯಕ್ಕೆ ನಿಯಂತ್ರಕ ವರ್ಗದಿಂದಲೂ ಪುರೋಗಾಮಿ ಶಕ್ತಿಗಳು ಜೊತೆಗೂಡುತ್ತವೆ. ಇದನ್ನು ಆಧುನಿಕ ಚರಿತ್ರೆಯಲ್ಲಿ ಕಂಡಿದ್ದೇವೆ. ಚಾರ್ವಾಕ, ಬುದ್ಧ, ಮಕ್ಕಾಲಿ ಘೋಷಾಲ್, ಟಾಲ್‌ಸ್ಟಾಯ್, ಲಿಂಕನ್, ಬಸವಣ್ಣ, ಗಾಂಧಿ, ಅಂಬೇಡ್ಕರ್, ಜ್ಯೋತಿ ಬಾ ಫುಲೆ, ಮಾರ್ಕ್ಸ್, ಮಾವೊ, ಪೆರಿಯಾರ್. ಅಕ್ಕಮಹಾದೇವಿ, ಕೋವೂರ್, ಲೋಹಿಯ, ಜೆ.ಪಿ., ಮೇಧಾ ಪಾಟ್ಕರ್, ಇಂಥವರ ಪರಂಪರೆಯೇ ಇದೆ.

ಒಬ್ಬರಿಂದಲೇ ಎಲ್ಲ ಕ್ಷೇತ್ರಗಳನ್ನೂ ಸುಧಾರಣೆಗೆ ಇಲ್ಲವೆ ಬದಲಾವಣೆಗೆ ಒಳಪಡಿಸಲು ಸಾಧ್ಯವಿಲ್ಲ. ಆದರೆ ಆ ಕುರಿತು ಚಿಂತನೆ ಸಾಧ್ಯವಿದೆ. ಒಂದು ಕ್ರಾಂತಿ ಸಮಷ್ಟಿ ದೀಕ್ಷೆ, ಕೃಷಿಯಿಂದ ಸಫಲವಾಗುತ್ತದೆ ಎಂಬುದು ಸಾರ್ವಕಾಲಿಕ ಸತ್ಯದ ವಾಸ್ತವ. ಮಾನವತಾವಾದಿಗಳು, ಪುರೋಗಾಮಿ ವ್ಯಕ್ತಿಗಳು ಯಾವುದೇ ಕಾರ್ಯಕ್ಷೇತ್ರವನ್ನು ಆಯ್ದುಕೊಂಡರೂ ಹೋರಾಟದ ಸ್ವರೂಪದಲ್ಲಿ ಅದಕ್ಕೆ ಸಾಮಾಜಿಕ ಆಯಾಮ ಇದ್ದೇ ಇರುತ್ತದೆ. ಬದುಕಿನ ಹಸನಿಕೆಗೆ ನಡೆಯುವ ಚಳವಳಿಗಳೆಲ್ಲವೂ ಪರಸ್ಪರ ಪೂರಕವೂ ಪ್ರಭಾವಿತವೂ ಆಗಿರುತ್ತವೆ. ಇದಕ್ಕೆ ಕಾರಣ ಅವುಗಳಲ್ಲಿನ ಆಂತರಿಕ ಸಂಬಂಧ. ಪ್ರತಿ ಕ್ಷೇತ್ರದಲ್ಲಿ ನಡೆಯುವ ಪ್ರಗತಿಶೀಲ ಚಳವಳಿಗೆ ಒಂದಕ್ಕೊಂದು ಕರುಳಬಳ್ಳಿಯ ಸಂಬಂಧವಿರುತ್ತದೆ. ಸಬೂಬು ಇಲ್ಲವೆ ನೆಪಗಳಲ್ಲಿ ಈ ಸಂಬಂಧವನ್ನು ಕಡಿದುಕೊಂಡ ಚಳವಳಿಗಳು ಒಂದಿಲ್ಲೊಂದು ಅಂಗ ಊನತೆಗೆ ಒಳಗಾಗಿ ದುರ್ಬಲತೆಯನ್ನು ಅನುಭವಿಸುತ್ತವೆ.

ಜಾತಿ-ಮತಗಳು ಪ್ರಕೃತಿ ಪ್ರಣೀತವಲ್ಲ. ಕಟ್ಟಿಕೊಂಡು ಹೊತ್ತ ತಮಸ್ಸು, ಬಸಿರು. ಈ ಬಸಿರು ಜಾರುವಾಗಲೆಲ್ಲ ಸಂದರ್ಭಕ್ಕೆ ತಕ್ಕಂತೆ ಜಾರಿಗೆ ತಡೆವ ತಂತ್ರಗಳನ್ನು ಅದು ಬಳಸುತ್ತಲೇ ಇದೆ. ಹಾಗಾಗಿ ಇದು ಉಳಿದು ಏನೆಲ್ಲ ಅನಾಹುತಗಳನ್ನುಂಟು ಮಾಡಬಹುದೊ ಅದನ್ನೆಲ್ಲ ಮಾಡುತ್ತಿದೆ. ಜಾಗತಿಕ ನಡವಳಿಕೆಗಳಲ್ಲಿ ದೇವರು - ಧರ್ಮದ ವ್ಯಾಪಕತೆ ದೊಡ್ಡದು. ಪುರೋಹಿತಶಾಹಿಯನ್ನು ಒಳಗೊಂಡಂತೆ ಶೋಷಕವರ್ಗ ಬಳಕೆಗೆ ಇಟ್ಟುಕೊಂಡರೆ, ಇವರನ್ನು ನಿರಾಕರಿಸುವ ವರ್ಗ ಆದರ್ಶಕ್ಕೆ ಇಟ್ಟುಕೊಂಡಿರುವುದನ್ನು

ಕಾಣಬಹುದು. ಮಾನವತಾವಾದಿ ಆಸ್ತಿಕರು ಇವರಲ್ಲಿ ಪ್ರಮುಖರು.

೨೦ನೇ ಶತಮಾನದ ಪ್ರಮುಖ ವಿಚಾರವಾದಿಗಳಲ್ಲಿ ಒಬ್ಬರಾದ ಕುವೆಂಪು ಅವರು ದೇವರ ಇರುವಿಕೆಯನ್ನು ನಿರಾಕರಿಸಿದ್ದಿಲ್ಲ. ಆದರೆ ಮತವಾದಿಗಳು ಪ್ರಣೀತಗೊಳಿಸುವ ವ್ಯವಹಾರದ ಚಿಹ್ನೆ, ಆಚರಣೆ, ಸಿದ್ಧಾಂತಗಳು ಮಾನವತಾವಾದಿಗಳ ದೇವರು-ಧರ್ಮದ ಸ್ವರೂಪ ಲಕ್ಷಣಗಳಲ್ಲ. ಜೀವನ ಸಂಸ್ಕೃತಿಗೆ ಅದನ್ನು ಯುಕ್ತಮಾಡಿಕೊಂಡ ಧಾರ್ಮಿಕತೆ ಇವರದು. ಈ ಧಾರ್ಮಿಕತೆ ಅರ್ಥಯುಕ್ತ ಅಭ್ಯುದಯದ ಪ್ರಕ್ರಿಯೆಯದು. 'ದೇವನೊಬ್ಬ ನಾಮ ಹಲವು' ಅಂದ ಬಸವಣ್ಣನ ಮಾತನ್ನು ವಿಸ್ತರಿಸುವಂತೆ 'ನೂರು ದೇವರುಗಳ ನೂಕಾಚೆ ದೂರ, ಮನುಜ ಮತಕೆ ನೀ ಬಾ ಧೀರ' ಎಂದು ಕುವೆಂಪು ಹೇಳಿರುವಂತೆ ತೋರುತ್ತದೆ. ಸೂಫಿಗಳು, ಭಕ್ತಿ ಪಂಥದವರು, ತತ್ವ ಪದಕಾರರು ದೇವರನ್ನು ನಿರಾಕರಿಸದ ಮಾಡಿದ ಕ್ರಾಂತಿ ಮತ್ತು ರಚಿಸಿದ ಸಾಹಿತ್ಯದಲ್ಲಿ ಬಂಡಾಯತನವಿದೆ. ವಚನಕಾರರೂ ಹೀಗೆಯೇ ಮಾಡಿ ತೋರಿಸಿದ್ದಾರೆ. ಆದರೆ ಮತವಾದಿ ಸಂಸ್ಕೃತಿಯ ದೇವರು ಇವರೆಲ್ಲರ ದೇವರಾಗಿಲ್ಲ. ದಯಾನಂದ ಸರಸ್ವತಿ ಅವರ ಧಾರ್ಮಿಕ ಬಂಡಾಯ ಮರೆಯುವಂತಹುದಲ್ಲ. ಹೀಗೆ ಧಾರ್ಮಿಕ ಚಳವಳಿ ಸಾಮಾಜಿಕ ಚಳವಳಿಯಲ್ಲೂ ಸಾಮಾಜಿಕ ಚಳವಳಿ ಧಾರ್ಮಿಕ ಚಳವಳಿಯಲ್ಲೂ ಬತ್ತದ ಪ್ರವಾಹವಾಗಿ ಹರಿಯುತ್ತಾ ಬಂದಿದೆ. ಹೀಗೆ ಬೆಳೆದುಳಿದು ಬಂದ 'ಜೀವಿ' ಕಲ್ಯಾಣದ ಆಧ್ಯಾತ್ಮಿಕ ನೆಲೆ ಬುದ್ಧ, ಬಸವಾದಿಗಳಿಂದ ಹಿಡಿದು ಅಂಬೇಡ್ಕರರ ನಂತರದ ಚಳವಳಿಗಳಲ್ಲಿ ವಿಸ್ತಾರಗೊಂಡಿದೆ. ಬಂಡಾಯ ದಲಿತ ಸಾಹಿತ್ಯ ಚಳವಳಿಗಳ ಅಂತರ್ಯದಲ್ಲೂ ಈ ಅಧ್ಯಾತ್ಮವನ್ನು ಗುರುತಿಸಬಹುದಾಗಿದೆ.

ಬಂಡಾಯದ ಆತ್ಮ ಬರಿ ವೈಚಾರಿಕತೆಯಲ್ಲ. ವೈಚಾರಿಕತೆ ಅದರ ಸಹಸ್ರ ಮಿಡಿತಗಳಲ್ಲಿ ಒಂದು. ಬಂಡಾಯ ಸಾಹಿತ್ಯ ಚಳವಳಿ ಬಹುಮುಖಿ ಸಂಸ್ಕೃತಿಯ ಸಂಗೋಪನೆಯಲ್ಲಿ ವ್ಯಕ್ತಿ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುತ್ತ ಬೆಳೆದಿದೆ. ನಮ್ಮ ಈ ರಾಷ್ಟ್ರ ಸ್ವಾತಂತ್ರ್ಯ ಹೋರಾಟದ ಗುಣಪಾಠಗಳನ್ನು ಗ್ರಹಿಸಿದೆ. ದೇಶದೇಶಗಳಲ್ಲಿ ನಡೆದ 'ಬಿಡುಗಡೆ'ಯ ಹೋರಾಟಗಳನ್ನು ಆಳವಾಗಿ ಅಭ್ಯಸಿಸಿದೆ. ಅವುಗಳಿಂದ ಪ್ರೇರಿತವಾಗಿದೆ. ಹಾಗಾಗಿ ಇದರ ತಳಹದಿ ವಿಸ್ತಾರವಾಗಿದೆ. ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಹಕ್ಕುಗಳಿಗೆ ಚ್ಯುತಿ ಬಂದಾಗಲೆಲ್ಲ ಶೋಷಿತರ ಪರ ನಿಂತಿದೆ. ಇದರ ಕಾಳಜಿ ಮತ್ತು ಕಳಕಳಿಯ ನೇಪಥ್ಯದಲ್ಲಿ ಗಾಂಧಿ, ಅಂಬೇಡ್ಕರ್, ಲೋಹಿಯ, ಮಾರ್ಕ್ಸ್, ಜೆ.ಪಿ., ಮುಂತಾದವರ ಸಿದ್ಧಾಂತವಾದಗಳ ವಿಮರ್ಶಾತ್ಮಕ ಸ್ವೀಕಾರವಿದೆ. ಸೈದ್ಧಾಂತಿಕವಾಗಿ, ಬಂಡಾಯ ಸಾಹಿತ್ಯ ಚಳವಳಿ ಜಾತಿ ಮತ ಧರ್ಮಗಳನ್ನು ನಿರಾಕರಿಸಿದ, ಜಾತ್ಯತೀತ ಸಂಘಟನೆಯಾಗಿ ಪ್ರಗತಿಶೀಲ ಮನೋಧರ್ಮದ ರಾಷ್ಟ್ರೀಯ ಜೀವನದ ಪ್ರಾಯೋಗಿಕ ವೇದಿಕೆಯಾಗಿ ಬೆಳೆಯ ಹೊರಟಿತ್ತು ಎಂಬುದನ್ನು ಇಲ್ಲಿ ನೆನೆಯಬೇಕು. ವೈಶ್ವಾನರ ತತ್ವ ಇದರ ಮನೋಭೂಮಿಕೆ. ಸೂಕ್ಷ್ಮವಾಗಿ ಅವಲೋಕಿಸಿದಾಗ ಬಂಡಾಯ-ದಲಿತರ ಚಳವಳಿಗಳು ಹಿಡಿದದ್ದು ಅಲ್ಲಮನ ಜರಡಿಯನ್ನು ಎಂಬುದು ತಿಳಿಯುತ್ತದೆ. ವಿಶೇಷವಾಗಿ ಬಂಡಾಯ ಸಾಹಿತ್ಯ ಚಳವಳಿ ಅಪೇಕ್ಷಿಸಿದ್ದು ೧೨ನೇ ಶತಮಾನದ ಕ್ರಾಂತಿಯನ್ನು. ಸೋಲು ಅನುಭವ ಮಂಟಪವನ್ನು ಕಟ್ಟಲಾಗದ್ದು. ಬಂಡಾಯ ಸಾಹಿತ್ಯ ಚಳವಳಿಯಿಂದ ಏನೆಲ್ಲ ಸಾಧ್ಯವಾಯಿತು, ಏನು ಆಗಲಿಲ್ಲ ಎಂಬುದು ಚರಿತ್ರೆಯಲ್ಲಿದೆ. ಅದನ್ನು ಇಲ್ಲಿ ಪ್ರಸ್ತಾಪಿಸುವ ಅಗತ್ಯವಿಲ್ಲ. 'ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ' ಎಂಬ ಧ್ಯೇಯವಾಕ್ಯ ಅಂದು ನಾಡಿಮಿಡಿತವಾಗಿತ್ತು. ಅಂದು ನೂರಾರು ನವ ಲೇಖಕರಲ್ಲಿದ್ದ ಹಿಂಜರಿಕೆ ಹಾಗೂ ನವ್ಯಕಾವ್ಯ ಹುಟ್ಟಿಸಿದ್ದ ಬೆರಗು ಮತ್ತು ಅಂಜಿಕೆಯನ್ನು ದೂರ ಮಾಡಿ ಆತ್ಮವಿಶ್ವಾಸದೊಂದಿಗೆ ಬರೆಯಲು ಪ್ರೇರೇಪಿಸಿದ್ದು ದೊಡ್ಡ ಸಾಧನೆ ಈ ಚಳವಳಿಯದು. ಹುಮ್ಮಸ್ಸು ಗಟ್ಟಿಯಾದುದನ್ನೆಲ್ಲ ಕೊಟ್ಟಿತು ಎನ್ನುವಂತಿಲ್ಲ. ಹಾಗೆಯೆ ಬರಿ ಜೊಳ್ಳನ್ನೆ ಕೊಟ್ಟಿತು ಅಂದರೆ ಆತ್ಮವಂಚನೆ. ಇದೇ ಮಾತು ದಲಿತ ಸಾಹಿತ್ಯಕ್ಕೂ ಅನ್ವಯಿಸುತ್ತದೆ.

*   *   *

ಯಾವುದೋ ಒಂದು ಎತ್ತರದಲ್ಲಿ ಜಾರುವುದೂ ಇಲ್ಲವೆ ಮಂದಗೊಳ್ಳುವುದೂ ಇಂಥ ಚಳವಳಿಗಳ ಸ್ವಭಾವ ಎಂಬುದನ್ನು ಚರಿತ್ರೆಯಲ್ಲಿ ಕಂಡಿದ್ದೇವೆ. ಇಲ್ಲೂ ಹಾಗೆ ಆಯಿತು. ಕೆಲವರಲ್ಲಿ ಭ್ರಮನಿರಸನವಾದಂತೆ ಕಂಡುಬಂದರೆ ಮತ್ತೆ ಕೆಲವರಲ್ಲಿ ನಿರಾಸಕ್ತಿ ತಲೆದೋರಿತು. ಇದು ಕೆಲವರಿಗೆ ಇನ್ನೆಲ್ಲಿಗೂ ಜಗಿಯಲು 'ಚಿಮ್ಮು' ಹಲಗೆಯಾಯಿತು ಎಂಬ ಅಭಿಪ್ರಾಯವೂ ಮೂಡಿತು. ಸೈದ್ಧಾಂತಿಕ ಭಿನ್ನಾಭಿಪ್ರಾಯ ಕೆಲವರ ನಿರ್ಲಿಪ್ತತೆಗೆ ಕಾರಣವಾಯಿತು. ಪರಿಣಾಮವಾಗಿ ಒತ್ತಡ ಕುಗ್ಗಿತು. ನಿರ್ವಾತ ಅನ್ನಲಾಗದಿದ್ದರೂ ಬಳಲಿಕೆಯ ನೀರಸತನ ಉಂಟಾದುದೇನೋ ವಾಸ್ತವ ಸಂಗತಿ. ಇದಕ್ಕೆಲ್ಲ ಕಾರಣಗಳನ್ನು

ಹುಡುಕಬೇಕಿಲ್ಲ. ಅವು ನಮ್ಮ ನಮ್ಮಲ್ಲೇ ಇವೆ. ಈ ಸಂದರ್ಭದಲ್ಲಿ 'ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂಬ ಬಸವಣ್ಣನ ವಚನವನ್ನು ನೆನೆಯಬೇಕು. ನಾವು ಹೀಗೆ ಮಾಡಿಕೊಳ್ಳದ್ದೆ 'ಬಂಡಾಯ ಸಾಹಿತ್ಯ ಚಳವಳಿಯ ಪುನರ್ ಸಂಘಟನೆ' ಎಂಬ ಈ ದಿನದ ಮಾತಿಗೆ ಹೇತು. ಬಂಡಾಯದ ಖಡ್ಗ ಪಾರ್ಥೇನಿಯಂ, ಕಳ್ಳಿ ಸವರಿದಲ್ಲಿ ಬೀಡು ಬೀಡಾಗಿಯೆ ಉಳಿಯುವಂತಾದದ್ದು ಸಂತೈಸಿಕೊಳ್ಳುವುದಕ್ಕೆ ಆಗದ್ದರಿಂದಲೇ. ಖಡ್ಗ ನೇಗಿಲಾಗಿದ್ದರೆ ಈ ಸ್ಥಿತಿ ನಿರ್ಮಾಣವಾಗುತ್ತಿರಲಿಲ್ಲ. ಈಗ ಖಡ್ಗ ಬೇಕಿಲ್ಲ, ನೇಗಿಲು ಬೇಕಿದೆ.

* * *

ಬಂಡಾಯ ಸಾಹಿತ್ಯ ಚಳವಳಿ ಹುಟ್ಟಿ ಬೆಳೆದ ಸಂದರ್ಭ, ಅದರ ಬೇಡಿಕೆ - ಇಂದಿನ ಪುನರ್ ಸಂಘಟನೆಯ ಸಂದರ್ಭ, ಇದರ ಬೇಡಿಕೆ ಇವು ಸಂಪೂರ್ಣವಾಗಿ ಒಂದೇ ಆಗಿಲ್ಲ. ಈ ಎರಡೂವರೆ ದಶಕಗಳಲ್ಲಿ ಅನೇಕ ಬದಲಾವಣೆಗಳಾಗಿವೆ. ದಲಿತ ಚಳವಳಿ ಏರುಪೇರುಗಳನ್ನು ಕಂಡಿದೆ. ಅವಿಭಕ್ತವಾಗಿದ್ದ ಅನೇಕ ಚಳವಳಿಗಳು ವಿಭಕ್ತಗೊಂಡು ಒಂದೇ ಸಿದ್ಧಾಂತ - ತತ್ವ - ವಾದಗಳನ್ನು ಅದರ ವಿಸ್ತಾರದಿಂದ ಕುಗ್ಗಿಸಿವೆ. ಜಾಗತೀಕರಣ, ಉದಾರೀಕರಣ, ವಿಶ್ವಗ್ರಾಮ ಕಲ್ಪನೆ, ಸಂಸ್ಕೃತಿಯನ್ನು ಸರಕು ಮಾಡುವ ವ್ಯಾಪಾರಿ ಸಂಸ್ಕೃತಿ, ಗಂಭೀರವಾದುದನ್ನು ಮುಂದೂಡುವ ನೆಪಕೋರತನ, ಸಾರ್ವಜನಿಕ ಉತ್ಪದನಾ ರಂಗವನ್ನು ಸಬೂಬುಗಳೊಂದಿಗೆ ಖಾಸಗೀಕರಣಕ್ಕೆ ಒಳಪಡಿಸುವ ಆಲೋಚನೆಗಳು, ಆಧುನಿಕತೆಯ ಹೆಸರಿನಲ್ಲಿ ಗ್ರಾಮ ಸಂಸ್ಕೃತಿಯ ನಗರೀಕರಣ, ವೈಫಲ್ಯಗಳನ್ನು ಸರಿಪಡಿಸಿಕೊಳ್ಳದೆ ಶಿಕ್ಷಣವನ್ನು ಖಾಸಗೀಕರಣದ ಪಟ್ಟಿಗೆ ಸೇರಿಸುವ ಮಾತುಗಳು, ಸೋರಿಕೆಯನ್ನು ಪಡೆಯದೆ ಬೆಲೆ ಏರಿಸುವ ವಿದ್ಯಮಾನಗಳು, ಭಯೋತ್ಪಾದನೆ, ಯುದ್ಧಗಳ ಸದ್ದು, ಭ್ರಮೆಯ ಇಂಗ್ಲಿಷ್ ಮಾಧ್ಯಮದ ಹುಲಿವೇಷ, ಪುನರುತ್ಥಾನ ಶಕ್ತಿಯ ಬೀಜ ಸಂಸ್ಕೃತಿಯ ನಾಶ, ಪತ್ರಿಕಾರಂಗಕ್ಕೆ ವಿದೇಶಿ ಬಂಡವಾಳದ ಆಹ್ವಾನ, ನಿರ್ಬೀಜೀಕರಣ ಕೃಷಿಕನನ್ನು ಪರಾವಲಂಬಿಯನ್ನಾಗಿ ಮಾಡುತ್ತಿರುವುದು ವರ್ತಮಾನದ ಸವಾಲುಗಳಾಗಿವೆ, ದೇಶದ ಆತಂಕಗಳಾಗಿವೆ. ಕಾರ್ಮಿಕರಂಗದಲ್ಲಿ ಸಹಜವಾದ ಭೀತಿ ಸುಳಿದಾಡುತ್ತಿದೆ. ಬಾಚಿಕೊಳ್ಳುವ ಸಂಸ್ಕೃತಿಯ ವಿದೇಶಿ ಬಂಡವಾಳ ವ್ಯವಸ್ಥೆ ದೇಶದ ನೈಸರ್ಗಿಕ ಸಂಪತ್ತಿಗಷ್ಟೇ ಮಾರಕವಾದುದಲ್ಲ. ಅದರ ಜಾಲದಲ್ಲಿ ಯಾಂತ್ರೀಕರಣದ ಮಾಯಕವಿದೆ. ಈ ಪ್ರಕ್ರಿಯೆಯಲ್ಲಿ ಮಾನವ ಸಂಪನ್ಮೂಲ ಶಕ್ತಿಯನ್ನು ಅಪಮೌಲ್ಯಗೊಳಿಸಿ ಜಾಗತಿಕ ಗುಲಾಮಿ ಪದ್ಧತಿಯನ್ನು ಸ್ಥಾಪಿಸುವ ಮೂಲಕ ಶ್ರಮಿಕ ವರ್ಗವನ್ನು, ಅದರ ದುಡಿಮೆಯನ್ನು ತನ್ನ ಉಗ್ರಾಣದ ಸರಕುಗಳನ್ನಾಗಿ ಮಾಡಿಕೊಳ್ಳುವ ಹುನ್ನಾರವಿದೆ. ನಮ್ಮ ಆರ್ಥಿಕ ದುರ್ಬಲತೆ ಶ್ರೀಮಂತರಾಷ್ಟ್ರಗಳ ಬಂಡವಾಳವಾಗುತ್ತಿದೆ. ಬಂಡಾಯ ಸಾಹಿತ್ಯ ಸಂಘಟನೆ ಈ ಚಕ್ರವ್ಯೂಹದ ಒಂದು ಭಾಗ ಮಾತ್ರ. ಇದು ಕರ್ನಾಟಕಕ್ಕೆ, ಭಾರತಕ್ಕೆ ಮಾತ್ರ ಸೀಮಿತವಲ್ಲ. ಇಲ್ಲಿ ದೇಶ ದೇಶಗಳಿವೆ.

* * *

ಬಂಡಾಯ ಸಾಹಿತ್ಯ ಸಂಘಟನೆ ಆದಿಯಿಂದಲೂ ವಿಶ್ವಪ್ರಜ್ಞೆಯನ್ನು ತನ್ನ ಒಡಲಲ್ಲಿಟ್ಟುಕೊಂಡು ಬೆಳೆದಿದೆ. ಜನರ ನೋವು ಎಂಬುದನ್ನು ವಿಶ್ವದ ನೋವು ಎಂದು ಅರ್ಥೈಸಿಕೊಂಡಿದೆ. ಅದಕ್ಕಾಗಿ ಮಿಡಿದಿದೆ. ಪ್ರಜಾಪ್ರಭುತ್ವದಲ್ಲಿ ಒಲವನ್ನು, ಸಂವಿಧಾನದಲ್ಲಿ ಶ್ರದ್ಧೆಯನ್ನು ಹೊಂದಿದೆ. ರಾಷ್ಟ್ರೀಯ ಜೀವನ ಸಂಸ್ಕೃತಿ ತೆಳುವಾಗುತ್ತಿರುವ ಈ ದಿನಗಳಲ್ಲಿ ಅದನ್ನು ಬಲಪಡಿಸುವ ಹೊಣೆ ಹಿಂದಿಗಿಂತಲೂ ಇಂದು ಮುಖ್ಯವಾಗಿದೆ. ಮಾನವಕುಲದ ಘನತೆಗಾಗಿ ಹೋರಾಡಿದ ಮಹಾ ಚೇತನಗಳನ್ನು ದೇವರುಗಳನ್ನಾಗಿಸಿ ಅವರ ತತ್ವ-ಸಿದ್ಧಾಂತ- ಹೋರಾಟಗಳಿಗಿಂತ ಅವರ ಪ್ರತಿಮೆಯನ್ನು ಮುಖ್ಯವಾಗಿಸುವ ಬೆಳವಣಿಗೆಗಳು ಆತಂಕಕಾರಿಯಾಗಿವೆ. ಅಂಥವರನ್ನು ಈ ಮಟ್ಟಕ್ಕೆ ತರುವುದರಿಂದ ಅವರ ತತ್ವಸಿದ್ಧಾಂತಗಳು ಆಗಮ ಶಾಸ್ತ್ರದ ಮಂತ್ರಗಳಾಗಿ ಅವರವರ ಜಯಂತಿಗಳಂದು ಪಠಿಸುವ ಮಂತ್ರಗಳಾಗಿಬಿಡುತ್ತವೆ. ಬುದ್ಧ, ಗಾಂಧಿ, ಅಂಬೇಡ್ಕರ್, ಲೋಹಿಯ ಇವರ ವಿಚಾರಗಳು, ವಿವೇಕಾನಂದರ ಆಶಯಗಳು ಗಾದೆಗಳಾಗಿ ನಮ್ಮ ನಿತ್ಯ ಬದುಕಿನ ಹಸನಿಕೆಗೆ ಬರಬೇಕಿದೆ. ಇವರನ್ನು, ಇವರ ವಿಚಾರಗಳನ್ನು ಸಾಂದರ್ಭಿಕವಾಗಿಯಷ್ಟೇ ನೆನೆಯುವುದು ಬಳಕೆಕೋರತನವಾಗುವುದೆಂದು ಹೇಳಲು ವಿಷಾದವೆನಿಸುತ್ತದೆ.

ಬಳಕೆಕೋರ ಕುಣಿಕೆಗೆ ಸಿಕ್ಕದ್ದೇ ಆದರೆ ಕಸಿಯುವಿಕೆ ಬಲಿತು ಬಲಿಷ್ಠರ, ಸ್ಥಿತಿವಂತರ




ಊಳಿಗಕ್ಕೆ ದುರ್ಬಲವರ್ಗ ಜೀಳಬೇಕಾಗುತ್ತದೆ. ನಿಜವನ್ನು ಮರೆಮಾಚುವ ಜಾಹಿರಾತುಗಳ ಜೋಗುಳದ ಹಾಡಿಗೆ ನಿದ್ದೆ ಹೋದರೆ ಎಚ್ಚರಗೊಳ್ಳುವಾಗ್ಗೆ ಸಂಕೋಲೆಗಳಲ್ಲಿ ಬಂದಿಯಾಗಿರುತ್ತೇವೆ.

ಬಳಕೆಕೋರತನಕ್ಕೆ ದುರಾಸೆಯೇ ಬುನಾದಿ. ಇದನ್ನು ಎದುರಿಸಲು ಆಯ್ದಕ್ಕಿ ಲಕ್ಕಮ್ಮನ ಅರಿವಿನ ದಿಟ್ಟತನ ಬೇಕು, ಧಾರ್ಮಿಕತೆ ಇರಬೇಕು. ಒಂದು ದಿನ ಆಯ್ದಕ್ಕಿ ಮಾರಯ್ಯ ತನ್ನ ಅಗತ್ಯ ಮೀರಿ ತಂಡುಲವನ್ನು ಆಯ್ದು ತರುತ್ತಾನೆ. ಆ ದಿನ ಅವನಿಗಿದ್ದ ದುರಾಸೆಯ ಫಲ ಅದು. ಅದನ್ನು ಕಂಡ ಲಕ್ಕಮ್ಮ ತಂಡುಲವನ್ನು ಸ್ವೀಕರಿಸುವುದಿಲ್ಲ.

'ಎಂದಿನಂದವೆ ಸಾಕು,
ಮತ್ತೆ ಕೊಂಡು ಹೋಗಿ ಅಲ್ಲಿಯೆ ಸುರಿ'.

'ಈಸಕ್ಕಿಯ ಆಸೆ ನಿಮಗೇಕೆ?' ಎಂದು ಪ್ರತಿಭಟಿಸುತ್ತಾಳೆ.

ದಾಸ್ತಾನುಕೋರ ನಡವಳಿಕೆಗೆ ಸಮರ್ಥವಿರೋಧವನ್ನು ಇಲ್ಲಿ ಕಾಣಬಹುದು. ಬಂಡಾಯ ಸಾಹಿತ್ಯ ಸಂಘಟನೆಯ ಧ್ಯೇಯ ಇಂದು ಏನಾಗಬೇಕೆಂಬುದನ್ನು ಆಯ್ದಕ್ಕಿ ಲಕ್ಕಮ್ಮನ ಈ ವಚನ ತಿಳಿಸುವಂತಿದೆ.

ಬಂಡಾಯ ಸಾಹಿತ್ಯ ಚಳವಳಿ ಎಂಬುದರಲ್ಲಿ ಸಾಹಿತ್ಯ ನಿರ್ಮಾಣ, ಪ್ರಚಾರ ಎಂಬ ತಿಳುವಳಿಕೆಯಿಲ್ಲ. ಇದು ಸಾಪೇಕ್ಷಗೊಂಡ ಜನ ಜೀವನ ಸಂಸ್ಕೃತಿ, ವಚನ ಸಾಹಿತ್ಯದ ಹಾಗೆ. ಚಂದ್ರನನ್ನು ಭೂಮಿಗೆ ತಂದು ಬೆಳದಿಂಗಳನ್ನು ಕೊಡಿಸುತ್ತೇವೆ ಎಂಬುವುದು ಅತಿರಮ್ಯ ಕಲ್ಪನೆ. ಹಾಗೆಯೇ ಚಳವಳಿ ಬಂಗಾರದ ತಟ್ಟೆಯನ್ನು ಕೊಡುತ್ತದೆ ಅನ್ನುವುದೂ ಸಹ. ಒಂದು ವೇಳೆ ಬಂಗಾರದ ತಟ್ಟೆ ಕೊಡುವುದಾದರೂ ಅದರಲ್ಲಿ ಅನ್ನವಿಲ್ಲದಿದ್ದರೆ ಅದಕ್ಕೆ ಯಾವ ಕಿಮ್ಮತ್ತಿದೆ ? ತುಂಡು ಎಲೆಯಲ್ಲಿ ಹೊಟ್ಟೆ ತುಂಬುವಷ್ಟು ಅನ್ನವಿದ್ದರೆ ಅದರ ಕಿಮ್ಮತ್ತು ಬಂಗಾರದ ತಟ್ಟೆಗಿಂತ ಹೆಚ್ಚು. 'ಅನ್ನಕ್ಕಿಂತ ಅಕ್ಷರ ಲೇಸು' ಎಂಬುದು ಲೊಳಲೊಟ್ಟೆಯ ಮಾತು. 'ಅನ್ನದೊಂದಿಗೆ ಅಕ್ಷರ ಲೇಸು' ಎಂಬುದು ವಾಸ್ತವದ ಮಾತು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ನಾವು ಕಲಿತದ್ದು ತೆಗೆದುಕೊಳ್ಳುವುದನ್ನು, ಸಮಾಜಕ್ಕೆ ಕೊಡುವುದನ್ನು ನಾವು ಕಲಿತದ್ದು ಕಡಿಮೆ. ಕೊಡುವ ಸಂಸ್ಕೃತಿ ಬೆಳೆಯಬೇಕು. ಚಳವಳಿಗಳಿಂದ ಪಡೆದುಕೊಂಡಂತೆ ಕೊಡುವುದೂ ಆಗಬೇಕು, ಅವುಗಳ ಜೀವಂತಿಕೆಗೆ. 'ತೆಲಂಗಾಣ ರೈತ ಹೋರಾಟ' ಕೊಟ್ಟದ್ದನ್ನು ಪಡೆದುಕೊಂಡವರು ಈಗ ಅದರೊಂದಿಗೆ ಉಳಿಯುವ ಬಗ್ಗೆ ಕನಸನ್ನು ಕಾಣುವುದಿಲ್ಲ.

ತುಂಡು ಭೂಮಿಯ ಬೇಸಾಯ ಸಣ್ಣ ಕುಟುಂಬಗಳ ಸ್ವಾವಲಂಬನೆಯ ಬಲ. ಆದರೆ ಹಳ್ಳಿಗಳಲ್ಲಿ ಈ ಬೇಸಾಯ ಪದ್ಧತಿ ಅಥವಾ ಸಂಸ್ಕೃತಿ ಕ್ಷೀಣಿಸುತ್ತಿರುವುದು ಆತಂಕಕಾರಿ ಯಾಗಿದೆ. ಬಹಳಷ್ಟು ತುಂಡುಭೂಮಿ ಪರಭಾರೆಯಾಗುತ್ತಿರುವುದು ಜಮೀನುದಾರಿ ಪದ್ಧತಿಯ ಪುನರಾಗಮನದ ಸೂಚಿಯಾಗಿದೆ. ಇದಕ್ಕೆ ರೈತನನ್ನು ದೂಷಿಸುವುದು ಪೂರ್ಣ ಸಮ್ಮತವಲ್ಲ. ಬಿತ್ತಿದ್ದು ಕೈಗೇ ಬರುತ್ತಿಲ್ಲ ಎಂದ ಮೇಲೆ ಬಾಯಿಗೆ ಹೇಗೆ ತಾನೆ ಬಂದೀತು? ಹೃದಯವಂತಿಕೆಯೊಂದಿಗೆ ನೆಲದ ಜಲವೂ ಬತ್ತುತ್ತಿದೆ. ಈ ಎರಡನ್ನೂ ವೃದ್ಧಿಸಿಕೊಳ್ಳದೆ ಬದುಕು ಬದುಕಾಗದು. ಬಂಡಾಯ ಸಾಹಿತ್ಯ ಸಂಘಟನೆಯ ಮನೋಧರ್ಮದ ವ್ಯಾಪ್ತಿಯಲ್ಲಿ ಕೃಷಿಯೂ ಇದೆ. ರೈತ ಸಂಘ ಬಂಡಾಯ ಸಂಘಟನೆಯೊಳಕ್ಕೂ ಬರಬೇಕು.

ಬಂಡಾಯ ಸಾಹಿತ್ಯ ಚಳವಳಿ ಈಗಿನದೆಲ್ಲವನ್ನೂ ಇಡಿಯಾಗಿ ವಿರೋಧಿಸಬೇಕಿಲ್ಲ. ಯಾವುದು ಮೌಢ್ಯವೊ, ಪ್ರತಿಗಾಮಿಯಾದುದೊ ಅದನ್ನು ವಿರೋಧಿಸಬೇಕು. ವಿರೋಧ ಮಾಡುವುದಷ್ಟೇ ಆಗಬಾರದು. ಜೊತೆಗೆ ರಿಪೇರಿಯೂ ಮಾಡಬೇಕು. ಅಂಬೇಡ್ಕರ್ ಒಂದು ಕಡೆ – 'ಹಳೆಯದನ್ನು ಉಳಿಸಿಕೊಳ್ಳಬೇಕೆನ್ನುವವನು ರಿಪೇರಿ ಮಾಡಲು ಸಿದ್ಧನಿರಬೇಕು' ಅಂದಿದ್ದಾರೆ. ಬಂಡಾಯ ಸಾಹಿತ್ಯ ಸಂಘಟನೆಯ ಕಾರ್ಯವಿಧಾನಕ್ಕೆ ಇದು ಒಂದು ಮಾರ್ಗ ದರ್ಶನ. ಇಲ್ಲಿ ಬುದ್ಧಿಜೀವಿ ವಿಚಾರಗಳಷ್ಟೇ ಮುಖ್ಯವಾಗಬಾರದು. ಸಾಮಾನ್ಯ ಸಾಮುದಾಯಿಕ ಭಾವನೆಗಳಿಗೆ ಸಾಂಸ್ಕೃತಿಕ ರೂಪ ಸಂಘಟನೆಯನ್ನು ತೊಡಗಿಸಬೇಕು. ಶಿಕ್ಷಣವನ್ನು ಈ ನಿಟ್ಟಿನಲ್ಲಿ ನಡೆಸಲು ಬಂಡಾಯ ಸಾಹಿತ್ಯ ಚಳವಳಿ ಇತರ ಸಂಘಟನೆಗಳನ್ನು ಒಲಿಸಬೇಕು. ಇದರಿಂದ ಈ ಸಂಘಟನೆಗಷ್ಟೆ ಅಲ್ಲ ಸಾಮಾಜಿಕ ಜೀವನಕ್ಕೂ ಘನತೆ ಬರುತ್ತದೆ.

(೩೧-೭-೨೦೦೨ ರಂದು ಕೋಲಾರ ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆಯ ಪುನರ್ ಸಂಘಟನಾ ಸಭೆಯಲ್ಲಿ ಮಾಡಿದ ಅಧ್ಯಕ್ಷ ಭಾಷಣ)


ಸ. ರಘುನಾಥ
ಶ್ರೀಲಕ್ಷ್ಮಿ ಪ್ರಾ.ವಿಜನ್ ಸ್ಟೋರ್ಸ್ ರಸ್ತೆ ರಾಮಕೃಷ್ಣ ಬಡಾವಣೆ. ಶ್ರೀನಿವಾಸಪುರ -

# ಗಣ ಬಿಟ್ಟಿದ್ದು

■ ಡಾ॥ ಸುಮಿತ್ರಾ ಎಲ್. ಸಿ.



**ಮೊ**ದಲನೇ ಬಿ. ಎಸ್ಸಿ. ಕ್ಲಾಸಿಗೆ ಕೊನೇ ಪೀರಿಯಡ್. ಸಿದ್ಧಲಿಂಗಯ್ಯನವರ 'ಊರು - ಕೇರಿ'ಯ ಭೂತದ ಪ್ರಸಂಗವೊಂದನ್ನು ವಿವರಿಸುತ್ತಾ ಇದ್ದಾಗ ಹುಡುಗನೊಬ್ಬ ಎದ್ದುನಿಂತು, ''ಹಾಗಾದರೆ ಮೈಮೇಲೆ ಗಣ ಬರುವುದು ಸುಳ್ಳೇ ? ನೀವು ದೇವರು, ದೆವ್ವ ಭೂತಗಳನ್ನು ನಂಬುವುದಿಲ್ಲವೇ ?'' ಎಂದು ಪ್ರಶ್ನಿಸಿದ. ಖಂಡಿತಾ ನಂಬುವುದಿಲ್ಲ ಎಂದು ನಿದರ್ಶನಪೂರ್ವಕವಾಗಿ ಅವನಿಗೆ ಅರ್ಥವಾಗುವಂತೆ ವಿವರಿಸಿ ಕ್ಲಾಸ್‌ನಿಂದ ಹೊರ ಬರುವಾಗ, ಆ ಹುಡುಗ ಪಕ್ಕದವನಿಗೆ ಹೇಳ್ತಾ ಇದ್ದ ''ಮೇಡಂ ಇವತ್ತು ದೇವರಿಲ್ಲ ಅಂದಿದ್ದಕ್ಕೆ ಮನೆಗೆ ಹೋಗಿ ದೇವರಿಗೆ ತಪ್ಪುಕಾಣಿಕೆ, ಹಣ್ಣುಕಾಯಿ ಕೊಡ್ತಾರೆ'' ಎಂದು. ಆ ಕ್ಷಣಕ್ಕೆ ನಕ್ಕು ಸುಮ್ಮನಾದರೂ ಅವನ ಮಾತುಗಳು ನನಗೆ ಮರೆತಿದ್ದ ಘಟನೆಯೊಂದನ್ನು ನೆನಪಿಸಿದಂತಾಯಿತು. ಅದು ನಮ್ಮ ಊರಿನ ಸಮೀಪದ ಮುಳ್ಳು ಮನೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಎಂದೋ ಬಂದು ನೆಲೆಸಿದ 'ಕೊಗ್ಗ'ನ ಜೀವನದಲ್ಲಿ ನಡೆದ ಪ್ರಸಂಗ. ಅವನ ಜೀವನದ ದಾರಿಯನ್ನೇ ಅದು ಬದಲಿಸಿತು.

* * *

ಸ್ವಚ್ಛ ನೀಲಿ ಆಕಾಶ. ಸಂಜೆಯ ಇಳಿಬಿಸಿಲಿನಲ್ಲಿ ಎದುರಿಗೆ ಇರುವ ಹಾಡಿಯ ಮರಗಳು ಉಜ್ವಲವಾಗಿ ಹೊಳೆಯುತ್ತಿವೆ. ಮೂವರು ಮಕ್ಕಳು ನಿಧಾನವಾಗಿ ಕುರುಚಲು ಗಿಡಗಳ ಹಕ್ಕಲು ದಾಟಿ, ಬೃಹದಾಕಾರದ ಹಾಸುಬಂಡೆ ಹುಷಾರಾಗಿ ಇಳಿದು, ನಿಶ್ಚಲವಾಗಿ ನಿಂತ ನೀರಿನಲ್ಲಿ ಪ್ರತಿಬಿಂಬ ನೋಡಿಕೊಳ್ಳುತ್ತಾ ಹಳ್ಳದ ಕಟ್ಟನ್ನು ದಾಟುವಾಗ ಅದು ದೊಡ್ಡ ಅಣೆಕಟ್ಟೇನೋ ಅನ್ನಿಸುತ್ತಿತ್ತು. ನೀರಿನಲ್ಲಿ ಪ್ರತಿಫಲಿತವಾದ ಆಕಾಶ, ಅಡಿಕೆ ಮರ, ದಡದಲ್ಲಿ ಕುಳಿತ ಬೆಳ್ಳಕ್ಕಿ, ಎತ್ತರವಾದ ಹುಲ್ಲು, ಬರೆದಿಟ್ಟ ಚಿತ್ರದಂತೆ ಕಾಣುವುದನ್ನು ನೋಡುತ್ತ ಮತ್ತೆ ಆ ಚಿತ್ರದಲ್ಲಿ ಜೀವಂತ ಪ್ರತಿಬಿಂಬಗಳಾದ ನಮ್ಮನ್ನೇ ನೋಡಿಕೊಳ್ಳುತ್ತಾ ಮೈಮರೆತಾಗ ಎಲ್ಲಿಂದಲೋ ಹಾರಿಬಂದ ಮಿಂಚುಳ್ಳಿಯೊಂದು ನೀರಿನಲ್ಲಿ ತಲೆ ಮುಳುಗಿಸಿ ಮೀನೊಂದನ್ನು ಹಿಡಿದಾಗ ಚಿತ್ರ ಕಲಿಸಿಹೋಯಿತು. ಕೆಲವು ಕ್ಷಣಗಳ ನಂತರ ಮತ್ತೆ ನೀರು ನಿಶ್ಚಲವಾಯಿತು. ಮಿಂಚುಳ್ಳಿ ಎಬ್ಬಿಸಿದ ವೃತ್ತಾಕಾರದ ಅಲೆಗಳು ದಡದವರೆಗೆ ತಲುಪಿ ಮಾಯವಾದವು. ಕಲ್ಲಿನ ಮೇಲೆ ಕುಳಿತು ಬಟ್ಟೆ ಒಗೆದುಕೊಳ್ಳುತ್ತಿದ್ದ ಹುಡುಗಿ ಕೂಡಾ ನೀರಿನಲ್ಲಿ ಕಾಣುತ್ತಿದ್ದಾಳೆ. ಹಳ್ಳದಾಚೆಗೆ ತೋಟದ ಬೇಲಿಯಲ್ಲಿದ್ದ ಸೀಬೆ ಗಿಡದ ಬಳಿ ಹೋಗುವಷ್ಟರಲ್ಲಿ ತೋಟದಲ್ಲಿದ್ದ ಕೊಗ್ಗ 'ಹೊಯ್ ಸಣ್ಣಮ್ಮ ಪ್ಯಾರ‍್ಲುಕಾಯಿ ತಿಂಬುಕಾಗ, ಶೀತ ಆಗ್ಲಕ್ಕು' ಎಂದು ಕೂಗುತ್ತ ಬಂದ. ಇವನೊಬ್ಬ ದೊಡ್ಡ ಡಾಕ್ಟ್ರು ಎಂದುಕೊಂಡು ನಾನು' ಆ ತುದೀ ಕೊಂಬೆಲಿರೋ ಹಣ್ಣು ಕಿತ್ತು ಕೊಡೋ' ಎಂದಾಗ ಮರಹತ್ತಿ ಕೊಕ್ಕೆಯೊಂದರಿಂದ ಹರೆ ಬಗ್ಗಿಸಿ ಹಣ್ಣು ಕಿತ್ತುಕೊಟ್ಟ. ತೋಟದಲ್ಲಿ ಉದುರಿದ್ದ ಹೊಂಬಾಳೆಯನ್ನು ತಂದುಕೊಟ್ಟ. ಅದರಲ್ಲಿ ಊಟ ಮಾಡುವುದು ನಮಗೆ ಖುಷಿ ಕೊಡುತ್ತಿತ್ತು. 'ಇವತ್ತು ಕೆಲಸ ಇಲ್ಲನ' ಎಂದರೆ 'ಇವತ್ತು ಉಳಿ ಸ್ಯಣ್ಣಮ. ಇಲ್ಲಿ ಅಡೆಹಳ್ಳಿಯಲ್ಲಿ ಏಡಿ ಹಿಡಿಯನ ಅಂತ ಬಂದೆ' ಎಂದು ಕಲ್ಲೊಂದನ್ನು ಮಗುಚುತ್ತಾ ಏಡಿಗಾಗಿ ಹುಡುಕಾಡಿದ. ನಮ್ಮ ಹಿಂದೆ ಬಂದ ಅಜ್ಜನನ್ನು 'ಇಲ್ಲೆಂತ ಏಡಿ ಇದೆಯೋ ಮಾರಾಯಾ, ಅಲ್ಲಿ ಆಣೆಕಟ್ಟಿನ ಬುಡದಲ್ಲಿ ಬಂಡೆಕಲ್ಲಿನ ಸಂದಿ ನೋಡು' ಅಂದರು. ಕೊಗ್ಗನ ಬಳಿ ಏಡಿ ಹಿಡಿಯಲು ಇದ್ದ ಆಯುಧ ಅಂದರೆ ಚೂಪಾಗಿ ಮಸೆದು ಬಾಣದಂತೆ ಮಾಡಿದ ಕೊಡೆಕಡ್ಡಿ ಮತ್ತು ಅದನ್ನು ಪ್ರಯೋಗಿಸಲು ಆತನೇ ತಯಾರಿಸಿದ ಬಿದಿರಿನ ಬಿಲ್ಲು. ಬಂಡೆ ಸಂದಿನಲ್ಲಿ ಕೈ ತೂರಿಸಲಾರದಷ್ಟು ಇಕ್ಕಟ್ಟಾದ ಜಾಗಕ್ಕೆ ಆತ ಬಾಣ ಬಿಟ್ಟು ಅದರ ತುದಿಗೆ ಸಿಕ್ಕಿಕೊಂಡ ಏಡಿಯನ್ನು ಸುಲಭವಾಗಿ ಹೊರತೆಗೆಯುತ್ತಿದ್ದ. ಕೊಗ್ಗನ ಈ ವಿದ್ಯೆಯಿಂದಾಗಿ ತೋಟದ ಕೆಲಸಕ್ಕೆ ರಜವಿದ್ದ ದಿನ ಕೂಡ ಹೀಗೆ ಹಿಡಿದ ಏಡಿಗಳನ್ನು ಅವರಿವರ ಮನೆಗೆ ಕೊಟ್ಟು ಅಕ್ಕಿ, ದುಡ್ಡು ಸಂಪಾದಿಸುತ್ತಿದ್ದ.

ಕೊಗ್ಗ ಮಂದರ್ತಿಯ ಸಮೀಪದ ಯಾವುದೋ ಊರಿನಿಂದ ಬಂದು ನಮ್ಮೂರಿನ ಸಮೀಪದ ಮುಳ್ಳುಮನೆಯಲ್ಲಿ ನೆಲೆಸಿದ್ದ. ನಾವು ಶಾಲೆಗೆ ಹೋಗುವಾಗ ಹತ್ತಿರದ ಒಳದಾರಿಯಲ್ಲಿ ಹೋದರೆ ಕೊಗ್ಗನ ಮನೆ ಪಕ್ಕದಿಂದಲೇ ಹೋಗಬೇಕು.

ಪೂರ್ವ ದಿಕ್ಕಿನ ಗದ್ದೆ ಕೋಗಿನ ಕಡೆ ಮುಖ ಮಾಡಿಕೊಂಡಿದ್ದ ಅವನ ಮನೆಯ ಹಿಂಭಾಗದಲ್ಲಿ ನಾವು ಓಡಾಡುತ್ತಿದ್ದ ಕಾಲು ಹಾದಿಯಿತ್ತು. ಅವನ ಮನೆಯ ಅಂಗಳದ ಮೂಲೆಯಲ್ಲಿ ಪುಟ್ಟದೊಂದು ಹುಲ್ಲಿನ ಬಣವೆಯಿತ್ತು, ಅವನು ಹತ್ತು ಕೊಳಗದ ಗದ್ದೆ ಬೇಸಾಯ ಮಾಡುತ್ತಿದ್ದುದಕ್ಕೆ ಸಾಕ್ಷಿಯಾಗಿ. ಅಂಗಳದ ಇನ್ನೊಂದು ತುದಿಯಲ್ಲಿ ಮುನ್ನೂರ ಅರವತ್ತೈದು ದಿನವೂ ಹೂ ಬಿಡುತ್ತಿದ್ದ ದೊಡ್ಡ ದಾಸವಾಳದ ಗಿಡ, ಸೀಮೆ ನಂದಿ ಬಟ್ಟಲು, ಬಚ್ಚಲು ನೀರು ಹರಿದು ಬರುವಲ್ಲಿ ಬಸಳೆ,

ತೊಂಡೆ ಚಪ್ಪರ. ಅವನ ಪುಟ್ಟ ಮನೆಯ ಪಕ್ಕದ ಸೋಗೆ ಮಾಡು ಇದ್ದ ಒಂದೇ ದನಕ್ಕೆ ಆಶ್ರಯವಾಗಿತ್ತು. ಅಂಗಳದಂಚಿಗೆ ಗದ್ದೆ ಪ್ರಾರಂಭವಾಗುವಲ್ಲಿ ಕಟ್ಟೆಯಿಲ್ಲದ, ಇಳಿದು ನೀರು ತೆಗೆಯುವ ಬಾವಿ. ಪಕ್ಕದಲ್ಲಿದ್ದ ಹೊಟ್ಟು ಕೆರೆಯಲ್ಲಿ ಮಳೆಗಾಲದಲ್ಲಿ ಮಾತ್ರ ನೀರಿರುತ್ತಿತ್ತು. ಅವನ ಹೆಂಡತಿ ಸಣ್ಣಿ ಮನೆಯ ಹಿಂಭಾಗದಲ್ಲಿ ಬಟ್ಟೆ ಒಗೆಯುತ್ತಲೋ, ಮೀನು ಸೋಸುತ್ತಲೋ ಇರುತ್ತಿದ್ದಳು. ಅವನ ಎರಡೂ ಮಕ್ಕಳು ಮನೆಯ ಸುತ್ತ ಓಡಾಡಿಕೊಂಡಿರುತ್ತಿದ್ದವು. ಅವುಗಳಲ್ಲೊಂದಕ್ಕೆ ಯಾವಾಗಲೂ ನೆಗಡಿ.

ಕೊಗ್ಗ ಮಾತ್ರ ಗೆಣಸು ನೆಡುತ್ತಲೋ, ಅಗೆಯುತ್ತಲೋ, ತರಕಾರಿ ಬೀಜ ಬಿತ್ತುತ್ತಲೋ ಕೆಲಸ ಮಾಡುತ್ತಿರುತ್ತಿದ್ದ, ಇಲ್ಲಾ ಯಾರದ್ದಾದರೂ ಮನೆಯ ತೋಟ ಗದ್ದೆಯ ಕೆಲಸಕ್ಕೆ ಹೋಗುತ್ತಿದ್ದ. ಅವನೊಬ್ಬನ ದುಡಿಮೆಯಿಂದ ನಾಲ್ಕು ಜನರ ಸಂಸಾರ ನಡೆಯುತ್ತಿತ್ತು. ಸಣ್ಣಿ ಅಕ್ಕಿಯ ಕಲ್ಲು ಆರಿಸುತ್ತಲೋ, ಬೀಸುತ್ತಲೋ ನೀರು ತರುತ್ತಲೋ ಇರುವುದೂ ಕಾಣುತ್ತಿತ್ತು. ಪುರುಸೊತ್ತಿದ್ದಾಗ ಕರೆದವರ ಮನೆಗೆ ಹೋಗಿ ಅಕ್ಕಿ ಹಸನು ಮಾಡುವುದು, ಅಂಗಳ ಸಾರಿಸುವುದು ಮಾಡುತ್ತಿದ್ದಳು.

ಬೇಸಿಗೆ ರಜೆಯಲ್ಲೊಮ್ಮೆ ಅಜ್ಜಿಯ ಮನೆಗೆ ಹೋಗಿದ್ದ ನನ್ನನ್ನು ಕರೆತರಲು ಕೊಗ್ಗನನ್ನು ಕಳಿಸಿದ್ದರು. ಮೂರು ಮೈಲು ನಡೆಯಲು ನನಗೆ ಕಾಲುನೋವು ಎಂದು ಒಂದನೇ ಕ್ಲಾಸಿನಲ್ಲಿದ್ದ ನನ್ನನ್ನು ಹೆಗಲ ಮೇಲೆ ಕೂರಿಸಿಕೊಂಡು ಬಂದಿದ್ದ. ಆಲೆಸರಲಿನ ಹಳ್ಳದಲ್ಲಿ ಮಂಗಗಳನ್ನು ನೋಡಿ ಹೆದರಿದಾಗ ಅವೇನೂ ಮಾಡುವುದಿಲ್ಲ ಅಂದಿದ್ದ. ಮಳೆಗಾಲದಲ್ಲಿ ನಮಗೆ ವಾಟೆ ಬಿದಿರಿನ ಕೊಳಲು ಮಾಡಿಕೊಡುತ್ತಿದ್ದ. ಮಳೆಗಾಲದಲ್ಲಿ ಒಮ್ಮೆ ಗಬ್ಬದ ದನವೊಂದು ತಪ್ಪಿಸಿಕೊಂಡಿದೆ ಎಂದ ದನಕಾಯುವ ಮಂಜ ಅದನ್ನು ಹುಡುಕುವ ಗೋಜಿಗೇ ಹೋಗಲಿಲ್ಲ. ಬೇಲಿಗೂಡ ಕಡಿಯಲು ಕಾಡಿಗೆ ಹೋದ ಕೊಗ್ಗ ಕಾಡಿನ ಮಧ್ಯದ ಕೆರೆಯಲ್ಲಿ ಕೆಸರಿನಲ್ಲಿ ಹೂತುಕೊಂಡು ತಪ್ಪಿಸಿಕೊಳ್ಳಲಾರದೆ ಅಲ್ಲೇ ಸತ್ತು ಹೋಗಿದ್ದ ದನದ ಸಾವಿನ ಸುದ್ದಿಯನ್ನು ಕಣ್ಣೀರಿಡುತ್ತಾ ಬಂದು ಮನೆಯಲ್ಲಿ ಹೇಳಿದ್ದ. ನಾವು ಶಾಲೆಯ ದಾರಿಯಲ್ಲಿ ನಡೆಯುತ್ತಿದ್ದ ಆಲೆಮನೆಗೆ ಹೋದಾಗ ಅವರು ಮಕ್ಕಳ ಸೈನ್ಯವನ್ನು ನೋಡಿ ಕಬ್ಬು ಬೇಕೋ, ಹಾಲು ಬೇಕೋ ಎಂದು ಕೇಳಿದಾಗ, ಅಲ್ಲಿ ಪ್ರತ್ಯಕ್ಷವಾಗಿ "ಎರಡೂ ಕೊಡಿಸಿ ಮಾರಾಯ್ರೆ ಮಕ್ಕಳಲ್ವ" ಎಂದು ಶಿಫಾರಸು ಮಾಡುತ್ತಿದ್ದ. ಕೊಗ್ಗ ನಮಗೆ ಸುತ್ತಲಿನ ಗದ್ದೆ, ತೋಟ, ಹಕ್ಕಿ, ಹೂವುಗಳಷ್ಟೇ ಸಹಜವಾಗಿ ಆ ಪರಿಸರದ ಅಂಗವಾಗಿದ್ದ.

ಕರೆದವರ ಮನೆ ಕೆಲಸಕ್ಕೆ ಹೋಗುತ್ತಾ ಎಲ್ಲರಿಗೂ ಬೇಕಾದವನಾಗಿದ್ದ. ದಕ್ಷಿಣ ಕನ್ನಡದವನಾಗಿದ್ದರಿಂದ ಯಕ್ಷಗಾನದ ಹುಚ್ಚು, ಹತ್ತಿರದಲ್ಲಿ ಎಲ್ಲಿ ಭಾಗವತರಾಟ ಇದ್ದರೂ ಕೊಗ್ಗನ ಹಾಜರು ಇದ್ದಿದ್ದೆ. ದಸರಾ ದೀಪಾವಳಿ ಸಂದರ್ಭಗಳಲ್ಲಿ ಮುಖಕ್ಕೆ ಬಣ್ಣ ಹಚ್ಚಿ ಮನೆ ಮನೆ ತಿರುಗುತ್ತಿದ್ದ. ಅವನ ಹುಲಿವೇಷ ಸಣ್ಣ ಮಕ್ಕಳನ್ನು ಹೆದರಿಸಲು, ದೊಡ್ಡವರಿಗೆ ಮನರಂಜನೆ ಒದಗಿಸಲು, ನಮ್ಮೂರಿನ ನವರಾತ್ರಿಯ ಅಂಗವಾಗಿ ಅನಿವಾರ್ಯ ವಾಗಿತ್ತು. ದೀಪಾವಳಿಯಲ್ಲಿ ಸ್ತ್ರೀವೇಷ ಹಾಕಿ ಚಿಕ್ಕ ಮೇಳದವರ ಜೊತೆ ಮನೆ ಮನೆ ತಿರುಗುತ್ತಿದ್ದ. ಕಪ್ಪಗಿದ್ದ ಅವನ ಮುಖಕ್ಕೆ ಬಿಳೀ ಪೌಡರು, ಬಣ್ಣ ಹಚ್ಚಿ ಅದೊಂದು ತರಹ ನೀಲಿ ಮಿಶ್ರಿತ ಬೂದಿ ಬಣ್ಣವಾಗಿ ಕಾಣುತ್ತಿತ್ತು. ನೈಲಾನ್ ಸೀರೆಯನ್ನು ಉಟ್ಟುಕೊಂಡು, ತಲೆಗೆ ಕೃತಕ ಜಡೆ ಗೊಂಡೆಯನ್ನು ಸಿಕ್ಕಿಸಿಕೊಂಡು ನಮ್ಮ ಎಳೆಯ ಕಣ್ಣಿಗೆ ಅದ್ಭುತ 'ಅಭಿನೇತ್ರಿ'ಯ ರೂಪವಾಗಿ ಕಾಣುತ್ತಿದ್ದ. ಹೀಗೆ ಎಷ್ಟೋ ವರ್ಷ ಕೊಗ್ಗನ ಬದುಕು ನಿಂತ ನೀರಿನಂತೆ ಇದ್ದಾಗಲೇ ಅಲ್ಲೋಲ ಕಲ್ಲೋಲ ಅಲೆ ಎಬ್ಬಿಸುವ ಬಿರುಗಾಳಿ ಬೀಸಿತು.

ಒಂದು ದಿನ ಸಂಜೆ ಶಾಲೆಯಿಂದ ಬರುವಾಗ ಕೊಗ್ಗನ ಮನೆ ಕಡೆ ಊರವರೆಲ್ಲ ಗಡಿಬಿಡಿಯಿಂದ ಹೋಗುತ್ತಿದ್ದ ದೃಶ್ಯ ನೋಡಿ ನಾವೂ ಹೋದೆವು. ಕೊಗ್ಗನ ಮಕ್ಕಳು 'ಹೋ' ಎಂದು ಅಳುತ್ತಿದ್ದವು. ಕೊಗ್ಗ ಅಂಗಳದಲ್ಲಿ ಅರೆಬೆತ್ತಲಾಗಿ ನಿಂತು ತಕಪಕ ಎಂದು ಕುಣಿಯುತ್ತಾ ಏನೇನೋ ಕೂಗುತ್ತಿದ್ದ. ಸಣ್ಣಿ ಕಣ್ಣೀರಿಡುತ್ತಿದ್ದಳು. ಅಲ್ಲಿದ್ದ ಜನ ತಲೆಗೊಂದರಂತೆ ಮಾತಾಡುತ್ತಿದ್ದರು. ಏನೆಂದು ಅರ್ಥವಾಗದೆ ನಾವು ನಮ್ಮಷ್ಟಕ್ಕೆ ಮನೆಗೆ ಬಂದೆವು. ಸಂಜೆಯ ತಿಂಡಿ ತಿಂದು ಹೋಮ್‌ವರ್ಕ್ ಮಾಡುವಾಗ ಅಂಗಳದಲ್ಲಿ ಅಡಿಕೆ ಸುಲಿಯುತ್ತಿದ್ದ ಚೆನ್ನಿ , ಕೊಗ್ಗ ಹೆಂಡತಿಗೆ ದನಕ್ಕೆ ಬಡಿದಂತೆ ಬಡಿದ ಎಂದು ಹೇಳುತ್ತಿದ್ದುದು ಕೇಳಿಸಿತು. ಮರುದಿನ ಸಂಜೆ ಮತ್ತೆ ಕೊಗ್ಗನ ಮನೆ ಎದುರು ಗಲಾಟೆ, ಕೊಗ್ಗನಿಗೆ ಮೈಮೇಲೆ ಬಂದಿದೆ ಎಂದು ನೋಡುತ್ತಾ ನಿಂತವರು ಮಾತಾಡಿಕೊಳ್ಳುತ್ತಿದ್ದರು. ಅಲ್ಲಿ ಒಂದು ಸಣ್ಣ ಪ್ರಮಾಣದ ನಾಟಕವೇ ನಡೆಯುತ್ತಿತ್ತು. ಮೇಲಿನಮನೆ ನಾಗಪ್ಪಯ್ಯ 'ಯಾರು ನೀನು' ಎಂದು ಪ್ರಶ್ನಿಸಿದಾಗ ಕೊಗ್ಗ 'ನಿನಗ್ಯಾಕೆ ಅದು ?' ಅಂದ. ಕಾಲೇಜು ಓದುವ ಸತೀಶ 'ನೀನು ಯಾಕೆ ಬಂದಿದ್ದೀಯ, ಏನು ತೊಂದರೆಯಾಗಿದೆ ?' ಎಂದು ಕೈಮುಗಿದು ಕೇಳಿದ. ನಾಗಪ್ಪಯ್ಯ ಮತ್ತೆ 'ಕೋಳಿ ಸುಳಿದು ಬಿಡುತ್ತೇವೆ, ಮುಟ್ಟುಚಿಟ್ಟು ಆಗಿದ್ದರೆ ಹೊಟ್ಟೆಗೆ ಹಾಕಿಕೋ. ಹೀಗೆ ಮೇಲಿಂದ ಮೇಲೆ ಬಂದು ತೊಂದರೆ ಮಾಡಬೇಡ' ಅಂದರು. ಕೊಗ್ಗ ಕೂಗಿ, ಕುಣಿದು ಸಾಕಾಗಿ ಸುಮ್ಮನೇ ಕುಳಿತ. ಯಾರೋ ಅವನ ತಲೆ ಮೇಲೆ ಸ್ವಲ್ಪ ನೀರು ಹಾಕಿ ಕುಡಿಯಲು ನೀರು ಕೊಟ್ಟರು. ಅವನ ಮುಖ ನೋಡಿದರೆ ನಾಗರಬೆತ್ತದಿಂದ ಹುಡುಗರಿಗೆ ಹೊಡೆಯುವ ಮೇಷ್ಟ್ರ ಮುಖದಂತಿತ್ತು. ಅವನ ಮಕ್ಕಳು ಪಿಳಿಪಿಳಿ ಕಣ್ಣು ಬಿಡುತ್ತಾ ಮೂಲೆಯಲ್ಲಿ ಕುಳಿತಿದ್ದವು. ನಾಯಿಯೊಂದು ಇದಾವುದರ ಪರಿವೆಯಿಲ್ಲದೆ ಬೂದಿಗುಡ್ಡೆಯಲ್ಲಿ ಮಲಗಿತ್ತು.

* * *

ಬೆಳ್ಳಂಬೆಳಿಗ್ಗೆ ಸಣ್ಣಿ ಬಂದು ಹಿತ್ತಲ ಕಡೆ ನಿಂತು ಅಮ್ಮನ ಹತ್ತಿರ ಎರಡು ಸೇರು ಅಕ್ಕಿ ಕೊಡಿ ಎಂದು ಕೇಳುತ್ತಿದ್ದಳು. ಕೊಗ್ಗ ಕೆಲಸಕ್ಕೆ ಹೋಗುತ್ತಿಲ್ಲ, ಮನೆಯಲ್ಲಿ ಅಕ್ಕಿ ಕಾಳಿಲ್ಲ, ಸಣ್ಣ ಮಗುವಿಗೆ ಜ್ವರ, ಹಿತ್ತಲಿನ ಬೆಂಡೆ, ಬದನೆ ಸೌತೆಗೆ ತೋಡುವ ಬಾವಿಯಿಂದ ನೀರು ಎತ್ತಿ ಹಾಕುವವರಿಲ್ಲದೆ ಒಣಗಿಹೋಗಿವೆ, ಕೊಗ್ಗ ಮಂಕಾಗಿ ಕುಳಿತಿದ್ದಾನೆ, ಇತ್ಯಾದಿ ಕಷ್ಟ ಹೇಳಿಕೊಳ್ಳುತ್ತಿದ್ದಳು. ಚಕ್ಕಡಬೈಲಿನಲ್ಲಿ ಕೇಳಿಸಿ, ಧರ್ಮಸ್ಥಳಕ್ಕೆ ಹರಕೆ ಹೇಳಿಕೋ ಇತ್ಯಾದಿ ಸಲಹೆ ಕೊಟ್ಟು ಅಮ್ಮ, ನೀವಿಬ್ಬರೂ ನಮ್ಮ ಮನೆ ಕೆಲಸಕ್ಕೆ ಬರುವುದಿಲ್ಲ ಎಂದು ಹೇಳುತ್ತಲೇ ಎರಡು ಸೇರು ಅಕ್ಕಿ ಕೊಟ್ಟು ಕಳುಹಿಸಿದರು. ಹೀಗೆ ಅವರಿವರಲ್ಲಿ ಅಕ್ಕಿ ಬೇಡಿ, ಸಣ್ಣಿ ಕೆಲವು ದಿನ ಕಳೆದಳು. ಅವರ ಹತ್ತು ಕೊಳಗ ಮಕ್ಕಿಗದ್ದೆಯ ಭತ್ತ ತಿಂಗಳಿಗೂ ಸಾಲುತ್ತಿರಲಿಲ್ಲ. ಪುಟ್ಟ ಹುಲ್ಲು ಬಣವೆ ದನಕ್ಕೆ ಕೆಲವು ತಿಂಗಳು ಬರುತ್ತಿತ್ತು.

ಅವತ್ತು ಸ್ಕೂಲಿಗೆ ರಜಾ. ಅಡಿಕೆ ಸುಲಿಯುವವರ ಕತೆ - ಹರಟೆ ಕೇಳಿಸಿಕೊಳ್ಳುತ್ತಾ , ಲೆಕ್ಕ ಬಿಡಿಸುತ್ತಾ ಜಗುಲಿ ಮೇಲೆ ಕುಳಿತಿದ್ದೆ. ಹರಿಜನ ಕೆಂಪಿಯ ಮಗ ಬ್ಯಾಂಕಿನ ಕೆಲಸದಲ್ಲಿದ್ದವನು ಬೇರೆ ಜಾತಿಯ ಹುಡುಗಿಯನ್ನು ಮದುವೆಯಾದ ವಿಚಾರ ಬಣ್ಣ ಬಣ್ಣವಾಗಿ ಚರ್ಚೆ ಯಾಗುತ್ತಿತ್ತು. ಮುಸ್ಸಂಜೆಯಾದುದರಿಂದ ಅವರೆಲ್ಲ ಮನೆಗೆ ಹೋಗಿ ಊಟಮಾಡಿ ಮತ್ತೆ ಬರುತ್ತೇವೆಂದು ಹೊರಟರು. ಬೆಳಗಿನಿಂದ ಸುಲಿದ ಅಡಿಕೆಯನ್ನು ಅಳೆದು ಹಾಕಲು ಕೊಳಗ ಬುಟ್ಟಿ ರೆಡಿ ಮಾಡಿ, ಸಣ್ಣಮ್ಮ ಲೆಕ್ಕ ಬರೆದುಕೊಳ್ಳಿ ಎಂದು ಕರೆದರು. ಅವರು ಅಳತೆ ಮಾಡಿದಂತೆಲ್ಲಾ ಅವರ ಹೆಸರಿನ ಮುಂದೆ ಅದಕ್ಕೆಂದೇ ಇಟ್ಟ ಪುಸ್ತಕದಲ್ಲಿ ಬರೆಯುತ್ತಾ ಹೋದೆ. ದೊಡ್ಡ ರಸ್ತೆಯ ಕಡೆಯಿಂದ ಬಂದ ಮಂಜ ಮತ್ತೆ ಕೊಗ್ಗನಿಗೆ ಮೈಮೇಲೆ ಬಂದಿದೆ ಎಂದು ಹೇಳಿದ. ಕೊಗ್ಗನ ಮನೆ ಗಲಾಟೆ ನಮ್ಮ ಮನೆಗೆ ಕೇಳಿಸದಷ್ಟು ದೂರದಲ್ಲಿತ್ತು. ಅಡಿಕೆ ಸುಲಿಯುವವರೆಲ್ಲ ಗಡಿಬಿಡಿಯಿಂದ ಅವನ ಮನೆ ಕಡೆಗೆ ನಡೆದರು. ಅಥವಾ ಓಡಿದರೆಂದೇ ಹೇಳಬೇಕು.

## ರಕ್ಷಣೆ



ದೇವ ಮಂದಿರದ
ಸುತ್ತ ಎದ್ದಿರುವ
ಗೋಡೆಯ ಮೇಲೆ
ಅಂಟಿಸಿದ ಕುಪ್ಪಿ ಚೂರುಗಳು
ಬಿಂಬಿಸುತ್ತಿವೆ ನೋಡಿ
ಜಗದ್ರಕ್ಷಕನಿಗೂ ಬೇಕು
ರಕ್ಷಣೆಯ ಪೋಷಾಕು

ರವಿಶಂಕರ ಶೆಟ್ಟಿ ಒಡ್ಡಂಬೆಟ್ಟು

ನಾವೂ ಕುತೂಹಲ ತಡೆಯಲಾರದೇ ಅವರ ಹಿಂದೆ ಹೋದೆವು.

ಕೊಗ್ಗ ಆವೇಶದಿಂದ ಹೂಂಕರಿಸುತ್ತಿದ್ದ. ಮೈ ಬೆವರಿ ಕೂದಲೆಲ್ಲಾ ಕೆದರಿತ್ತು. ಯಥಾ ಪ್ರಕಾರ ಸಣ್ಣಿ ಅಳುತ್ತಿದ್ದಳು. ಮಕ್ಕಳು ಹೆದರಿ ಮೂಲೆ ಸೇರಿದ್ದರು. ಕೊಗ್ಗ ಕೈಗೆ ಸಿಕ್ಕಿದ್ದನ್ನೆಲ್ಲಾ ತೆಗೆದು ಸಿಟ್ಟಿನಿಂದ ಎಸೆಯುತ್ತಿದ್ದ. ಕೈಲಿದ್ದ ಕತ್ತಿಯನ್ನು ಬೀಸಿ ಎಸೆದಾಗ ಅದು ಹೋಗಿ ಮೂಲೆಯಲ್ಲಿ ಮುದುರಿ ಕುಳಿತಿದ್ದ ಕೋಳಿ ಮತ್ತು ಮರಿಗಳ ಮೇಲೆ ಬಿತ್ತು. ಹೇಂಟೆ ಕೋಳಿ ಅಲ್ಲೇ ರಕ್ತ ಚಿಲ್ಲೆಂದು ಚಿಮ್ಮಿ ವಿಲಿವಿಲಿ ಒದ್ದಾಡಿ ಸತ್ತುಹೋಯಿತು. ಇದನ್ನು ನೋಡಿ ಕೊಗ್ಗನ ಮಕ್ಕಳು ಗಾಬರಿಯಿಂದ ಇನ್ನೂ ಜೋರಾಗಿ ಅತ್ತರು. ನೋಡಿ ನನ್ನ ಮೈ ಜುಂ ಎಂದಿತು. ಜಿದಿರು ಮೆಳೆಗಳ ನೆರಳು ಬೆಳಕಿನ ನಡುವೆ ಸನ್ನಿವೇಶ ಭಯ ಹುಟ್ಟಿಸುವಂತೆಯೇ ಇತ್ತು. ಕೊಗ್ಗನ ಮನೆ ಒಳಗೆ ಬೆಳಕಿರಲಿಲ್ಲ. ಕೊಗ್ಗನ ಕಣ್ಣಲ್ಲಿ ಬೆಂಕಿಯಿತ್ತು. ಸತ್ತುಬಿದ್ದ ಕೋಳಿಯನ್ನೇ ನೋಡುತ್ತಿದ್ದ ಅವನ ಆಕ್ರೋಶ ಸ್ವಲ್ಪ ಕಡಿಮೆಯಾಗಿದೆ ಅನಿಸಿತು. ಅವನು ಜೇಬಿನಿಂದ ಹತ್ತು, ಇಪ್ಪತ್ತು ರೂಪಾಯಿಗಳ ನೋಟುಗಳನ್ನು ತೆಗೆದು ಹರಿದು ಎಸೆಯತೊಡಗಿದ. ಮೈಮೇಲೆ ಬಂದವರ್‍ಯಾರೂ ಹೀಗೆ ರೂಪಾಯಿ ನೋಟುಗಳನ್ನು ಹರಿದು ಎಸೆಯುವುದನ್ನು ನೋಡಿರದ ಜನಕ್ಕೆ ಇದು ಹೊಸ ಮನರಂಜನೆಯಾಯಿತು. ಯಾರೋ 'ಅವನಿಗೆ ದುಡ್ಡು ಕೊಟ್ಟವರು ಯಾರು ?' ಎಂದರು. 'ದೊಡ್ಡೇಗೌಡರು ಕೊಟ್ಟಿದ್ದು' ಎಂದು ಇನ್ನಾರೋ ಹೇಳಿದರು. ಕೊಗ್ಗನಿಗೆ ಮೈಮೇಲೆ ಬರುವುದು ಘಟ್ಟದ ಕೆಳಗಿನ ಅವನ ಊರಿನದೇ ಜಕಿಣಿ. 'ಅವನು ಊರಿಗೆ ಹೋಗಿ ಶಾಂತಿ ಮಾಡಿಸಿದರೇ ಅದರಿಂದ ಬಿಡುಗಡೆ ಎಂದು ದುಡ್ಡು ಕೊಟ್ಟಿದ್ದಾರೆ' ಎಂದು ದೊಡ್ಡೇಗೌಡರ ಮನೆಯ ಕೆಲಸದವನೊಬ್ಬ ಹೇಳಿದ. ಕೊಗ್ಗ ಮತ್ತು ಸಣ್ಣಿ ಅವರ ಮನೆಗೆ ಹೆಚ್ಚಾಗಿ ಕೆಲಸಕ್ಕೆ ಹೋಗುತ್ತಿದ್ದರು.

ಸಂಜೆಗತ್ತಲಿನಲ್ಲಿ ಸೇರಿದ್ದ ಜನ ತಲೆಗೊಂದರಂತೆ ಮಾತನಾಡುತ್ತಿದ್ದರು. ಮಾರಿಹರಕೆಯಲ್ಲಿ ಕೊಗ್ಗ ಕೋಳಿಯನ್ನು ಕೊಡದಿದ್ದುದಕ್ಕೆ ಹೀಗಾಗಿದೆ ಎಂದರು. ಯಾರೋ, ಕೊಗ್ಗನ ಹೆಂಡತಿ ದೇವರ ಬನದ ಬಳಿ ಹೋಗಿ ಮುಟ್ಟುಚಿಟ್ಟು ಮಾಡಿದ್ದಾಳೆ ಎಂದರು ಇನ್ನಾರೋ. ದುಡ್ಡು ಚೆಲ್ಲಾಡಿದ ಕೊಗ್ಗ ಹೆಂಡತಿಗೆ ಬಯ್ಯಲು ಪ್ರಾರಂಭಿಸಿದ. ಯಾರದೋ ಮೇಲಿನ ಸಿಟ್ಟನ್ನು ತೀರಿಸುವಂತಿತ್ತು ಅವನ ಚಹರೆ. ಅವನು ಹೆಂಡತಿಗೆ ಬಯ್ಯಲು ಪ್ರಾರಂಭಿಸಿದೊಡನೆ ಇನ್ನೇನೂ ಸ್ವಾರಸ್ಯವಿಲ್ಲ ಎಂದು ಜನ ತಮ್ಮ ತಮ್ಮ ಮನೆಯ ಕಡೆಗೆ ಹೊರಟರು. ಕೊಗ್ಗ ಹರಿದು ಹಾಕಿದ ನೋಟಿನ ಚೂರುಗಳನ್ನೇ ತುಳಿದುಕೊಂಡು ಹೋದರು.

ಸಂಜೆ ಅಡಿಕೆ ಸುಲಿಯುವಾಗ ಕೊಗ್ಗನ ಮೇಲೆ ಆಳ್ವಿಕೆಯಾದ ಶಕ್ತಿ ಯಾವುದೆಂದು ಚಂದು, ದುಗ್ಗಿ, ಮಂಜ, ಚೆನ್ನಿ, ಎಲ್ಲರ ನಡುವೆ ಚರ್ಚೆ ನಡೆಯಿತು. ಚಳಿ ತಡೆಯಲೆಂದು ಅಂಗಳದ ಮಧ್ಯೆ ಉರಿಸಿದ ಬೆಂಕಿಯನ್ನು ಸರಿಯಾಗಿ ಉರಿಯುವಂತೆ ದೊಡ್ಡ ಕುಂಟೆ ತುಂಡುಗಳನ್ನು ಹೊಂದಿಸಿಡುತ್ತಿದ್ದ ತಮ್ಮಯ್ಯ ಕೊಗ್ಗನ ಮನೆ ಸುಡುಗಾಡಿನ ಪಕ್ಕದಲ್ಲಿದ್ದುದೇ ಈ ಎಲ್ಲ ಉಪದ್ರವಕ್ಕೆ ಕಾರಣ ಎಂದು ತೀರ್ಪಿತ್ತ. ಅದು ಯಾವಾಗಲೂ ರಣ ತಿರುಗುವ ಜಾಗ, ಮೂರು ಮನೆ ದಿಡಗಿಯಿಂದ ಕಂಚುಗಾರ ಕಲ್ಲಿಗೆ ಪ್ರತಿ ಮಂಗಳವಾರ ಮಧ್ಯಾಹ್ನ ರಣ ತಿರುಗುವುದನ್ನು ನಾನೇ ನೋಡಿದ್ದೇನೆ. ಕೊಗ್ಗನ ಮನೆ ಅದರ ದಾರಿಯಲ್ಲಿರುವುದರಿಂದ ಅದೇ ಕಾಟ ಕೊಡುತ್ತದೆ ಎಂದು ತಾನೇ ಕಂಡವನಂತೆ ಹೇಳಿದ. ದುಗ್ಗಿ ದೊಡ್ಡಕಾಯಿಗಳ ಕೊನೆಗಳನ್ನು ಆರಿಸಿ ತಂದಿಟ್ಟುಕೊಂಡವಳು, ಕಾಯಿಗಳನ್ನು ದೊಡ್ಡ ಬುಟ್ಟಿಗೆ ಉದುರಿಸಿಕೊಳ್ಳುತ್ತಿದ್ದವಳು. ಅವನ ಮನೆಗೆ ದೇವರ ಬನ ಬೇರೆ ಹತ್ತಿರ ಇದೆ. ಅದೂ ತೊಂದರೆ ಇರಬಹುದೆಂದಳು. ಅಡಿಕೆ ಸುಲಿಯುವವರಿಗೆ ಅಡಿಗೆ ಮನೆಯಿಂದ ಅವಲಕ್ಕಿ ಕಾಫಿ ಸರಬರಾಜು ಮಾಡಲು ಬಂದ ಅಮ್ಮ ಅವನು ಮನೆ ಕಟ್ಟಿಕೊಂಡಾಗಲೇ ಹೀಗೇನಾದರೂ ತೊಂದರೆಯಾಗಬಹುದೆಂದು ನಾನು ಹೇಳಿದ್ದೆ ಅಂದರು. ಹೊಸದೇವರಿಗೆ ಹಣ್ಣುಕಾಯಿ ಮಾಡಿದರೆ ಸರಿಯಾಗುತ್ತೆ ಅಂದರು.

ಮರುದಿನ ಬೆಳಿಗ್ಗೆ ಅಂಗಳದಲ್ಲಿ ಅಡಿಕೆ ಸಿಪ್ಪೆ ತೆಗೆದು ಬುಟ್ಟಿಗೆ ತುಂಬುತ್ತಾ ಚಂದು ಮತ್ತು ದುಗ್ಗು 'ಕೊಗ್ಗನಿಗೆ ದುಡ್ಡು ಬ್ಯಾಡಾಗಿದ್ದರೆ ಬಿಡ್ಲಿ ಹರಿದು ಹಾಕಬಾರದಾಗಿತ್ತು' ಎಂದು ಮಾತನಾಡಿಕೊಳ್ಳುತ್ತಿದ್ದರು. ಮಧ್ಯಾಹ್ನ ಬಿಡಾರಕ್ಕೆ ಊಟಕ್ಕೆ ಹೋಗಿ ಬಂದ ಚಂದು ಬೇರೊಂದೇ ಕತೆಯನ್ನು ಹೇಳಿದನು. ದೊಡ್ಡೇಗೌಡರ ಮನೆಯ ಕೊಟ್ಟಿಗೆ ಕೆಲಸಕ್ಕೆ ಹೋಗುತ್ತಿದ್ದ ಸಣ್ಣಿ ಯಾವಾಗಲೂ ಅವರ ಹತ್ತಿರ ಮಾತನಾಡುತ್ತ ನಿಂತಿರುತ್ತಿದ್ದಳು. ಅವಳು ಎಮ್ಮೆ ಮೈ ತೊಳೆಸುವಾಗ, ಹಾಲು ಕರೆಯುವಾಗ, ಸಗಣಿ ಬಾಚುವಾಗ, ಕೊಟ್ಟಿಗೆ ಗುಡಿಸುವಾಗ, ಮೇಲುಸ್ತುವಾರಿ ಮಾಡುವವರಂತೆ ಗೌಡರ ಸವಾರಿ ಅಲ್ಲೆಲ್ಲ ಸುಳಿದಾಡುತ್ತಿತ್ತು. ಕೊಗ್ಗ ಅದನ್ನು ಆಕ್ಷೇಪಿಸಿ ಅವರ ಬಳಿ ಹೋಗಿ ಗಲಾಟೆ ಮಾಡುತ್ತೇನೆಂದ. ಅವನ ಬಾಯಿ ಮುಚ್ಚಿಸಲು ಅವಳು ಗೌಡರು ಕೊಟ್ಟ ದುಡ್ಡನ್ನು ಅವನಿಗೆ ಕೊಟ್ಟಾಗ ಹರಿದು ಹಾಕಿದ, ಇದೆಲ್ಲ ಮೇಲೆ ಕಾಣಿಸುವಷ್ಟು ಸುಲಭವಲ್ಲ , ಒಳಗೆ ಬೇರೆ ಜಕಿಣಿಯ ಕಿತಾಪತಿ ಇದೆ ಎಂದು ಅವರಿಬ್ಬರೂ ಮಾತನಾಡಿಕೊಳ್ಳುತ್ತಿದ್ದರು. ಇನ್ನೆರಡು ದಿನಕ್ಕೆ ಬರಲಿರುವ ದೀಪಾವಳಿ ಹಬ್ಬಕ್ಕಾಗಿ ಅಂಗಳಕ್ಕೆ ಸೆಗಣಿ ಸಾರಿಸಿ ರಂಗೋಲಿ ಹಾಕುವ ಕೆಲಸ ಮಾಡುತ್ತಿದ್ದರು.

ನಾವೆಲ್ಲ ದನಗಳ ಕೊರಳಿನ ಅಲಂಕಾರಕ್ಕಾಗಿ ಉಗುಣೆಕಾಯಿ ಚೆಂಡುಹೂವಿನ ಮಾಲೆ ತಯಾರಿಸುತ್ತಿದ್ದೆವು. ಒಂದೇ ಗಾತ್ರದ ಉಗುಣೆಕಾಯಿಗಳನ್ನು ಆಯ್ದು ಮೂರು ಎಳೆ ಪೋಣಿಸಿ ಮತ್ತೆ ಮೂರು ಎಳೆಗಳನ್ನು ಒಂದೇ ಚೆಂಡು ಹೂವಿನೊಳಗೆ ತೂರಿಸಿ ಮತ್ತೆ ಮೂರು ಎಳೆ ಮಾಡಿ ಒಬ್ಬರು ಮಾಡಿದ ಹಾರವನ್ನು ಇನ್ನೊಬ್ಬರೆದುರಿಗೆ ಪ್ರದರ್ಶಿಸಿ ನಮ್ಮ ಕಲಾಕೃತಿಗಳನ್ನು ನಾವೇ ಪ್ರಶಂಸಿಸಿಕೊಳ್ಳುವುದರಲ್ಲಿದ್ದ ನಮಗೆ ಕೊಗ್ಗನ ಕಷ್ಟ ಎಲ್ಲೋ ನಮ್ಮ ಪರಿಧಿಯ ಆಚೆಗಿದ್ದಂತೆನಿಸುತ್ತಿತ್ತು. ಸುತ್ತಮುತ್ತ ಹಬ್ಬದ ತಯಾರಿಯಲ್ಲಿ ತೊಡಗಿದ್ದ ಯಾರಿಗೂ ಅದು ಅಷ್ಟು ಮುಖ್ಯ ಅನಿಸುತ್ತಲೇ ಇರಲಿಲ್ಲ. ಅಜ್ಜ ಸುಣ್ಣ ಹಚ್ಚಿದ ಚಪ್ಪರದ ಕಂಬಗಳಿಗೆ ಕೆಮ್ಮಣ್ಣಿನ ಪಟ್ಟೆ ಬಳಿಯುತ್ತಿದ್ದರು. ಕೂಂಕ್ರ ಒಂದು ಪಾತ್ರೆಯಲ್ಲಿ ಜೇಡಿ ಇನ್ನೊಂದರಲ್ಲಿ ಕೆಮ್ಮಣ್ಣು ಇಟ್ಟುಕೊಂಡು ಅವುಗಳಿಗೆ ಸ್ವಲ್ಪ ಸ್ವಲ್ಪವೇ ನೀರು ಹಾಕಿ ಹದವಾಗಿ ಕಲೆಸುತ್ತಿದ್ದ. ಅದು ಮರುದಿನ ದನಗಳ ಮೈಗೆ ಕೊಂಬಿಗೆ ಹಚ್ಚಿ ಅಲಂಕರಿಸಲು, ಬೆಳಿಗ್ಗೆಯಷ್ಟೇ ಅಜ್ಜಿಯ ತವರು ಮನೆಯಿಂದ ಯಾರೋ ತಂದು ಕೊಟ್ಟ ಪುಂಡಿ ಕೋಲುಗಳನ್ನು ದೀಪಾವಳಿಯ ಸಂಜೆ ದೀಪಹಚ್ಚಲು, ತುದಿ ಚೂಪು ಮಾಡಿಡುವಂತೆ ಅಜ್ಜಯ್ಯ ಅವನಿಗೆ ಆದೇಶಿಸುತ್ತಿದ್ದರು. ಇದೆಲ್ಲ ಯಾವಾಗಲೂ ಹೀಗೆ ಇರುವಂತಹುದು ಎಂದು ಎಲ್ಲರೂ ತಮ್ಮದೇ ಪ್ರಪಂಚದಲ್ಲಿ ಮುಳುಗಿದ್ದರು.

ಆದರೆ ಆ ಹಬ್ಬ ಕೊಗ್ಗನ ವೇಷವಿಲ್ಲದೇ, ಕುಣಿತವಿಲ್ಲದೇ ಕಳೆದುಹೋಯಿತು. ದೊಡ್ಡೇಗೌಡರು ತಮ್ಮ ಮರ್ಯಾದೆ ಉಳಿಸಿಕೊಳ್ಳಲು ಕೊಗ್ಗನ ಮೈಮೇಲೆ ಬರುವುದು ಮಂದರ್ತಿ ಅಮ್ಮನೆಂದು ಕತೆ ಹುಟ್ಟಿಸಿದ್ದರು. ಈ ಎಲ್ಲ ಅವಮಾನ, ಕಿರಿಕಿರಿ ಸಹಿಸಲಾರದೆ ಕೊಗ್ಗ ಹೆಂಡತಿ ಮಕ್ಕಳೊಡನೆ ಘಟ್ಟ ಇಳಿದು ಹೋದ. ದೀಪಾವಳಿಯ ದಿನ ಊರೆಲ್ಲ ಬೆಳಗಿದರೂ ಕೊಗ್ಗನ ಮನೆಯಲ್ಲಿ ದೀಪವಿರಲಿಲ್ಲ. ಕೊಗ್ಗನ ಹಿತ್ತಲಲ್ಲಿ ದನಗಳು ಮೇಯುತ್ತಿದ್ದವು. ಸಂಜೆ ಶಾಲೆಯಿಂದ ಬರುವಾಗ ಅದನ್ನು ನೋಡಿ ಸಂಕಟವಾಯಿತು. ನಿಧಾನವಾಗಿ ಗೆಣಸಿನ ಬಳ್ಳಿ, ಬೆಂಡೆ, ಬದನೆ, ಸೌತೆ ಮಾಯವಾಗಿ ದನಗಳು ದೊಡ್ಡ ದೊಡ್ಡ ದಾಸವಾಳದ ಗಿಡಕ್ಕೂ ಬಾಯಿ ಹಾಕಿದವು. ಎಷ್ಟೋ ವರ್ಷಗಳಿಂದ ಹೂಬಿಡುತ್ತಿದ್ದ ದಾಸವಾಳದ ಗಿಡಗಳೂ ನೀರಿಲ್ಲದೆ ಬಾಡಿ ಸತ್ತು ಹೋದವು. ಜನ ವಸತಿಯಿಲ್ಲದೆ ಹಲವು ತಿಂಗಳು ಖಾಲಿಯಿದ್ದು ಬೀಳುವ ಸ್ಥಿತಿಯಲ್ಲಿದ್ದ ಕೊಗ್ಗನ ಮನೆಗೆ ಕೊನೆಗೊಂದು ದಿನ ಕನ್ನಡ ಜಿಲ್ಲೆಯಿಂದ ಬೇರೆ ಯಾರೋ ಒಕ್ಕಲು ಬಂದರು. ಕೊಗ್ಗನ ಚಿತ್ರ ನಿಧಾನವಾಗಿ ಎಲ್ಲರ ಮನದಿಂದ ಮಾಸಿ ಹೋಯಿತು.


**ಡಾ|| ಸುಮಿತ್ರಾ, ಎಲ್. ಸಿ.**
''ಅಶ್ವಿನಿ'', ಅನಿಕೇತನ ರಸ್ತೆ, ಸೊಪ್ಪುಗುಡ್ಡೆ ಬಡಾವಣೆ
ತೀರ್ಥಹಳ್ಳಿ – ೫೭೭೪೩೨, ಶಿವಮೊಗ್ಗ ಜಿಲ್ಲೆ

# ಗಾಂಧೀಜಿ ಮತ್ತು ಪತ್ರಿಕೋದ್ಯಮ

**ತಮ್ಮ ಪತ್ರಿಕೆಗಳ ಮೂಲಕ ನಮ್ಮನ್ನು ಪರಿಶುದ್ಧಗೊಳಿಸುವಲ್ಲಿ, ಪ್ರಚೋದನೆ ನೀಡುವಲ್ಲಿ ಹಾಗೂ ಮೇಲೆತ್ತುವಲ್ಲಿ ಗಾಂಧೀಜಿ ಅಸಾಧಾರಣ ಶಕ್ತಿಯಾಗಿದ್ದರು. ನಾವು ಪತ್ರಿಕೋದ್ಯಮವನ್ನು ಗಂಭೀರವಾಗಿ ಪರಿಗಣಿಸಿದೆವು. ಅದು ಕೇವಲ ಉದ್ಯೋಗವಾಗಿರದೆ ಜೀವನದ ಧ್ಯೇಯವಾಗಿರಬೇಕಾಗಿದೆ. ಅದು ದೇಶಭಕ್ತಿಯ ಉದ್ದೇಶಕ್ಕಾಗಿ ಕೆಲಸ ಮಾಡುವ ಉನ್ನತ ಹುದ್ದೆಯಾಗಿರಬೇಕಾಗಿದೆ ಎಂಬುವ ಗಾಂಧೀಜಿಯವರ ಪತ್ರಿಕೋದ್ಯಮದ ಆದರ್ಶಗಳನ್ನು ಇಂದಿನ ಪತ್ರಕರ್ತರು ಮತ್ತು ಪತ್ರಿಕೆಗಳು ರೂಢಿಸಿಕೊಳ್ಳಲಿ ಎಂಬುದು ನಮ್ಮೆಲ್ಲರ ಆಶಯ**

■

**ಸತೀಶ್‌ಕುಮಾರ್ ಅಂಡಿಂಜೆ**

ಹಿಂದೆ, ಭಾರತದಲ್ಲಿ ಪತ್ರಿಕೋದ್ಯಮ ಒಂದು ವೃತ್ತಿಯಾಗಿತ್ತು. ಆದರೆ ಇಂದು ಅದು ವ್ಯಾಪಾರವಾಗಿದೆ. ಉದಾರೀಕರಣದ ಮುಂದಿನ ಹೆಜ್ಜೆಯಾಗಿ ಭಾರತದ ಮಾರುಕಟ್ಟೆ ಜಾಗತೀಕರಣಗೊಳ್ಳುತ್ತಿರುವಾಗ ಭಾರತೀಯ ಪತ್ರಿಕೋದ್ಯಮವೂ ವ್ಯಾಪಾರೀಕರಣಗೊಳ್ಳುತ್ತಿದೆ. ಪತ್ರಿಕೋದ್ಯಮಕ್ಕೆ ಇದುವರೆಗೂ ಇದ್ದ ವ್ಯಾಖ್ಯಾನ ಬದಲಾಗಿ 'ನವಪತ್ರಿಕೋದ್ಯಮ'ವೊಂದು ತಲೆ ಎತ್ತುತ್ತಿದೆ. ಪತ್ರಕರ್ತ 'ನವಪತ್ರಕರ್ತ'ನಾಗುತ್ತಿದ್ದಾನೆ. ಆತ ಯಾವುದೇ ಕಂಪನಿಯ ಮ್ಯಾನೇಜರ್‌ಗಳಿಗಿಂತ ಭಿನ್ನನಲ್ಲ. ಆತ ಬರೆಯುವ ಮ್ಯಾನೇಜರ್ ಅಷ್ಟೇ. ಪತ್ರಕರ್ತರು ಜಾಹೀರಾತುಗಳ ನಡುವಿನ ಜಾಗವನ್ನು ತುಂಬಲು ಮಾತ್ರ ಇದ್ದಾರೆ ಎಂಬ ಕಲ್ಪನೆ ಇದೆ. ಎಡಿಟೋರಿಯಲ್ ಹೋಗಿ ಆಡ್ವಿಟೋರಿಯಲ್ ಬಂದಿದೆ. 'ಪತ್ರಿಕೆ ಒಂದು ಸರಕು ಮಾತ್ರ' ಎಂದು ಯುನೆಸ್ಕೊ ವಿಚಾರ ಸಂಕಿರಣದಲ್ಲಿ ಒತ್ತಿ ಹೇಳಿದ್ದ ಮುಂದುವರಿದ ದೇಶಗಳ ಚಿಂತನೆ ಭಾರತ ಪತ್ರಿಕೋದ್ಯಮದಲ್ಲಿಯೂ ತನ್ನ ಬೇರನ್ನು ಕಂಡುಕೊಳ್ಳತೊಡಗಿದೆ. ಇಂಥ ಸಂದರ್ಭದಲ್ಲಿ, ಸ್ವತಃ ಪತ್ರಕರ್ತರಾಗಿದ್ದ ಮಹಾತ್ಮಾ ಗಾಂಧೀಜಿಯವರ ವಿಚಾರಧಾರೆ, ಪತ್ರಿಕೋದ್ಯಮದ ನೀತಿ ಸಂಹಿತೆ ಮತ್ತು ಪತ್ರಕರ್ತರಾಗಿ ಅವರ ಕೊಡುಗೆಯನ್ನು ತಿಳಿಯುವುದು ಉತ್ತಮ.

ಗಾಂಧೀಜಿ ಸ್ವಾತಂತ್ರ್ಯ ಹೋರಾಟದಲ್ಲಿ ಪತ್ರಿಕೆಯನ್ನು ಒಂದು ಅಸ್ತ್ರವನ್ನಾಗಿ ಬಳಸಿಕೊಂಡರು. ಸ್ವತಃ ಪತ್ರಿಕೆಗಳನ್ನು ಪ್ರಕಟಿಸಿದ್ದಲ್ಲದೆ, ತಮ್ಮ ವಿಚಾರಗಳ ಮೂಲಕ ದೇಶದ ಜನರಲ್ಲಿ ರಾಷ್ಟ್ರಪ್ರೇಮ ಮೂಡಿಸಲು ಇತರ ಪತ್ರಿಕೆಗಳಲ್ಲೂ ಲೇಖನಗಳನ್ನು ಬರೆದರು. ಅವರ ಲೇಖನಕ್ಕಾಗಿ ಪತ್ರಿಕೆಗಳು ಹಾಗೂ ವಾರ್ತಾ ಸಂಸ್ಥೆಗಳು ಕಾಯುತ್ತಿರುತ್ತಿದ್ದವು. ಗಾಂಧೀಜಿಯವರು ಉನ್ನತ ಶಿಕ್ಷಣಕ್ಕಾಗಿ ೧೮೮೮ರಲ್ಲಿ ಲಂಡನ್‌ಗೆ ತೆರಳಿದಾಗ ತಮ್ಮ ಪತ್ರಿಕೋದ್ಯಮ ಜೀವನ ಆರಂಭಿಸಿದರು. ಅವರ ಮೊದಲ ಲೇಖನ 'ಲಂಡನ್ ವೆಜಿಟೇರಿಯನ್ ಸೊಸೈಟಿ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಲಂಡನ್‌ನಲ್ಲಿದ್ದಾಗ ಅವರು ದಾದಾಬಾಯಿ ನವರೋಜಿ ಪ್ರಕಟಿಸುತ್ತಿದ್ದ 'ಇಂಡಿಯಾ' ಎಂಬ ಪತ್ರಿಕೆಯ ವರದಿಗಾರರಾಗಿದ್ದರು. ಅದು ಅವರಿಗೆ ಪತ್ರಿಕೋದ್ಯಮದಲ್ಲಿ ಅಪಾರ ಅನುಭವ ನೀಡಿತು.

ಗಾಂಧೀಜಿ ೧೮೯೩ರಲ್ಲಿ ದಕ್ಷಿಣ ಆಫ್ರಿಕಾಗೆ ತೆರಳಿದಾಗ ಅಲ್ಲಿನ ವರ್ಣಭೇದ ನೀತಿ ಕಂಡು ಮರುಗಿದರು. ಅದರ ವಿರುದ್ಧ ಹೋರಾಡಲು ಲೇಖನಿಯನ್ನು ಅಸ್ತ್ರವಾಗಿ ಬಳಸಿದರು. ಅನಂತರ ಪತ್ರಿಕೆಗಳಿಗೆ ಬರೆಯಲು ಮತ್ತು ಸಂದರ್ಶನ ನೀಡಲು ಆರಂಭ. ಬಹಿರಂಗ ಪತ್ರ ಮತ್ತು ಸಂಪಾದಕರಿಗೆ ಪತ್ರಗಳನ್ನು ಬರೆದರು. ಆದರೆ ಅವರ ರಾಜಕೀಯ ಆಂದೋಲನಕ್ಕೆ ಅಷ್ಟೇ ಸಾಲದು ಎಂಬುದನ್ನು ಕಂಡುಕೊಂಡರು. ಅವರ ವಿಚಾರಗಳು ಜನರನ್ನು ತಲುಪಲು ಒಂದು ಮುಖವಾಣಿಯ ಅಗತ್ಯವಿತ್ತು. ಅದಕ್ಕಾಗಿ ಅವರು ೧೯೦೩ರ ಜೂನ್ ೪ರಂದು 'ಇಂಡಿಯನ್ ಒಪೀನಿಯನ್' ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಅದು ಇಂಗ್ಲಿಷ್ ಮತ್ತು ಗುಜರಾತಿ ಭಾಷೆಗಳಲ್ಲಿ ಪ್ರಕಟವಾಗುತ್ತಿತ್ತು. ಕೆಲವೊಮ್ಮೆ ಹಿಂದಿ ಮತ್ತು ತಮಿಳು ಭಾಷೆಗಳಲ್ಲಿಯೂ ಅದರಲ್ಲಿ ಸುದ್ದಿ ಪ್ರಕಟವಾಗುತ್ತಿತ್ತು. ಅಲ್ಲಿದ್ದ ಭಾರತೀಯರಿಗೆ ಮಾಹಿತಿ ಮತ್ತು ಶಿಕ್ಷಣ ನೀಡಲು 'ಇಂಡಿಯನ್ ಒಪೀನಿಯನ್' ಉತ್ತಮ ಮಾಧ್ಯಮವಾಯಿತು.



ಗಾಂಧೀಜಿ ಆ ಪತ್ರಿಕೆಯ ಸಂಪಾದಕರು. ಮದನ್‌ಜಿತ್ ಮಾಲಿಕ. ೧೯೧೪ರಲ್ಲಿ ಗಾಂಧೀಜಿ ಭಾರತಕ್ಕೆ ಹಿಂತಿರುಗಿದಾಗ ಅವರ ಎರಡನೆಯ ಮಗ ಮಣಿಲಾಲ್ ಗಾಂಧಿ ಅದರ ಸಂಪಾದಕರಾದರು. ಆ ಪತ್ರಿಕೆಯ ಮಹತ್ವದ ಬಗ್ಗೆ ಗಾಂಧೀಜಿ ತಮ್ಮ ಆತ್ಮಚರಿತ್ರೆಯಲ್ಲಿ ಈ ರೀತಿ ಬರೆಯುತ್ತಾರೆ: ''ಇಂಡಿಯನ್ ಒಪೀನಿಯನ್ ನನ್ನ ಜೀವನದ ಒಂದು ಭಾಗದ ಕನ್ನಡಿಯಾಗಿತ್ತು. ವಾರದಿಂದ ವಾರಕ್ಕೆ ನಾನು ಅದರ ಅಂಕಣಗಳಲ್ಲಿ ನನ್ನ ಆತ್ಮವನ್ನು ಸುರಿದೆ. ನಾನು ತಿಳಿದಂತೆ ಸತ್ಯಾಗ್ರಹದ ತತ್ವಗಳು ಮತ್ತು ಆಚರಣೆಯನ್ನು ವ್ಯಾಖ್ಯಾನಿಸಿದೆ. ನಾನು ಬಲವಂತವಾಗಿ ಜೈಲಿನಲ್ಲಿದ್ದ ಹತ್ತು ವರ್ಷಗಳ ಹೊರತಾಗಿ ಇಂಡಿಯನ್ ಒಪೀನಿಯನ್‌ನ ಒಂದು ಸಂಚಿಕೆಯೂ ನನ್ನ ಲೇಖನವಿಲ್ಲದೆ ಹೊರಬಂದಿಲ್ಲ. ಯಾವುದೇ ನಿಂದನೆಯ ವೈಭವೀಕರಣದ ಅಥವಾ ಕೇವಲ ಹೊಗಳಿಕೆಯ ಒಂದು ಪದ ಕೂಡಾ ಈ ಲೇಖನಗಳಲ್ಲಿ ಪ್ರಕಟವಾಗಿದ್ದು ನನಗೆ ನೆನಪಿಲ್ಲ. ಆದರೆ ಈ ಪತ್ರಿಕೆ ನನಗೆ ಸ್ವ-ನಿಯಂತ್ರಣದ ಒಂದು ತರಬೇತಿಯಾಗಿತ್ತು ಮತ್ತು ಸ್ನೇಹಿತರಿಗೆ ನನ್ನ ವಿಚಾರಧಾರೆಯೊಂದಿಗೆ ನಿರಂತರ ಸಂಪರ್ಕ ಇಟ್ಟುಕೊಳ್ಳಲು ಒಂದು ಮಾಧ್ಯಮವಾಗಿತ್ತು.''

ಭಾರತಕ್ಕೆ ಬಂದ ಗಾಂಧೀಜಿ ರೌಲತ್ ಕಾಯಿದೆ ಮತ್ತು ಜಲಿಯನ್‌ವಾಲಾಬಾಗ್ ಹತ್ಯಾಕಾಂಡದ ವಿರುದ್ಧವಾಗಿ ಸತ್ಯಾಗ್ರಹವನ್ನು ಆರಂಭಿಸಿದರು. ರಾಜಕೀಯದಲ್ಲಿ ಪತ್ರಿಕೆ ಮತ್ತು ಸಾರ್ವಜನಿಕರ ಅಭಿಪ್ರಾಯ ಎಷ್ಟು ಮುಖ್ಯ ಎಂಬುದನ್ನು ದಕ್ಷಿಣ ಆಫ್ರಿಕಾದಲ್ಲೇ ಕಲಿತಿದ್ದ ಗಾಂಧೀಜಿಗೆ ತಮ್ಮ ವಿಚಾರಗಳನ್ನು ಹೇಗೆ ಪರಿಣಾಮಕಾರಿಯಾಗಿ ಉಪಯೋಗಿಸಬೇಕು ಎಂಬುದು ಕೂಡ ಗೊತ್ತಿತ್ತು. ತಮ್ಮ ಪ್ರಬಲ ಅಸ್ತ್ರಗಳಾದ ಸತ್ಯ, ಅಹಿಂಸೆ, ಸತ್ಯಾಗ್ರಹಗಳ ಮೂಲಕ ಬ್ರಿಟಿಷರ ವಿರುದ್ಧ ಹೋರಾಟ ಆರಂಭಿಸಿದ ಅವರು ಅವುಗಳನ್ನು ಚುರುಕುಗೊಳಿಸಲು ಪತ್ರಿಕಾ ಮಾಧ್ಯಮವನ್ನು ಬಳಸಿದರು.

ಮುಂಬಯಿಯ ಜಮ್ನಾದಾಸ್ ದ್ವಾರ್ಕಾದಾಸ್ ಸಂಪಾದಿಸುತ್ತಿದ್ದ 'ಯಂಗ್ ಇಂಡಿಯಾ' ಎಂಬ ಆಂಗ್ಲ ವಾರ ಪತ್ರಿಕೆಯನ್ನು ೧೯೧೯ರ ಅಕ್ಟೋಬರ್ ೭ರಂದು ಗಾಂಧೀಜಿ ಖರೀದಿಸಿದರು. ಅದೇ ವರ್ಷ ಅದರ ಗುಜರಾತಿ ಆವೃತ್ತಿ 'ನವಜೀವನ'ವನ್ನು ಕೂಡ ಆರಂಭಿಸಿದರು. ಅವರಿಗೆ ಬಿರ್ಲಾರಂಥವರು ಧನಸಹಾಯ ನೀಡಿ ಪ್ರೋತ್ಸಾಹಿಸಿದರು. ಗಾಂಧೀಜಿ ಸಂಪಾದಕರಾಗಿದ್ದ ಆ ಪತ್ರಿಕೆಗಳಿಗೆ ಮಹದೇವ ದೇಸಾಯಿ ಪ್ರಕಾಶಕರಾಗಿದ್ದರೆ, ಶಂಕರಲಾಲ್ ಬ್ಯಾಂಕರ್ ಮುದ್ರಕರಾಗಿದ್ದರು. ಪ್ರತಿ ಬುಧವಾರ ಪ್ರಕಟವಾಗುತ್ತಿದ್ದ ಆ ಪತ್ರಿಕೆಯ ಬೆಲೆ ಎರಡಾಣೆಯಾಗಿದ್ದರೆ, ವಾರ್ಷಿಕ ಚಂದಾ ಐದು ರೂಪಾಯಿ. ಯಂಗ್ ಇಂಡಿಯಾದ ಪ್ರಕಟನಾ ಕೇಂದ್ರವನ್ನು ಆಗಿನ ಮದ್ರಾಸ್‌ನಿಂದ ಅಹಮದಾಬಾದ್‌ಗೆ ವರ್ಗಾಯಿಸಿದಾಗ, ಅದರ ಪ್ರಸರಣ ೧,೨೦೦ ರಿಂದ ೪೫,೦೦೦ಕ್ಕೆ ಏರಿತು.

ಪತ್ರಿಕೆಗಳು ಇಂದಿನಂತೆ ಜಾಹಿರಾತು ಮಾಧ್ಯಮಗಳಾಗಿ ಬಳಕೆಯಾಗುವುದರಲ್ಲಿ ಅಸಮಾಧಾನ ವ್ಯಕ್ತಪಡಿಸಿದ್ದ ಗಾಂಧೀಜಿ ಈ ರೀತಿ ಬರೆಯುತ್ತಾರೆ: ''ಪತ್ರಿಕೆ ಗಳು ತಮ್ಮ ಆದಾಯಕ್ಕಾಗಿ ಚಂದಾ ಹಣಕ್ಕಿಂತ ಮುಖ್ಯವಾಗಿ ಜಾಹಿರಾತನ್ನು ಅವಲಂಬಿಸುವುದು ಈಗ ರೂಢಿಯಾಗಿದೆ. ಅದರ ಫಲಿತಾಂಶ ಶೋಚನೀಯ. ಮದ್ಯಪಾನದ ವಿರುದ್ಧವಾಗಿ ಬರೆಯುವ ಪತ್ರಿಕೆ, ಮದ್ಯವನ್ನು ಹೊಗಳುವ ಜಾಹಿರಾತು ಪ್ರಕಟಿಸುತ್ತದೆ. ಅದೇ ಸಂಚಿಕೆಯಲ್ಲಿ ನಾವು ತಂಬಾಕಿನ ಭೀಕರ ಪರಿಣಾಮದ ಜೊತೆ, ಅದು ಎಲ್ಲಿ ಸಿಗುತ್ತದೆ ಎಂಬುದನ್ನೂ ಓದುತ್ತೇವೆ.... ಈ ಪದ್ಧತಿ ಪಾಶ್ಚಾತ್ಯ ಪತ್ರಿಕೆಗಳ ಅನುಕರಣೆಯಾಗಿದೆ. ಈ ಪದ್ಧತಿಯನ್ನು ನಿಲ್ಲಿಸಲು ಅಥವಾ ಇದರಲ್ಲಿ ಸುಧಾರಣೆ ತರಲು ನಾವು ಏನು ಮಾಡಬೇಕು ಎಂಬುದು ದೊಡ್ಡ ವಿಷಯವಲ್ಲ. ಆದರೆ ಜಾಹಿರಾತಿನ ವಿಚಾರದಲ್ಲಿ ಕೆಲವಾದರೂ ನಿರ್ಬಂಧಗಳನ್ನು ಹೇರಿಕೊಳ್ಳುವುದು ಪ್ರತಿಯೊಂದು ಪತ್ರಿಕೆಯ ಕರ್ತವ್ಯವಾಗಿದೆ.'' ಗಾಂಧೀಜಿ ಯಾವುದೇ ಜಾಹಿರಾತು ಪ್ರಕಟಿಸದೆ ಕೇವಲ ಚಂದಾ ಹಣದಿಂದಲೇ ಪತ್ರಿಕೆ ನಡೆಸಿದರೂ ನಷ್ಟ ಹೊಂದಲಿಲ್ಲ.

ಸರಳ ಪದಪ್ರಯೋಗ ಮತ್ತು ವಾಕ್ಯಗಳನ್ನು ಉಪಯೋಗಿಸಿ ಪರಿಣಾಮಕಾರಿಯಾಗಿ ಬರೆಯುತ್ತಿದ್ದ ಗಾಂಧೀಜಿಯವರ ರಕ್ತದಲ್ಲಿ ಬರಹವೇ ಹರಿಯುತ್ತಿತ್ತೆನ್ನಬಹುದು. ಅವರು ಜೈಲಿನಲ್ಲಿದ್ದಾಗ ಸಿ. ರಾಜಗೋಪಾಲಾಚಾರಿ, ಪೋಥೆನ್ ಜೋಸೆಫ್‌ರಂಥವರು 'ಯಂಗ್

ಇಂಡಿಯಾ'ದ ಸಂಪಾದಕರಾಗಿದ್ದರು. ಜೈಲಿನಿಂದಲೇ ಗಾಂಧೀಜಿ ಆ ಪತ್ರಿಕೆಗೆ ನಿರಂತರವಾಗಿ ಲೇಖನಗಳನ್ನು ಬರೆಯುತ್ತಿದ್ದರು. ಅವರು ಜೈಲಿನಲ್ಲಿದ್ದಾಗಲೇ ಅಂದರೆ, ೧೯೩೩ರಲ್ಲಿ 'ಹರಿಜನ' ಎಂಬ ಆಂಗ್ಲ ವಾರ ಪತ್ರಿಕೆಯನ್ನು ಆರಂಭಿಸಿ, ಹರಿಜನರ ಉದ್ಧಾರಕ್ಕಾಗಿ ಶ್ರಮಿಸಿದರು. 'ಹರಿಜನ ಬಂಧು' ಮತ್ತು 'ಹರಿಜನ ಸೇವಕ' ಎಂಬ ಅದರ ಗುಜರಾತಿ ಮತ್ತು ಹಿಂದಿ ಆವೃತ್ತಿಗಳನ್ನು ಕೂಡ ಆರಂಭಿಸಿದರು. ಅದು ದೇಶದ ಇತರ ಭಾಷೆಗಳಲ್ಲಿ ಕೂಡ ಪ್ರಕಟವಾಗಲು ಆರಂಭವಾಯಿತು. ಸಿದ್ಧವನಹಳ್ಳಿ ಕೃಷ್ಣಶರ್ಮ ಅವರು ಆ ಪತ್ರಿಕೆಯನ್ನು ಕನ್ನಡದಲ್ಲಿ ಆರಂಭಿಸಿದರು. ಪ್ರತಿ ಶುಕ್ರವಾರ ಪ್ರಕಟವಾಗುತ್ತಿದ್ದ 'ಹರಿಜನ' ಪತ್ರಿಕೆಯ ವಾರ್ಷಿಕ ಚಂದಾ ನಾಲ್ಕು ರೂಪಾಯಿ ಆಗಿತ್ತು. ಅದರಲ್ಲಿ ಶೇ. ೭೫ರಷ್ಟು ಗಾಂಧೀಜಿ ಬರೆದ ಲೇಖನ ಪ್ರಕಟವಾದರೆ ಉಳಿದಂತೆ ಮಹದೇವ ದೇಸಾಯಿ, ಕೆ. ಜಿ. ವಶ್ರುಬಾಲ್, ನರಹರಿ ಪರೇಖ್, ಜವಹರಲಾಲ್ ನೆಹರೂ, ದಿವಾಕರ್, ಜಿ. ರಾಮಚಂದ್ರನ್, ಕಾಕ ಕಾಲೇಕರ್, ಸಿ. ರಾಜಗೋಪಾಲಾಚಾರಿ ಮುಂತಾದವರು ಬರೆಯುತ್ತಿದ್ದರು. 'ಹರಿಜನ' ಪತ್ರಿಕೆ ಭಾರತೀಯ ಪತ್ರಿಕೋದ್ಯಮದ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿದೆ.

ಗಾಂಧೀಜಿ ತಮ್ಮ ಪತ್ರಿಕೆಗಳಲ್ಲಿ ಪತ್ರಿಕಾ ನೀತಿ ಸಂಹಿತೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಭಾರತೀಯ ರಾಷ್ಟ್ರೀಯವಾದಿಗಳು ಭಾರತ ಸ್ವಾತಂತ್ರ್ಯ ಪಡೆಯುತ್ತದೆ ಎಂದು ಬಯಸುವುದು ಬೇಡ ಎನ್ನುವ ಲಾರ್ಡ್ ಬಿರ್ಕೆನ್‌ಹೆಡ್ ಮತ್ತು ಮೊಂಟೆಗು ಅವರ ಹೇಳಿಕೆಗಳಿಗೆ ಪ್ರತಿಕ್ರಿಯೆಯಾಗಿ ಮಾರ್ಚ್ ೨೩, ೧೯೨೨ರ 'ಯಂಗ್ ಇಂಡಿಯಾ'ದ ಸಂಚಿಕೆಯಲ್ಲಿ 'ಶೇಕಿಂಗ್ ದ ಮೇನ್ಸ್' ಎಂಬ ಶೀರ್ಷಿಕೆಯಡಿ ಹೀಗೆ ಬರೆದರು: ''ಅಧಿಕಾರದ ಕೆಂಪು ಮದ್ಯದಿಂದ ಅಮಲುಗೊಂಡ ಮತ್ತು ದುರ್ಬಲ ವರ್ಗವನ್ನು ಸುಲಿಗೆ ಮಾಡುವ ಸಾಮ್ರಾಜ್ಯ ಕೂಡಾ ಈ ವಿಶ್ವದಲ್ಲಿ ಹೆಚ್ಚು ಸಮಯ ಬಾಳಲಿಲ್ಲ. ವಿಶ್ವವನ್ನು ಕೇವಲ ದೇವರು ನಡೆಸುವುದಾದರೆ, ಈ ಭೂಮಿಯ ದುರ್ಬಲ ವರ್ಗವನ್ನು ದೈಹಿಕವಾಗಿ ಸಂಘಟಿತ ಶೋಷಣೆ ಮಾಡುವ ಮತ್ತು ಅವರ ಮೇಲೆ ನಿರಂತರ ಬಲ ಪ್ರಯೋಗ ಮಾಡುವ ಬ್ರಿಟಿಷ್ ಸಾಮ್ರಾಜ್ಯ ಕೂಡಾ ಬಾಳಲು ಸಾಧ್ಯವಿಲ್ಲ. ೧೯೨೦ರಲ್ಲಿ ಆರಂಭಗೊಂಡ ಹೋರಾಟ, ಅವರನ್ನು ಮುಗಿಸುವ ಹೋರಾಟ ಎಂಬುದನ್ನು ಅರಿಯಲು ಬ್ರಿಟಿಷರಿಗಿದು ಉತ್ತಮ ಸಮಯ.'' ಈ ಲೇಖನ ಹಾಗೂ ಇದಕ್ಕೂ ಮುಂಚಿನ ಎರಡು ಲೇಖನಗಳಿಗಾಗಿ ಗಾಂಧೀಜಿಗೆ ದೇಶದ್ರೋಹದ ಆಪಾದನೆ ಹೊರಿಸಲಾಯಿತು. ಬ್ರೂಮ್‌ಫೀಲ್ಡ್ ಎಂಬ ನ್ಯಾಯಾಧೀಶ ಅವರಿಗೆ ೧೯೨೨ರ ಮಾರ್ಚ್‌ನಲ್ಲಿ ಆರು ವರ್ಷಗಳ ಜೈಲು ಶಿಕ್ಷೆ ವಿಧಿಸಿದ. ಆದರೆ ಆರೋಗ್ಯದ ಹಿನ್ನೆಲೆಯಲ್ಲಿ ೧೯೨೪ರ ಫೆಬ್ರವರಿಯಲ್ಲಿ ಅವರನ್ನು ಬಿಡುಗಡೆ ಮಾಡಲಾಯಿತು. ಆದರೂ ಗಾಂಧೀಜಿ ಆತ್ಮಸ್ಥೈರ್ಯ ಕಳೆದುಕೊಳ್ಳದೆ ಬರಹದ ಮೂಲಕ ತಮ್ಮ ಲೇಖನಿಯನ್ನು ಇನ್ನಷ್ಟು ಹರಿತಗೊಳಿಸಿದರು.

ಶಾಲೆಗಳಲ್ಲಿ ಹಿಂದಿ ಭಾಷೆಯನ್ನು ದ್ವಿತೀಯ ಭಾಷೆಯಾಗಿ ಕಡ್ಡಾಯ ಕಲಿಯಬೇಕೆಂದು ಪ್ರತಿಪಾದಿಸುತ್ತಿದ್ದ ಗಾಂಧೀಜಿ 'ಯಂಗ್ ಇಂಡಿಯಾ' ಪತ್ರಿಕೆಯನ್ನು ಇಂಗ್ಲಿಷ್ ಭಾಷೆಯಲ್ಲಿ ಹೊರತರಲು ಅಸಮಾಧಾನ ವ್ಯಕ್ತಪಡಿಸುತ್ತಿದ್ದರು. ಆದರೆ ದಕ್ಷಿಣ ಭಾರತದಲ್ಲಿ ಹಿಂದಿ ಅಷ್ಟೊಂದು ಜನಪ್ರಿಯವಾಗಿರದಿದ್ದ ಕಾರಣ ಇಂಗ್ಲಿಷ್ ಭಾಷೆಯಲ್ಲಿ ಪತ್ರಿಕೆ ಪ್ರಕಟಿಸಿದರು. ಮೋತಿಲಾಲ್ ನೆಹರೂ ಪ್ರಾರಂಭಿಸಿದ್ದ 'ಇಂಡಿಪೆಂಡೆಂಟ್' ಎಂಬ ಪತ್ರಿಕೆ ಮುಳುಗುವ ಸ್ಥಿತಿಯಲ್ಲಿದ್ದಾಗ ಅದರ ನೆರವಿಗೆ ಬಂದವರು ಗಾಂಧೀಜಿ. ಎಂ. ಆರ್. ಜಯಕರ್ ಎಂಬುವರು ಗಾಂಧೀಜಿಗೆ ನೀಡಿದ ದೇಣಿಗೆಯನ್ನು ಆ ಪತ್ರಿಕೆಗೆ ನೀಡಿದರು. ಅಂಥ ಮನೋಭಾವದ ಗಾಂಧೀಜಿ ೧೯೪೨ರಲ್ಲಿ 'ಹರಿಜನ' ಪತ್ರಿಕೆಯನ್ನು ನಿಲ್ಲಿಸಿದಾಗ, ಅವರ ಕರೆಗೆ ಓಗೊಟ್ಟು ಹಲವು ಪತ್ರಿಕೆಗಳು ತಮ್ಮ ಪ್ರಸರಣವನ್ನು ನಿಲ್ಲಿಸಿದವು.

ದೆಹಲಿಯಲ್ಲಿ ೧೯೪೭ರಲ್ಲಿ ಗಲಭೆ ಉಂಟಾದಾಗ ಪತ್ರಿಕೆಗಳಲ್ಲಿ ದಂಗೆ ಮತ್ತು ಕೋಮು ಗಲಭೆಗಳ ಸಾಧ್ಯತೆಗಳ ಬಗ್ಗೆ ಪರಸ್ಪರ ವಿರೋಧದ ಮತ್ತು ವೈಭವೀಕರಿಸಲ್ಪಟ್ಟ ವರದಿಗಳು ಕಾಣಿಸಿಕೊಂಡವು. ಅದನ್ನು ಕಂಡು ನೊಂದ ಗಾಂಧೀಜಿ ಏಪ್ರಿಲ್ ೧೮, ೧೯೪೭ರ ಪ್ರಾರ್ಥನಾ ಸಭೆಯೊಂದರಲ್ಲಿ ಈ ರೀತಿ ಹೇಳಿದರು : ''ಪತ್ರಕರ್ತ ನಡೆದಾಡುವ ಪ್ಲೇಗ್ ಆಗಿದ್ದಾನೆ. ಪತ್ರಿಕೆಗಳಲ್ಲಿ ಪ್ರಕಟವಾಗುವ ಎಲ್ಲವನ್ನು ದೇವರ ಸತ್ಯವೆಂದು ನೋಡಲಾಗುತ್ತದೆ. ಅದು ಕೆಟ್ಟದ್ದು. ವೈಸರಾಯ್‌ನ ಸ್ಥಾನದಲ್ಲಿ ಒಂದು ದಿನಕ್ಕೆ ನನ್ನನ್ನು ಸರ್ವಾಧಿಕಾರಿಯನ್ನಾಗಿ ನೇಮಕ ಮಾಡಿದರೆ, ಬಹುಶಃ 'ಹರಿಜನ'ದ ಹೊರತಾಗಿ ಎಲ್ಲಾ ಪತ್ರಿಕೆಗಳನ್ನೂ ನಿಲ್ಲಿಸುತ್ತೇನೆ.'' ಇತ್ತೀಚಿನ ಗೋಧ್ರಾ ಘಟನೆ ನೋಡಿದರೆ, ಗಾಂಧೀಜಿ ಮಾತು ಇಂದೂ ಪ್ರಸ್ತುತ ಅನ್ನಿಸುತ್ತದೆ.

**ಸತೀಶ್‌ಕುಮಾರ್ ಅಂಡಿಂಜೆ**
ಪತ್ರಿಕೋದ್ಯಮ ಉಪನ್ಯಾಸಕರು, ಎಂ.ಪಿ.ಎಂ. ಕಾಲೇಜು, ವಿದ್ಯಾನಗರ, ಮಣಿಪಾಲ-೫೭೬ ೧೧೯

# ಗುಜರಾತಿನಲ್ಲಿ ಗಾಂಧೀ ಆತ್ಮ

ಹಣ್ಣು ಹಣ್ಣು ಮುದುಕನು
ನನ್ನ ಗಾಂಧೀ ತಾತನು
ಇಂದಿಗೆ ನೂರಿಪ್ಪತ್ತು ದಾಟಿಹನು
ಇಲ್ಲ ಅವನ ದೇಹವು
ಬರಿ ಶುಭ್ರ ಬಿಳಿಯ ಆತ್ಮವು ॥

ಕೋಮು ಗಲಭೆ ವಿಷಯ ತಿಳಿದು
ಸ್ವರ್ಗದಿಂದಿಳಿದು ಬಂದನು
ಕೋಲು ಒಂದು ಕೈಯಲಿ
ಲಾಟೀನು ಇನ್ನೊಂದು ಕೈಯಲಿ
ದೇಹವಿಲ್ಲ ಬರಿಯ ಬೆಳಕಿನಾಕಾರವು ॥

ದಟ್ಟ ಕತ್ತಲ ರಾತ್ರಿಯು
ಎಲ್ಲೆಡೆ ಬೆಂಕಿ ಮುಗಿಲು ಮುಟ್ಟುವ ಹೊಗೆಯು
ಮಕ್ಕಳ ಅಳು ವೃದ್ಧರ ಕೂಗು ಎತ್ತಲು
ಬೆಂಕಿಗೆ ಉರಿಯುವ ಮನೆಗಳ ಸಾಲು
ಬೊಗಳುವ ನಾಯಿ ಕಿರುಚುವ ಗೂಬೆ ॥

ಅಲ್ಲೆಲ್ಲೋ ಹೆಣ್ಣೊಂದು ಕೂಗಿ ಕೂಗಿ ಅಳುತಿಹಳು
ಗಾಂಧೀ ತೆರಳಿ, ''ಯಾರು ನೀನು? ಏನಾಗಿದೆ ನಿನಗೆ?''
''ನನ್ನ ಗಂಡ ಮಕ್ಕಳನು ಸುಟ್ಟರು, ನನ್ನ ಹೀಗೇ ಬಿಟ್ಟರು !''
''ನೀನಾದರೂ ಸೌಖ್ಯವೇ ತಾಯಿ?''
''ಎಲ್ಲಿಯ ಸೌಖ್ಯ ತಂದೆ !
ನನ್ನ ಮಾನ ಹರಣವಾಯಿತು, ಪ್ರಾಣ ಮಾತ್ರ ಉಳಿದಿದೆ !
ಬದುಕಲೊಲ್ಲೆ ನಾನಿನ್ನು, ಹಿಡಿ, ಹೊಡಿ, ನನ್ನ ಕೊಲ್ಲು''

ಗಾಂಧೀ ಮುಂದೆ ನಡೆದರು
ಅಳುವ ಹುಡುಗನ ಕಂಡರು
''ಏನಾಯ್ತು ? ಏಕಳುವೆ ?'' ಎಂದರು
''ನನ್ನ ತಂದೆ ತಾಯ ಕೊಂದರು''
'ಅಣ್ಣ ಅಕ್ಕರೆಲ್ಲರು'
''ನೆತ್ತರಲ್ಲಿ ಸತ್ತು ಬಿದ್ದರು
ಎಲ್ಲರೂ ಸತ್ತು ಹೋಗಿ
ನಾನೇ ಏಕೆ ಉಳಿದೆನೊ!
ಇದನು ನಾನು ಅರಿಯೆನು''

ಸಿಟ್ಟು ಬಂದು ಗಾಂಧೀ ತಾತ
ಕೂಗಿದರು, ''ಯಾರಲ್ಲಿ ?''



ಓರ್ವ ಗಡ್ಡಧಾರಿ ಅಳುತ ಬಂದು
ನಾನು ಮುಸಲ್ಮಾನನೆಂದನು
ಇನ್ನೋರ್ವನದೂ ಅದೇ ಉತ್ತರ
ಮತ್ತೋರ್ವ ಹಾಗೇ ನುಡಿದನು ॥

ಮುಂದೆ ಹೋದರು ಗಾಂಧೀ
ಮತ್ತೆ ಕೂಗಿದರು, ''ಯಾರಲ್ಲಿ ?''
ಓರ್ವ ನಾಮಧಾರಿ ಅಳುತ ಬಂದು
ನಾನು ಹಿಂದೂ ಎಂದನು
ಇನ್ನೋರ್ವನದೂ ಅದೇ ಉತ್ತರ
ಮತ್ತೋರ್ವ ಹಾಗೇ ನುಡಿದನು ॥

ಗಾಂಧೀ ಆತ್ಮ ನೊಂದಿತು
ದುಃಖದಿಂದ ಮುದುಡಿತು
'ಹಿಂದು ಮುಸ್ಲಿಂ' ಎಲ್ಲ ಇಹರು
''ಮಾನವರೆಲ್ಲಿ? ಮಾನವರೆಲ್ಲಿ ?''

ಲಾಟೀನಿನ ಬೆಳಕು ಮಂದ ಮಂದವಾಯಿತು
ಗಾಂಧೀ ಆತ್ಮ ಬೆಳಕು ಕಾಣದಾಯಿತು

ಈಶ್ವರ ಅಲ್ಲಾ ತೇರೆ ನಾಮ್
ಸಬಕೋ ಸನ್ಮತಿ ದೇ ಭಗವಾನ್
ಹೇ ರಾಮ್!

**ಜೆ. ಕಲೀಂಬಾಷ**
ಸೋಫಿಯಾ ಸದನ, ೩ನೇ ಮೇನ್, ೩ನೇ ಕ್ರಾಸ್
'ಬಿ' – ಬ್ಲಾಕ್, ವಿದ್ಯಾನಗರ
ಹರಿಹರ – ೫೭೭೬೦೧, ದಾವಣಗೆರೆ ಜಿಲ್ಲೆ

# ಕಾಂ|| ಪಂಪಾಪತಿಯವರ ಹೃದಯ ಶ್ರೀಮಂತಿಕೆ



ಎ. ಆರ್. ಆನಂದತೀರ್ಥ

**ಹುಸೇನಮ್ಮಳ ಮಗಳ ಪ್ರಾಣ ಉಳಿಸಿದ ಪಂಪಾಪತಿಯವರ ಹೃದಯ ಶ್ರೀಮಂತಿಕೆ**

೧೯೮೨ರಲ್ಲಿ ಹರಿಹರ ಆರ್. ಸಿ. ಇಂಡಸ್ಟ್ರೀಸ್ ಮಾಲೀಕ ವರ್ಗಕ್ಕೆ ಕಾರ್ಮಿಕರ ಬೇಡಿಕೆಗಳ ಪತ್ರ ಸಲ್ಲಿಸಲಾಗಿತ್ತು. ಸಂಧಾನ ಫಲಪ್ರದವಾಗಲಿಲ್ಲ. ಪರ್ಯಾಯವಿಲ್ಲದೆ ಕಾರ್ಮಿಕರು ಚಳುವಳಿ ಹೂಡಲು ಸಿದ್ಧತೆ ನಡೆಸಿದ್ದರು. ಅಂದು ಸಂಜೆ ೬ ಗಂಟೆಯ ಸಭೆಗೆ ಹಾಜರಾಗಿ ಮಾರ್ಗದರ್ಶನ ನೀಡಲು ಪಂಪಾಪತಿಯವರಿಗೆ ಆಹ್ವಾನಿಸಲಾಯಿತು. ದಾವಣಗೆರೆ ಸಿ.ಪಿ.ಐ. ಕಛೇರಿಯಿಂದ ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ ಗಣೇಶ್ ಟೆಕ್ಸ್‌ಟೈಲ್ ಮಿಲ್ ಯೂನಿಯನ್ನಿನ ಸಕ್ರಿಯ ಸದಸ್ಯೆ ಹುಸೇನಮ್ಮ ತನ್ನ ಗರ್ಭಿಣಿ ಮಗಳ ಪ್ರಾಣ ಉಳಿಸುವಂತೆ ದುಃಖಿಸುತ್ತಾ ಕೈ ಮುಗಿದು ನಿಂತಳು.

ಸಮಯ ಆಗಲೇ ೬ ಗಂಟೆ ಮೀರಿತ್ತು. ಆಕೆಯ ಮಗಳು ತುಂಬು ಗರ್ಭಿಣಿ, ಹೆರಿಗೆ ನೋವಿನಿಂದ ನರಳುತ್ತಿದ್ದಾಳೆ. ತನ್ನ ಕೈಯಲ್ಲಿ ಬಿಡಿಗಾಸಿಲ್ಲ, ಚಿಗಟೇರಿ ಜನರಲ್ ಆಸ್ಪತ್ರೆಗೆ ದಾಖಲಿಸಿಕೊಂಡು ಸರಿಯಾದ ಚಿಕಿತ್ಸೆ ನೀಡಿ ಮಗಳ ಪ್ರಾಣ ಉಳಿಸಿಕೊಡುವಂತೆ ವೈದ್ಯರಿಗೆ ಹೇಳಬೇಕೆಂದು ಕಾರಿಗೆ ಅಡ್ಡಲಾಗಿ ನಿಂತು ತನ್ನ ಕಷ್ಟವನ್ನು ವಿವರಿಸಹತ್ತಿದಳು. ಅಂದು ಕಾರ್ಮಿಕರ ಬೇಡಿಕೆಗಳ ಬಗ್ಗೆ ಸಂಧಾನಕ್ಕೆ ಹೋಗದಿದ್ದರೆ ಕಾರ್ಮಿಕರು ಬೇಸರ ಪಟ್ಟುಕೊಳ್ಳುತ್ತಾರೆ, ಇತ್ತ ಹುಸೇನಮ್ಮನ ಬೇಡಿಕೆಗೆ ಓಗೊಡದಿದ್ದರೆ ಆಕೆಗೂ ಬೇಸರ. ಇಂಥ ಸಂದಿಗ್ಧ ಪರಿಸ್ಥಿತಿಯನ್ನು ನಿಭಾಯಿಸದೆ ಗತ್ಯಂತರವಿಲ್ಲವೆಂದು ಯೋಚಿಸಿ, ಸಮಯ ಮೀರಿದ್ದರಿಂದ ''ನನಗಾಗಿ ಹರಿಹರದ ಕಾರ್ಮಿಕರು ಕಾಯುತ್ತಿರುತ್ತಾರೆ. ಹರಿಹರಕ್ಕೆ ಹೋಗಿ ತುರ್ತಾಗಿ ಬಂದುಬಿಡುತ್ತೇನೆ'', ಎಂದು ಹುಸೇನಮ್ಮನನ್ನು ಸಂತೈಸಿ ಹರಿಹರಕ್ಕೆ ಹೊರಟ ಪಂಪಾಪತಿಯವರು ದಾವಣಗೆರೆಗೆ ಮರಳಿ ಬರುವ ಹೊತ್ತಿಗೆ ರಾತ್ರಿ ೧೧ ಗಂಟೆ. ಆ ವೇಳೆಗಾಗಲೇ ಹುಸೇನಮ್ಮ ತನ್ನ ಮಗಳನ್ನು ಸಿ.ಜಿ. ಆಸ್ಪತ್ರೆಗೆ ದಾಖಲು ಮಾಡಿ ಹೆರಿಗೆ ತುಂಬಾ ಕಷ್ಟವಿದೆ, ಎರಡು ಬಾಟಲ್ ರಕ್ತ ಬೇಕು ಎಂದು ವೈದ್ಯರು ತಿಳಿಸಿದ್ದಕ್ಕೆ ಹುಸೇನಮ್ಮ ಪಂಪಾಪತಿಯವರ ಬರುವಿಕೆಗಾಗಿ ಕಛೇರಿ ಮುಂದೆ ಕಾದು ಕುಳಿತಿದ್ದಳು. ಪಂಪಾಪತಿಯವರು ಇನ್ನೂ ಬರಲಿಲ್ಲವೇಕೆಂದು ಕಾಟನ್ ಮಿಲ್ ಕಾರ್ಮಿಕರ ಒಂದು ದೊಡ್ಡ ಗುಂಪು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಪಂಪಾಪತಿಯವರನ್ನು ಎದುರು ನೋಡುತ್ತ ಒಂದು ಕಡೆ ಜಮಾಯಿಸಿದ್ದರು. ಪಂಪಾಪತಿಯವರು ಬಂದೊಡನೆ ಹುಸೇನಮ್ಮನ ಸಮಸ್ಯೆ ತಿಳಿದು ತಾವೇ ಓಡಿಸುತ್ತಿದ್ದ ಕೆಂಪು ಅಂಬಾಸಡರ್ ಕಾರಿನಲ್ಲಿ ಸಿದ್ದೇಶ್ವರ ಮಿಲ್ ಒಳಗಡೆ ಧಾವಿಸಿದರು. ಹುಸೇನಮ್ಮ ತನ್ನ ಮಗಳ ಹೆರಿಗೆಯ ಸಂಕಷ್ಟದಲ್ಲಿದ್ದು ರಕ್ತದ ವ್ಯವಸ್ಥೆ ಮಾಡಿಕೊಡುವಂತೆ ದುಂಬಾಲುಬಿದ್ದರೂ ಕೂಡ ಪಂಪಣ್ಣನವರು ಆ ಹೆಣ್ಣುಮಗಳ ಕಡೆ ಗಮನ ಕೊಡುತ್ತಿಲ್ಲವಲ್ಲ ಎಂಬ ಚಿಂತನೆ ನನಗೆ. ಶ್ರೀ ಸಿದ್ದೇಶ್ವರ ಮಿಲ್‌ನ ಸುಮಾರು ಹತ್ತು ಜನ ಕಾರ್ಮಿಕರನ್ನು ಪಂಪಣ್ಣನವರು ತಮ್ಮ ಕಾರಿನಲ್ಲಿ ಕೂಡಿಸಿಕೊಂಡು ಸಿ. ಜಿ. ಆಸ್ಪತ್ರೆಗೆ ಶರವೇಗದಲ್ಲಿ ಹೊರಟರು. ನಂತರ ರಕ್ತದ ಬೇಡಿಕೆ ಪೂರೈಸಲು ತಯಾರಿ. ಸಾಲಿನಲ್ಲಿ ಅವರೇ ಮೊದಲು. ಅನಂತರ ರಕ್ತ ಕೊಡಲು ಎಲ್ಲರೂ ಮುಂದಾಗುವಂತೆ ಆದೇಶಿಸಿದರು. ನನಗೆ ಶೇ. ೩೦ರಷ್ಟು ರಕ್ತದ ಕೊರತೆಯಿಂದೆಯೆಂದು ನನ್ನನ್ನು ಹೊರತುಪಡಿಸಿ ಮಿಕ್ಕಿವರೆಲ್ಲರ ರಕ್ತ ತೆಗೆದುಕೊಂಡು ಆ ಹೆಣ್ಣು ಮಗಳಿಗೆ ಕೊಡಬೇಕಾದ 'ರಕ್ತದ ಗ್ರೂಪಿ'ಗೆ ಸರಿಹೊಂದುವಂತೆ ಪರೀಕ್ಷಿಸಲಾಯಿತು. ಪಂಪಾಪತಿಯವರ ರಕ್ತವು ಸರಿಹೊಂದದ ಕಾರಣ 'ಓ ನೆಗಟಿವ್' ರಕ್ತವನ್ನು ಕಾರ್ಮಿಕರಿಂದ ಸಂಗ್ರಹಿಸಲಾಯಿತು. ರಕ್ತ ಬೇಕಿರುವುದು ಎರಡು ಬಾಟಲ್. ಆದರೆ ಈ ವೈದ್ಯರುಗಳು ಬಡ ಕಾರ್ಮಿಕರಿಂದ ನಾಲ್ಕು ಬಾಟಲ್ ರಕ್ತ ಸಂಗ್ರಹಿಸಿಕೊಂಡರಲ್ಲ, ಇವರೇನು ಅದನ್ನು ಹಣಕ್ಕೆ ಮಾರಿಕೊಳ್ಳಬಹುದೆಂಬ ಕಾರ್ಮಿಕರ ಮೇಲಿನ ಅನುಕಂಪದಿಂದ ಸಹಜವಾಗಿ ಸಂಶಯ ಮೂಡಿ ಸಿಡಿಮಿಡಿಗೊಂಡ ನನಗೆ ಪಂಪಾಪತಿಯವರು ''ಯಾವುದಾದರೂ ಒಂದು ಜೀವವಾದರೂ ಉಳಿಯುತ್ತದೆ ಬಿಡಿ'' ಎಂದು ವಿವರಿಸಿದರು. ವಿಚಿತ್ರವೆಂದರೆ ಅದೇ ಸಮಯಕ್ಕೆ ಚಿತ್ರದುರ್ಗದ ಆಸ್ಪತ್ರೆಯಲ್ಲಿ ಸಾವು-ಬದುಕಿನ ಮಧ್ಯೆ ಹೋರಾಟ ನಡೆಸಿದ್ದ ರೋಗಿಯೊಬ್ಬನಿಗೆ ಕೂಡಲೇ ಎರಡು ಬಾಟಲ್ ರಕ್ತ ಒದಗಿಸಿ ಪ್ರಾಣ ಉಳಿಸುವಂತೆ ವೈದ್ಯಾಧಿಕಾರಿಗಳಿಗೆ ದೂರವಾಣಿ ಮೂಲಕ ಸುದ್ದಿ ಬಂದಿತ್ತು. ಕೂಡಲೆ ಚಿತ್ರದುರ್ಗ ಆಸ್ಪತ್ರೆಗೆ ತುರ್ತಾಗಿ ಈ ಎರಡು ಬಾಟಲ್ ರಕ್ತವನ್ನು ರವಾನಿಸಲಾಯಿತು. ಏಕಕಾಲದಲ್ಲಿ ಇಬ್ಬರ ಪ್ರಾಣ ಉಳಿಸಿ ಮಾನವೀಯತೆ ಮೆರೆದ ಪಂಪಾಪತಿಯವರ ಹೃದಯ ಶ್ರೀಮಂತಿಕೆ ಎಂಥದ್ದು ? ಪಂಪಾಪತಿಯವರು ಎಷ್ಟೊಂದು ಎತ್ತರದ ವ್ಯಕ್ತಿ! ಅವರ ಮುಂದೆ ನಾನು ಎಷ್ಟು ಸಣ್ಣವನಾಗಿಬಿಟ್ಟೆ.

**ಪೊಲೀಸ್ ಮಹಾನಿರ್ದೇಶಕರಿಗೆ ಪೊಲೀಸ್ ಅಧಿಕಾರಿಯ ವರ್ಗಾವಣೆಯ ಸಂಬಂಧದಲ್ಲಿ ಶಾಸಕ ಭವನದಿಂದ ಗುಡುಗಿದ್ದು.**

ದಾವಣಗೆರೆಯ ಸಬ್ ಇನ್ಸ್‌ಪೆಕ್ಟರ್ ತಿಮ್ಮಶೆಟ್ಟಿಯವರನ್ನು ಬೆಂಗಳೂರಿಗೆ ವರ್ಗಾಯಿಸಲಾಗಿತ್ತು. ಇವರ ಹತ್ತಿರದ ಸಂಬಂಧಿಕರು ಬೆಂಗಳೂರಿನಲ್ಲಿ ಸರ್ಕಲ್

*ಕರ್ನಾಟಕದಲ್ಲಿನ ಭಾರತ ಕಮ್ಯೂನಿಸ್ಟ್ ಪಕ್ಷದ ಹಿರಿಯ ನಾಯಕರಾಗಿದ್ದ ಗೆಳೆಯ ಪಂಪಾಪತಿಯವರು ಇತ್ತೀಚೆಗೆ ದಾವಣಗೆರೆಯಲ್ಲಿ ಕಣ್ಮರೆಯಾದರು. ಇಡೀ ರಾಜ್ಯದಲ್ಲಿನ ಕಮ್ಯೂನಿಸ್ಟ್ ಚಳುವಳಿಗೆ, ಕಾರ್ಮಿಕ ಹೋರಾಟಗಳಿಗೆ ಪಂಪಾಪತಿಯವರು ಸ್ಫೂರ್ತಿಯ ಚಿಲುಮೆಯಾಗಿದ್ದರು.*

*''ಕರ್ನಾಟಕದ ಮ್ಯಾಂಚೆಸ್ಟರ್'' ಎಂದೇ ಪ್ರಸಿದ್ಧಿಯಾಗಿರುವ ದಾವಣಗೆರೆಯ ಕಾರ್ಮಿಕ ವರ್ಗದ ಮತ್ತು ದೀನದಲಿತರ ಮನೆಮನೆಗಳು, ರಸ್ತೆಗಳು, ಸಾಲುಮರಗಳು ಪಂಪಾಪತಿಯವರನ್ನು ಪರಿಚಯಿಸುತ್ತವೆ.*

*ಬೆಂಗಳೂರಿನಿಂದ ಸಿ.ಪಿ.ಐ ಪಕ್ಷದ ರಾಜ್ಯ ಮಂಡಳಿ ಕಾರ್ಮಿಕ ಚಳುವಳಿಯನ್ನು ಪ್ರಬಲಗೊಳಿಸುವ ಸಲುವಾಗಿ ನನ್ನನ್ನು ದಾವಣಗೆರೆಗೆ ತೆರಳುವಂತೆ ಆದೇಶಿಸಿತು. ನಾನು ೧೯೭೨ರ ಜನವರಿ ತಿಂಗಳಿನಲ್ಲಿ ದಾವಣಗೆರೆಗೆ ಬಂದು ಪಂಪಾಪತಿಯವರೊಡನೆ ಸಮಾಲೋಚಿಸಿ ಕಾರ್ಮಿಕರನ್ನು ಸಂಘಟಿಸುವ ಕಾರ್ಯಚಟುವಟಿಕೆ ಪ್ರಾರಂಭಿಸಿದೆ. ಅಂದು ಮಾಲೀಕವರ್ಗ, ಗೂಂಡಾಗಳು ಮತ್ತು ಅವರ ಪರವಾಗಿದ್ದ ಸರ್ಕಾರ ಕಮ್ಯೂನಿಸ್ಟರನ್ನು ವ್ಯವಸ್ಥಿತವಾಗಿ ಸದೆಬಡಿಯುವ ಸಂಚು, ಹುನ್ನಾರಗಳನ್ನು ನಡೆಸಿದ್ದವು. ಅದನ್ನು ಸವಾಲಾಗಿ ಸ್ವೀಕರಿಸಿ ಸೆರೆವಾಸ, ಚಿತ್ರಹಿಂಸೆ, ಅಸಂಖ್ಯಾತ ಕಿರುಕುಳಗಳನ್ನು ಸಮರ್ಥವಾಗಿ ಎದುರಿಸುತ್ತ ದಿಟ್ಟತನ, ಸಂಘಟನ ಸಾಮರ್ಥ್ಯದೊಂದಿಗೆ ಪಂಪಾಪತಿಯವರು ಕಾರ್ಮಿಕ ವಿರೋಧಿ ಶಕ್ತಿಗಳಿಗೆ ಸಿಂಹಸ್ವಪ್ನವಾಗಿದ್ದರು. ಸಾರ್ವಜನಿಕ ಜೀವನದಲ್ಲಿದ್ದಂತೆ ತಮ್ಮ ವೈಯಕ್ತಿಕ ಜೀವನದಲ್ಲಿಯೂ ಪ್ರಗತಿಪರ ಚಿಂತನೆಗಳಲ್ಲಿ ನಿಷ್ಠೆಯಿದ್ದ ಬದುಕು ಅವರದು. ತನ್ನ ಸುತ್ತಲಿನ ಜಗತ್ತಿಗೆ, ಸಾಮಾಜಿಕ ಜೀವನಕ್ಕೆ, ವಿಚಾರಗಳಿಗೆ ಅತಿ ಸೂಕ್ಷ್ಮವಾಗಿ ಸ್ಪಂದಿಸಿದ ಆಳವಾದ ಮಾನವೀಯತೆ ಅಂತಃಕರಣ, ಮಾನವಜೀವಿತದ ಸಾರ್ಥಕತೆಯ ಅಪರೂಪದ ವ್ಯಕ್ತಿತ್ವ ಅವರದು. ಇಂತಹ ಅಸಾಧಾರಣ ವ್ಯಕ್ತಿಯ ಬದುಕಿನ ನೆನಪುಗಳನ್ನು ನೀಡುವುದರೊಂದಿಗೆ ಮಹಾನ್ ಕ್ರಾಂತಿಯೋಧ ಪಂಪಣ್ಣನವರನ್ನು ಸ್ಮರಿಸುವುದು ನನ್ನ ಕರ್ತವ್ಯ. ಈ ಕೆಳಕಂಡ ಒಂದೊಂದು ಘಟನೆಯೂ ನನಗೆ ಮರೆಯಲಾಗದ ಅನುಭವಗಳನ್ನು ನೀಡಿದೆ.*

*- ಲೇಖಕ*

ಇನ್ಸ್‌ಪೆಕ್ಟರ್ ಆಗಿದ್ದರು. ಜೊತೆಗೆ ಆಗಿನ ಮುಖ್ಯಮಂತ್ರಿ ಜೆ. ಎಚ್. ಪಟೇಲರ ಸಹಪಾಠಿ. ಸರಿ, ಈತನಲ್ಲಿ ವರ್ಗಾವಣೆ ರದ್ದುಪಡಿಸುವುದಕ್ಕೆ ತಿಮ್ಮಶೆಟ್ಟಿ ಅವರ ಅಹವಾಲು. "ನಿಮ್ಮ ವರ್ಗಾವಣೆ ರದ್ದಾಗಬೇಕಾದರೆ ಕಮಿಷನರ್ ಅವರಿಗೆ ಹತ್ತು ಸಾವಿರ ರೂಪಾಯಿ ಕೊಟ್ಟು ಅವರ ಕೈ ಬಿಸಿ ಮಾಡಿ ಕೆಲಸ ಆಗುತ್ತೆ" ಎಂಬ ಸರ್ಕಲ್ ಇನ್ಸ್‌ಪೆಕ್ಟರ್ ಮಾತಿನಿಂದ ಪಾಪ ತಿಮ್ಮಶೆಟ್ಟರು ದಿಗ್ಭ್ರಾಂತರಾದರು. ವಿಧಿಯಿಲ್ಲದೆ ಹಣ ಜೊತೆಮಾಡಿ, ಹೇಗೂ ಬೆಂಗಳೂರಿಗೆ ಬಂದಿರುವಾಗ ಶಾಸಕ ಪಂಪಾಪತಿಯವರನ್ನು ಭೇಟಿ ಮಾಡಿ ಇದ್ದ ವಿಷಯ ತಿಳಿಸಿ ಬರೋಣವೆಂದು ಶಾಸಕ ಭವನದತ್ತ ಕಾಲು ಹಾಕಿದರು. ಅದೇ ಗಳಿಗೆಯಲ್ಲಿ, ಪಂಪಾಪತಿಯವರು ಹರಿಹರದ ಬಿರ್ಲಾ ಫ್ಯಾಕ್ಟರಿ ಕಾರ್ಮಿಕನೊಬ್ಬ, ತನ್ನ ಪತ್ನಿ ಹರಿಹರ ಹತ್ತಿರದ ರಾಜನಹಳ್ಳಿಯಲ್ಲಿ ಶಿಕ್ಷಕಿಯಾಗಿದ್ದು ಹರಿಹರಕ್ಕೆ ವರ್ಗಾವಣೆ ಮಾಡಿಸಿಕೊಡಬೇಕೆಂದು ಬಂದಿದ್ದ ಕಾರ್ಮಿಕನೊಂದಿಗೆ, "ಎಲ್ಲರೂ ಹಳ್ಳಿಗಳನ್ನು ಬಿಟ್ಟು ನಗರಗಳಿಗೆ ವರ್ಗಾವಣೆ ಮಾಡಿಸಿಕೊಂಡರೆ ಹಳ್ಳಿಗಳ ಪಾಡೇನು?" ಎಂದು ಎತ್ತರದ ಧ್ವನಿಯಲ್ಲಿ ಬೈದು ಬುದ್ಧಿ ಮಾತು ಹೇಳುತ್ತಾ ಹಳ್ಳಿಯಲ್ಲಿಯೇ ವೃತ್ತಿಯನ್ನು ಮುಂದುವರೆಸುವಂತೆ ಗದರಿಸುತ್ತಿದ್ದರು. ಇದನ್ನು ಹೊರಬಾಗಿಲಿನಲ್ಲೇ ನಿಂತು ಆಲಿಸಿದ ತಿಮ್ಮಶೆಟ್ಟಿಯವರಿಗೆ ತನ್ನ ಸಮಸ್ಯೆಗೂ ಇಂಥದ್ದೇ ಪ್ರತಿಕ್ರಿಯೆ ಸಿಗಬಹುದೆಂಬ ಗಡಿಬಿಡಿ ಗೊಂದಲಗಳೊಂದಿಗೆ ಹೇಗೋ ಧೈರ್ಯಮಾಡಿ ಒಳ ಪ್ರವೇಶಿಸಿದರು. ಇವರ ಮುಖ ಕಂಡ ತಕ್ಷಣ ಪಂಪನಣ್ಣನವರು ಸನಿಹಕ್ಕೆ ಕರೆದು ಕೂರಿಸಿಕೊಂಡು ಪ್ರೀತಿಯಿಂದ ಮೈದಡವಿದರು. ಉಪಹಾರ, ಟೀ ತರಿಸಿ ಯೋಗಕ್ಷೇಮ ವಿಚಾರಿಸಿದರು. ತಿಮ್ಮಶೆಟ್ಟಿಯವರು ಸಂಕೋಚಪಟ್ಟುಕೊಂಡು ತನ್ನ ಸಮಸ್ಯೆಯನ್ನು ಹೇಳಲು ಹಿಂಜರಿದಾಗ ಪಂಪಾಪತಿಯವರೇ "ನನ್ನಿಂದೇನಾದರೂ ಸಹಾಯ ಬಯಸುವುದಾದರೆ ಖಂಡಿತ ಪ್ರಯತ್ನಿಸುತ್ತೇನೆ, ಅದೇನು ಹೇಳಿ" ಎಂದು ಕೇಳಿದರು. ತಿಮ್ಮಶೆಟ್ಟಿಯವರು ವರ್ಗಾವಣೆಯಾಗಿರುವ ಬಗ್ಗೆ ತಿಳಿಸಿ, "ನನ್ನ ಮಕ್ಕಳ ವ್ಯಾಸಂಗದ ದೃಷ್ಟಿಯಿಂದ ತೊಂದರೆಯಾಗುತ್ತದೆ. ವರ್ಗಾವಣೆ ರದ್ದಾಗಲೇಬೇಕೆಂದೇನಿಲ್ಲ", ಎಂದಾಗ ಪಂಪಣ್ಣನವರು ತಕ್ಷಣವೇ ಪೊಲೀಸ್ ಉನ್ನತಾಧಿಕಾರಿ ಎಸ್. ವಿ. ಬರ್ಮನ್ ಅವರಿಗೆ ಫೋನಾಯಿಸಿದರು - "ತಿಮ್ಮಶೆಟ್ಟಿಯವರು ದಕ್ಷ-ಪ್ರಾಮಾಣಿಕ ಅಧಿಕಾರಿ. ಈತನ ವರ್ಗಾವಣೆಯನ್ನು ತಕ್ಷಣವೇ ರದ್ದುಗೊಳಿಸದಿದ್ದರೆ ನಾನೇ ನಿಮ್ಮ ಕಛೇರಿಯ ಮುಂದೆ ಧರಣಿ ನಡೆಸಬೇಕಾಗುತ್ತದೆ." ಎಂದು ಗುಡುಗಿದರು.

ಇದನ್ನು ವಿಪರ್ಯಾಸವೆನ್ನಬೇಕೋ ಏನೋ. ಪಂಪಾಪತಿಯವರ ಹೃದಯ ಶ್ರೀಮಂತಿಕೆಯನ್ನು ಮಾತ್ರ ಮೆಚ್ಚಬೇಕು. ಏಕೆಂದರೆ, ಇದೇ ಪಂಪಾಪತಿಯವರು ಅನೇಕ ಹೋರಾಟಗಳಲ್ಲಿ ಪೊಲೀಸರಿಂದ ಅಮಾನುಷ ದಾಳಿಗೊಳಪಟ್ಟವರು. ಪೊಲೀಸರ ಲಾಠಿ ಪ್ರಹಾರ ಮಾಮೂಲು. ಒಮ್ಮೆ ಅವರ ಬಲಗಾಲು ಮುರಿಯುವಂತೆ ಥಳಿಸಿದ್ದೂ ಉಂಟು. ನಡೆಯಲಿಕ್ಕೂ ನಿಶ್ಶಕ್ತಿಯಾಗಿತ್ತು. ಅದರಿಂದಾಗಿಯೇ ಅವರು ನಡೆಯುವಾಗ ಕುಂಟುತಿದ್ದರು. ಏರೋಪ್ಲೇನ್ ಏರಿಸಿ ಪೊಲೀಸರು ಹಿಂಸಿಸಿದ್ದರೂ ಸಹ ಅವರಲ್ಲಿ ಅದೇ ಪೊಲೀಸ್ ಇಲಾಖೆಯ ನೌಕರನೊಬ್ಬನ ಬಗ್ಗೆ ಮಾನವೀಯ ಅಂತಃಕರಣ ತುಂಬಿತ್ತು. ಇದು ಅವರ ಉನ್ನತ ವ್ಯಕ್ತಿತ್ವದ ಹೆಗ್ಗುರುತಲ್ಲದೆ ಮತ್ತೇನು?

**ಬಾತಿ ರೈಲ್ವೆ ಗೇಟ್‌ನ ಬಳಿ ಪ್ರಾಯದ ಹುಡುಗನ ಜೀವ ಉಳಿಸಿದ್ದು**

ನವೆಂಬರ್ ೧೯೮೮ರಲ್ಲಿ ರಾಣೆಬೆನ್ನೂರು ತಾಲ್ಲೂಕ್ ಕರೂರಿಗೆ ರಾಮ್‌ಕೋ - ಇಂಡಸ್ಟ್ರೀಸ್ ಕಾರ್ಮಿಕರ ಬೇಡಿಕೆಗಳ ಬಗ್ಗೆ ಸಂಧಾನಕ್ಕೆಂದು ನಾನು ಮತ್ತು ಪಂಪಾಪತಿಯವರು ಹೊರಟಿದ್ದೆವು. ಅವರೇ ಓಡಿಸುತ್ತಿದ್ದ ಕೆಂಪು ಕಾರು ಬಾತಿ ರೈಲ್ವೇಗೇಟ್ ಸಮೀಪಿಸುತ್ತಿದ್ದಂತೆ ಹರಿಹರದ ಕಡೆಯಿಂದ ಬರುತ್ತಿದ್ದ ಕೆ. ಎಸ್. ಆರ್.ಟಿ.ಸಿ. ಬಸ್ಸಿಗೆ ದಾವಣಗೆರೆ ಕಡೆಯಿಂದ ಸರಕು ತುಂಬಿದ ಲಾರಿ ಡಿಕ್ಕಿ ಹೊಡೆಯಿತು. ಲಾರಿ ಚಾಲಕನ ಪಕ್ಕದಲ್ಲಿ ಕುಳಿತಿದ್ದ ಲಾರಿ ಮಾಲೀಕನ ಮಗನ ತಲೆಗೆ ಮಾರಣಾಂತಿಕ ಪೆಟ್ಟು ಬಿದ್ದು ರಕ್ತಸ್ರಾವದಿಂದ ಅವನು ಸಾವು - ಬದುಕಿನ ಮಧ್ಯೆ ಹೋರಾಟ ನಡೆಸುತ್ತಿದ್ದ. ಅಪಘಾತಕ್ಕೀಡಾಗಿ ರಕ್ತದ ಮಡುವಿನಲ್ಲಿ ಬಿದ್ದಿದ್ದ ಈ ಪ್ರಾಯದ ಹುಡುಗನನ್ನು ತಕ್ಷಣವೇ ಪಂಪಾಪತಿಯವರು ತಮ್ಮ ಕಾರಿನಲ್ಲಿ ಎತ್ತಿಹಾಕಿಕೊಂಡು ಸಿ. ಜಿ. ಆಸ್ಪತ್ರೆಗೆ ಕೊಂಡೊಯ್ದು ತುರ್ತು ಚಿಕಿತ್ಸೆ ಕೊಡಿಸಿ ಸಾವಿನಂಚಿನಲ್ಲಿದ್ದ ಯುವಕನನ್ನು ಉಳಿಸಿದರು. ನಂತರ ಅವನ ಸ್ವಂತ ಊರಾದ ಹಾವೇರಿಗೆ ತಮ್ಮ ಕಾರಿನಲ್ಲಿಯೇ ಕರೆದುಕೊಂಡು ಹೋಗಿ ಅಲ್ಲಿನ ಪೆಟ್ರೋಲ್ ಬಂಕ್ ಮಾಲೀಕ ಆ ಹುಡುಗನ ತಂದೆಯವರ ವಶಕ್ಕೆ ನೀಡಿದಾಗ ಆತ "ನನ್ನ ಒಬ್ಬನೇ ಮಗನ ಪ್ರಾಣ ಉಳಿಸಿ ಜೀವದಾನ ಮಾಡಿದ್ದೀರಿ" ಎಂದು ತನ್ನ ಕೃತಜ್ಞತೆಯನ್ನು ಸಲ್ಲಿಸಿದರು. ನಂತರವೇ ಪಂಪಾಪತಿಯವರು ತಮ್ಮ ಎಂದಿನ ಕಾರ್ಮಿಕರ ಬೇಡಿಕೆಗಳ ಸಂಧಾನ ಸಭೆಯತ್ತ ಗಮನ ಹರಿಸಿದರು.

**ಮೈಸೂರು ವಿ.ವಿ.ಯ ಎಂ.ಬಿ.ಎ. ವಿದ್ಯಾರ್ಥಿಗಳಿಗೆ ಉಪನ್ಯಾಸ**

ಭರಮಸಾಗರದ ಶಾಸಕರೂ, ಮಂತ್ರಿಗಳೂ ಆಗಿದ್ದ ಶ್ರೀ ಸಿ. ಶಿವಮೂರ್ತಿನಾಯಕ ಅವರು ಮೈಸೂರ ವಿ.ವಿ.ಯಲ್ಲಿ ಎಂ. ಬಿ. ಎ. ಪದವಿ ವ್ಯಾಸಂಗ ಮಾಡುತ್ತಿದ್ದರು. ವಿದ್ಯಾರ್ಥಿ ದೆಸೆಯಿಂದಲೇ ದಾವಣಗೆರೆಯ ಕಾರ್ಮಿಕ ಚಳುವಳಿಯಿಂದ ಪ್ರಭಾವಿತರಾಗಿದ್ದವರು. ಹಾಗೂ ಕೆಂಬಾವುಟದ ಅಡಿಯಲ್ಲಿ ಪಂಪಾಪತಿಯವರ ಚಳುವಳಿಗಳ ನಾಯಕತ್ವ, ಬಹಿರಂಗ ಸಭೆಗಳಲ್ಲಿನ ಆಕರ್ಷಕ ಭಾಷಣಗಳನ್ನು ಕೇಳಲು ಉತ್ಸಾಹದಿಂದ ಬರುತ್ತಿದ್ದರು. ವಿ.ವಿ.ಯಲ್ಲಿನ ಎಂ.ಬಿ.ಎ. ವಿದ್ಯಾರ್ಥಿಗಳನ್ನುದ್ದೇಶಿಸಿ ಉಪನ್ಯಾಸ ನೀಡಬೇಕೆಂದು ಪಂಪಣ್ಣನವರನ್ನು ಮೂರ್ತಿಯವರು ಆಹ್ವಾನಿಸಿದರು. ಆಗ ಪಂಪಣ್ಣನವರು ಅಲ್ಲೇ ಇದ್ದ ನನ್ನತ್ತ ತಿರುಗಿ "ಆನಂದ ತೀರ್ಥರವರೇ., ಈ ಎಂ.ಬಿ.ಎ. ಅಂದರೆ ನನಗೇನೂ ಗೊತ್ತಿಲ್ಲ. ನಾನೊಬ್ಬ ಶಾಸಕನಾಗಿರಬಹುದು. ಹೆಚ್ಚಿನ ಮಟ್ಟದ ಅಕ್ಷರ ಜ್ಞಾನ ಇಲ್ಲ. ನಾನೊಬ್ಬ ಸಂಶೋಧಕನೂ ಅಲ್ಲ. ಅಂತಹ ಯಾವುದೇ ಅರ್ಹತೆ ಹೊಂದಿರುವವರ ಉಪನ್ಯಾಸ ಮಾತ್ರ ಉಪಯುಕ್ತವಾಗಬಲ್ಲದು. ಸಾಮಾನ್ಯ ಕಾರ್ಮಿಕನಾಗಿ ಬಂದ ನನ್ನಿಂದ ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ"? ಎಂದು ಪ್ರಶ್ನಿಸಿದರು. ನಾನದಕ್ಕೆ ಉತ್ತರಿಸುತ್ತ "ಎಂ.ಬಿ.ಎ. ಎಂದರೆ 'ಮಾಸ್ಟರ್ ಆಫ್ ಬಿಸಿನೆಸ್ ಆಡ್ಮಿನಿಸ್ಟ್ರೇಷನ್' ಎನ್ನುವ ಕೋರ್ಸ್ ಇದಾಗಿದ್ದು, ಇದನ್ನು ಮುಗಿಸಿದ ನಂತರ 'ಡಿಗ್ರಿ' ಪಡೆದ ಇವರು ಕಾರ್ಖಾನೆಗಳಲ್ಲಿ ಆಡಳಿತಾಧಿಕಾರಿಗಳಾಗಬಹುದು. ಆಡಳಿತ ನಿರ್ದೇಶಕರಾಗಬಹುದು ಅಥವಾ ಕಾರ್ಖಾನೆಯ ಕಾರ್ಯದರ್ಶಿಯ ಸ್ಥಾನದಲ್ಲಿ ತಮ್ಮ ಜವಾಬ್ದಾರಿ ನಿರ್ವಹಿಸುವಂತಹ ಹುದ್ದೆಗಳಿಗೆ ನೇಮಕವಾಗುವವರಾದ್ದರಿಂದ ಇವರ ಮುಂದಿನ ದಿನಗಳಲ್ಲಿ ಆಡಳಿತವರ್ಗ ಮತ್ತು ಕಾರ್ಮಿಕರ ಮಧ್ಯದ ಜಟಿಲ ಸಮಸ್ಯೆಗಳಿಗೆ ಕೇವಲ ವಿಶ್ವವಿದ್ಯಾಲಯದ ಪುಸ್ತಕಗಳು ಪರಿಹಾರ ನೀಡಲಾರವು. ನಿಮ್ಮಂಥವರ ಅನುಭವದ ವಿಚಾರಗಳು, ಹೇಗೆ ಆಡಳಿತ ವರ್ಗದವರು ಸೌಹಾರ್ದತೆಯಿಂದ ಕಾರ್ಮಿಕ ವರ್ಗದೊಂದಿಗೆ ಬೆರೆತು, ಸ್ಪಂದಿಸಿ ಸಮಸ್ಯೆಗಳನ್ನು ಸಂಧಾನಗಳ ಮೂಲಕ ಪರಿಹಾರ ಕಂಡುಕೊಳ್ಳಬಹುದು ಎನ್ನುವ ನಿಟ್ಟಿನಲ್ಲಿ ಸಹಾಯವಾಗುತ್ತವೆ. ಇಂತಹ ಒಂದು ಸುವರ್ಣಾವಕಾಶ ಅನಿರೀಕ್ಷಿತವಾಗಿ ಸಿಕ್ಕಿರುವುದರಿಂದ ನಿಮ್ಮ ನಿಜ ಜೀವನದ ಉದ್ದೇಶ ಪ್ರತಿಯೊಬ್ಬರಿಗೂ ಆದರ್ಶ ಮತ್ತು ಮಾದರಿಯಾಗಬಲ್ಲದು. ಆದ್ದರಿಂದ ತಾವು ಭಾಗವಹಿಸಲೇಬೇಕು" ಎಂದೆ. ಸುಮಾರು ಮೂರು ಗಂಟೆಗಳವರೆಗೆ ನಿರರ್ಗಳವಾಗಿ ತಮ್ಮ ಬದುಕಿನ ಅನುಭವಗಳ ಕುರಿತ ವಾಗ್ಝರಿಯನ್ನೇ ಹರಿಸಿದರು. ಅವರ ದಟ್ಟ ಅನುಭವಗಳು ಪುಸ್ತಕಗಳನ್ನು ಓದಿದರೂ ಸಿಗಲಾರದಂಥವುಗಳಾಗಿದ್ದವು ಎಂದು ಸ್ವತಃ ಉಪನ್ಯಾಸ ಕೇಳಿದ ವಿದ್ಯಾರ್ಥಿವೃಂದ ಶ್ಲಾಘಿಸಿದರು. ಪಂಪಣ್ಣನವರ ವಿದ್ಯೆ ಹೆಬ್ಬೆಟ್ಟಿಗೆ ಸೀಮಿತ. ಆದರೆ ಅವರ ಅನುಭವ, ಸಾಧನೆ ಅಸಾಮಾನ್ಯ.

**ಕುಡುಗೋಲು ಸುತ್ತಿಗೆಯ ಮಾಂತ್ರಿಕ ಕಾಮ್ರೇಡ್ ಪಂಪಣ್ಣ**

ಒಮ್ಮೆ ಪಂಪಾಪತಿಯವರು ೩ ವರ್ಷ ಜೈಲುವಾಸ ಅನುಭವಿಸಬೇಕಾಗಿ ಬಂತು. ಜೈಲು ಸಂಗಾತಿಯೊಬ್ಬ ತನ್ನ ಸಂಸಾರದಿಂದ ದೂರವಿರಲೇಬೇಕಾಗಿ ಬಂದಿತ್ತು. ಏಕಾಂಗಿ ಜೀವನದಿಂದ ವ್ಯಾಕುಲತೆ ಅತಿಯಾಗಿ ಚಳಿಜ್ವರದಿಂದ ನರಳುತ್ತಿದ್ದ. ಆತನ ಸಮಸ್ಯೆ

ಏನಿರಬಹುದೆಂದು ಗ್ರಹಿಸಿದ ಪಂಪಾಪತಿಯವರು ಈ ಮನೋರೋಗಿಗೆ ಯಶಸ್ವೀ ಮಾನಸಿಕ ಚಿಕಿತ್ಸೆಯನ್ನು ನೀಡಿ ಗುಣಪಡಿಸಿದ ಬಗೆ ಹೀಗಿತ್ತು : ಒಂದು ತೆಳುವಾದ ತಗಡಿನ (ರೇಖು) ಮೇಲೆ 'ಕುಡುಗೋಲು ಸುತ್ತಿಗೆ' ಚಿಹ್ನೆಯನ್ನು ಒಂದು ಮಳೆಯಿಂದ ಕೊರೆದು ಅದಕ್ಕೆ ಕರಿದಾರ, ಕುಂಕುಮ, ಅರಿಶಿನ ಹಚ್ಚಿ ಪಂಪಾಪತಿಯವರು ಒಬ್ಬ ಮಾಂತ್ರಿಕನಂತೆ ದೇವರಲ್ಲಿ ಕೈಮುಗಿದು ರೋಗಿಗೆ ಎಲ್ಲಾ ರೀತಿಯ ಕಾಯಿಲೆಗಳು ವಾಸಿಯಾಗುವಂತೆ ಮಾನಸಿಕ ಸ್ಥೈರ್ಯ, ಭರವಸೆ ತುಂಬಿದರು. ತಾಯಿತವನ್ನು ಆತನ ಬಲ ರೆಟ್ಟೆಗೆ ಕಟ್ಟಿದರು. ರೋಗಿಯ ಕಾಯಿಲೆ ಸ್ವಲ್ಪ ಹೊತ್ತಿನಲ್ಲಿಯೇ ಸುಧಾರಿಸಿತು. ಇದು ಪಂಪಾಪತಿಯವರ 'ಕುಡುಗೋಲು ಸುತ್ತಿಗೆ'ಯ ಸ್ವಾರಸ್ಯಕರ ತಂತ್ರ.

**ಹರಿಹರ ಪಾಲಿಫೈಬರ್ಸ್ - ಅಂಗೀಕಾರಕ್ಕಾಗಿ ಹೋರಾಟ**

ಹರಿಹರ ಪಾಲಿಫೈಬರ್ಸ್ ಕೆಲಸಗಾರರ ಸಂಘದ ಉಪಾಧ್ಯಕ್ಷರಾಗಿದ್ದ ಗೆಳೆಯ ಶ್ರೀನಿವಾಸಗೌಡ ಅವರು ಕಾರ್ಖಾನೆಯ ರಕ್ಷಣ ಸಿಬ್ಬಂದಿ. ಮಿಲಿಟರಿಯಿಂದ ನಿವೃತ್ತಿ ಹೊಂದಿದವರು. ದಷ್ಟಪುಷ್ಟರಾಗಿದ್ದ ಇವರು ಕಾರ್ಖಾನೆಯ ರಕ್ಷಣಾ ಸಿಬ್ಬಂದಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಬಹುತೇಕ ಗುಜರಾತ್, ರಾಜಸ್ತಾನ್, ಬಿಹಾರ್ ಹಾಗೂ ಉ.ಪ್ರದೇಶದಿಂದ ಬಂದವರೇ ರಕ್ಷಣಾ ಸಿಬ್ಬಂದಿಯಲ್ಲಿದ್ದವರು. ಒಮ್ಮೆ ಇವರ ಮತ್ತು ಕಾರ್ಮಿಕರ ನಡುವೆ ಸಣ್ಣ ವಿಷಯಕ್ಕಾಗಿ ಘರ್ಷಣೆ ನಡೆಯಿತು. ರಕ್ಷಣಾ ಸಿಬ್ಬಂದಿ ಶ್ರೀನಿವಾಸಗೌಡರನ್ನು ಥಳಿಸಿದರು. ಕಾರ್ಮಿಕರು ರೊಚ್ಚಿಗೆದ್ದು ದೃಢಕಾಯರಾದ ರಕ್ಷಣಾ ಸಿಬ್ಬಂದಿಗಳ ಮೇಲೆ ಎರಗಿಬಿದ್ದರು. ನಡೆದ ಘಟನೆಯ ಸುದ್ದಿ ಕಾ|| ಪಂಪಾಪತಿಯವರಿಗೆ ಶರವೇಗದಲ್ಲಿ ಮುಟ್ಟಿತು. ಕೂಡಲೇ ಘಟನೆ ನಡೆದ ಹರಿಹರ ಪಾಲಿಫೈಬರ್ಸ್‌ಗೆ ಧಾವಿಸಿದರು. ನಡೆದ ಘಟನೆಗೆ ಕಾರಣರಾದವರು ಯಾರು ಎಂಬುದರ ಬಗ್ಗೆ ತಲೆಕೆಡಿಸಿಕೊಳ್ಳದೆ ಮೊದಲು ಪ್ರಕ್ಷುಬ್ಧ ಪರಿಸ್ಥಿತಿಯನ್ನು ಸುಧಾರಿಸಲು ತನ್ನ ಪ್ರಾಣದ ಹಂಗನ್ನೇ ತೊರೆದು ಓರ್ವ ಉನ್ನತ ಅಧಿಕಾರಿಯ ಪ್ರಾಣ ಹಾನಿ ಅಲ್ಲದೆ ಹಲವಾರು ಸಿಬ್ಬಂದಿಗಳ ಮೇಲೆ ಕಾರ್ಮಿಕರಿಂದ ನಡೆಯಲಿದ್ದ ಮಾರಣಾಂತಿಕ ದಾಳಿಯನ್ನು ತಪ್ಪಿಸಲು ತಾವು ಮುಂದಾಗಿ ದಾಳಿಗೆ ಒಳಗಾದ ರಕ್ಷಣಾ ಸಿಬ್ಬಂದಿ ಮೇಲೆ ಪಂಪಾಪತೀಯವರೇ ಅವರಿಗೆ ರಕ್ಷಣೆ ನೀಡಿದರಲ್ಲದೆ, ನಾಲ್ಕಾರು ನೀಲಗಿರಿ ಕಟ್ಟಿಗೆಯ ಹೊಡೆತಗಳನ್ನು ತಾವೂ ತಿಂದು, ಸಿಟ್ಟಿಗೆದ್ದು ಘರ್ಷಣೆಗಿಳಿದಿದ್ದ ಕಾರ್ಮಿಕರನ್ನು ಮತ್ತು ರಕ್ಷಣಾ ಸಿಬ್ಬಂದಿಯನ್ನು ಬೇರ್ಪಡಿಸಲು ಪ್ರಯತ್ನಿಸಿದರು... ತೀವ್ರ ಗಾಯಗೊಂಡು ರಕ್ತಸ್ರಾವದಿಂದ ನರಳುತ್ತಿದ್ದ ಗೆಳೆಯ ಶ್ರೀನಿವಾಸ ಗೌಡ ಹಾಗೂ ರಕ್ಷಣಾ ಸಿಬ್ಬಂದಿಯ ನಾಲ್ಕಾರು ಜನರನ್ನು ತುರ್ತು ಚಿಕಿತ್ಸೆಗಾಗಿ ದಾವಣಗೆರೆ ಸಿ.ಜಿ. ಆಸ್ಪತ್ರೆಗೆ ದಾಖಲಿಸಿ ತುರ್ತು ಚಿಕಿತ್ಸೆಗೊಳಪಡಿಸಿದರು. ಆನಂತರ ರಕ್ಷಣಾ ಸಿಬ್ಬಂದಿಯ ವರ್ತನೆಯನ್ನು ಖಂಡಿಸಲು ಕಾರ್ಮಿಕರು ಮುಷ್ಕರ ಹೂಡಬೇಕೆಂದು ಒತ್ತಾಯಪಡಿಸಿದರು. ಈ ಸಂದರ್ಭದಲ್ಲಿ ಸಕಾಲಕ್ಕೆ ಪಂಪಾಪತಿಯವರ ಮಧ್ಯಪ್ರವೇಶ ಮಾಡದೇ ಹೋಗಿದ್ದರೆ ಕನಿಷ್ಠ ೮ ರಿಂದ ೧೦ ಜನರ ಪ್ರಾಣಹಾನಿಯಾಗುತ್ತಿತ್ತು. ಕಾರ್ಖಾನೆಯಲ್ಲಿ ವಾಚ್ ಅಂಡ್ ವಾರ್ಡ್ ಕೆಲಸಗಾರರಾಗಲಿ, ಕಾರ್ಮಿಕರಾಗಲಿ ಎಲ್ಲರೂ ಕಾರ್ಮಿಕರೆ ಎಂಬ ಭಾವನೆಯಿಂದ ನಡೆದ ಘಟನೆಯನ್ನು ವಿಮರ್ಶೆ ಮಾಡಬೇಕೆಂದು ಸಮಾಧಾನದ ಮಾತುಗಳನ್ನಾಡಿ ಹೆಚ್ಚಿನ ಪ್ರಖರತೆ ಮತ್ತು ಅಹಿತಕರ ಘಟನೆಗಳು ನಡೆಯದಂತೆ ಶಾಂತಿಯನ್ನು ಕಾಪಾಡುವಲ್ಲಿ ಯಶಸ್ವಿಯಾದರು. ಇಷ್ಟಾದರೂ ಸಹ ಕಾರ್ಮಿಕ ನಾಯಕರಾದ ಶ್ರೀನಿವಾಸಗೌಡ ಮತ್ತವರ ಸಂಗಡಿಗರಿಗೆ ಮತ್ತು ಕಾರ್ಮಿಕರಿಗೆ ಅತೃಪ್ತಿ, ಅಸಮಾಧಾನ. ಈ ಕಾರಣದಿಂದಲೇ ಆಸ್ಪತ್ರೆಯಲ್ಲಿ ನರಳುತ್ತಿದ್ದ ಶ್ರೀನಿವಾಸಗೌಡರನ್ನು ಮತ್ತು ಪಂಪಾಪತಿಯವರನ್ನು ಹೇಡಿಗಳು ನೀವು, ನಿಮ್ಮ ಕೈಗಳಿಗೆ ಬಳೆ ತೊಟ್ಟುಕೊಳ್ಳಿ ಎಂಬಿತ್ಯಾದಿಯಾಗಿ ನಿಂದಿಸಿದರು. ಪಂಪಾಪತಿಯವರು ಇಂಥ ಸಂಕಷ್ಟ ಸಂದರ್ಭದಲ್ಲೂ ಧೃತಿಗೆಡದೆ ಕಾರ್ಮಿಕ ನಾಯಕ ಶ್ರೀನಿವಾಸಗೌಡರ ಮೇಲೆ ಕೆಲವಾರು ಅಪಾದನೆ ಹೊರಿಸಿ ಕೆಲಸದಿಂದ ಅಮಾನತ್ತುಗೊಳಿಸಿದ ಆಡಳಿತವರ್ಗದೊಂದಿಗೆ ಸಂಧಾನ ನಡೆಸಿ ಅಮಾನತ್ತುಗೊಳಿಸಲು ಜಾರಿ ಮಾಡಿದ್ದ ಆದೇಶವನ್ನು ಯಾವುದೇ ವಿಚಾರಣೆಯಾಗಲಿ ಅಥವಾ ಶಿಕ್ಷೆಯಾಗಲಿ ಆಗದಂತೆ ಆಡಳಿತ ವರ್ಗವನ್ನು ಮಣಿಸುವಲ್ಲಿ ಯಶಸ್ವಿಯಾದರು. ಇವರು ಒಂದು ಮನೆಯ ಯಜಮಾನರಂತೆ ಸಹಸ್ರಾರು ಕಾರ್ಮಿಕರ ನೋವು-ನಲಿವುಗಳಲ್ಲಿ ಸಹಭಾಗಿಗಳಾಗಿ ನಿಜ ಜೀವನದಲ್ಲಿ ಕಾರ್ಮಿಕರ ಪ್ರೀತಿಯ ಅಣ್ಣ, ಪಂಪಣ್ಣ, ಯಜಮಾನ್ರು ಎಂದೇ ಖ್ಯಾತರಾಗಿ ಅಜರಾಮರರಾದರು.



ಸಿ. ಬಿ. ಮೊಣ್ಣಯ್ಯ
ಸ್ವಾತಂತ್ರ್ಯ ಸೇನಾನಿ
ಹಿರಿಯ ಕಮ್ಯೂನಿಸ್ಟ್ ಧುರೀಣ
ನಿಧನ : ೭-೯-೨೦೦೨

**ಜಿ. ಡಿ. ಬಿರ್ಲಾ ಎಂಬ ಗೂಳಿಗೆ ಮೂಗುದಾರ ಹಾಕಿದ ಪಂಪಾಪತಿ**

೧೯೮೧ರಲ್ಲಿ ಹರಿಹರ ಪಾಲಿಫೈಬರ್ಸ್ ಕಾರ್ಮಿಕರು ತಮ್ಮ ಕಾರ್ಮಿಕ ಸಂಘಟನೆಗೆ ಪಂಪಾಪತಿಯವರು ನಾಯಕರಾಗಬೇಕೆಂಬ ಕೋರಿಕೆಯೊಂದಿಗೆ ತಮ್ಮ ಸರ್ವಸದ್ಯರ ಸಭೆಯ ನಿರ್ಣಯ ಹೊತ್ತು ಅವರಲ್ಲಿಗೆ ಬಂದರು. ಆಗ ಪಂಪಾಪತಿಯವರು ''ನಾನು ಓದು-ವಿದ್ಯೆ ಬಲ್ಲವನಲ್ಲ, ನಾನೇನು ಪಂಡಿತನೂ ಅಲ್ಲ. ನಾನೊಬ್ಬ ಸಾಮಾನ್ಯ ಕಾರ್ಮಿಕ. ತಾವು ನನ್ನಲ್ಲಿಗೆ ಬಂದಿದ್ದೀರಿ. ಆದರೆ ನಿಮ್ಮ ಕಾರ್ಖಾನೆ ಇದೆಯಲ್ಲ ಅದು ಭಾರತದ ಪ್ರಸಿದ್ಧ ಗುತ್ತೇದಾರಿ ಬಿರ್ಲಾ ಮನೆತನಕ್ಕೆ ಸೇರಿದ್ದು. ಪ್ರಭಾವಿತ ಆಡಳಿತವರ್ಗವನ್ನು ಹೊಂದಿದೆ. ಇವರನ್ನು ಎದುರಿಸಲು ನಾನು ಸಮರ್ಥನೆ ? ಯೋಚನೆ ಮಾಡಿ. ನೀವು ಸ್ಥಳೀಯ ಮತ್ತು ಹೊರಗಿನ ಹಲವಾರು ಕಾರ್ಮಿಕ ನಾಯಕರನ್ನು ಕಂಡಿದ್ದೀರಿ. ನನ್ನಂಥವನು ನಾಯಕತ್ವ ನೀಡಬಲ್ಲೆನೆ ? ಈ ಬಗ್ಗೆ ನೀವು ಇನ್ನು ಆರು ತಿಂಗಳು ಯೋಚಿಸಿ ನಿರ್ಧಾರ ತೆಗೆದುಕೊಳ್ಳಿ. ಅವಸರ ಅನಗತ್ಯ. ನಂತರ ಅಗತ್ಯ ಬಿದ್ದಲ್ಲಿ ಖಂಡಿತ ನನ್ನಲ್ಲಿಗೆ ಬನ್ನಿ. ಆದರೆ ನನ್ನದೊಂದು ಕಿವಿಮಾತು, ನೆನಪಿನಲ್ಲಿಟ್ಟುಕೊಳ್ಳಿ. ತಾವು ಬಂದವರು ಹಿಂದಿರುಗಿ ಹೋದರೆ ನನಗೇನು ನಷ್ಟವಿಲ್ಲ. ಆದರೆ ನಿಮಗಾಗುವ ನಷ್ಟ ಅಪಾರ. ಹೋರಿಯ ಹಲ್ಲು ಹಿಡಿದು ನೋಡಿ ಬಿರ್ಲಾ ಎಂಬ ಹೋರಿಗೆ ಮೂಗುದಾರ ಹಾಕಬೇಕಾದ್ದು ನಿಮ್ಮ ಕೈಯಲ್ಲಿದೆ. ನಿಮ್ಮ ಕೈ ಸಡಿಲವಾದರೆ ಇದೇ ಹೋರಿ ನಿಮ್ಮನ್ನು ಮುಗಿಸಿಬಿಡುತ್ತದೆ. ಈ ಹೋರಿ ಎಲ್ಲರ ಹೊಲವನ್ನು ನುಗ್ಗಿ - ನುಗ್ಗಿ ಮೇಯುತ್ತಿದೆ. ಇದರ ಬಗ್ಗೆ ಮಾತ್ರ ಹುಷಾರಾಗಿರಿ.'' ಹೀಗೆ ತಾವು ಆಡುಭಾಷೆಯಲ್ಲಿಯೇ ಕಾರ್ಮಿಕರಿಗೆ ಹಿತವಚನ ಹೇಳಿದರು. ಕೊನೆಗೆ ಪಂಪಾಪತಿಯವರನ್ನು ಕಾರ್ಮಿಕರು ತಮ್ಮ ಸಂಘದ ಅಧ್ಯಕ್ಷರನ್ನಾಗಿ ನೇಮಿಸಿದಾಗ ಆಡಳಿತವರ್ಗಕ್ಕೆ ನುಂಗಲಾರದ ತುತ್ತು. ಆನಂತರ ನೂರಕ್ಕೆ ನೂರರಷ್ಟು ಕಾರ್ಮಿಕರ ಬೆಂಬಲವನ್ನು ಪಡೆದು ಮುಕ್ತ ಮತದಾನದ ಮೂಲಕ ಸಂಘದ ಚುನಾವಣೆಯಲ್ಲಿ ಜಯಶೀಲರಾಗಿ ಪಂಪಾಪತಿಯವರ ಆಯ್ಕೆ. ಆದರೆ ರಾತ್ರೋರಾತ್ರಿ ಆಡಳಿತ ವರ್ಗ ಪಂಪಣ್ಣನವರ ನೇತೃತ್ವದ ಸಂಘಕ್ಕೆ ಮಾನ್ಯತೆ ನೀಡದೆ ಪೋಟಿ (ಕೊಟ್ಟಿ) ಸಂಘವನ್ನು ಹುಟ್ಟು ಹಾಕಿತು. ಒಂದು ವರ್ಷದ ಕಾಲ ಧೀರೋದಾತ್ತ ಹೋರಾಟ ನಡೆಯಿತು. ನೂರಾರು ರೌಡಿಗಳನ್ನು ಜಮಾಯಿಸಿ ಅವರಿಗೆ ಕಾರ್ಮಿಕರ ಸಮವಸ್ತ್ರಗಳನ್ನು ತೊಡಿಸಿ ದಿನನಿತ್ಯ ಮುಗ್ಧ ಕಾರ್ಮಿಕರ ಮೇಲೆ ಹರಿಬಿಡಲಾಯಿತು. ಪೊಲೀಸರ ದಬ್ಬಾಳಿಕೆ, ಮಾಲಿಕರ ಅಟ್ಟಹಾಸ ಮುಂದುವರಿಯಿತು. ಪಂಪಾಪತಿಯವರು, ನಾನು ಮತ್ತು ಫಕ್ರುದ್ದೀನ್‌ಸಾಬ್ ಒಟ್ಟಿಗೆ ಬರುತ್ತಿದ್ದ ಕೆಂಪು ಕಾರನ್ನು ಪುಡಿಪುಡಿಯಾಗುವಂತೆ ಧ್ವಂಸಮಾಡಿ ಅಮಾನುಷ ಹಲ್ಲೆ ನಡೆಸಲಾಯಿತು. ಮಾರಣಾಂತಿಕವಾಗಿ ಚಾಕು, ಚೂರಿ, ಚೈನು ಇತ್ಯಾದಿ ಮಾರಕಾಸ್ತ್ರಗಳನ್ನು ಹೊತ್ತಿದ್ದ ರೌಡಿಗಳಿಂದ ಅಂದು ಹೇಗೋ ಪಾರಾದೆವು. ಈ ಸಂದರ್ಭದಲ್ಲಿ ಪಂಪಾಪತಿಯವರು ಮತ್ತವರ ಸಂಗಡಿಗರನ್ನು ನಮ್ಮನ್ನುಳಿಸಿದ ಆಪದ್ಬಾಂಧವ ಅಸಿಸ್ಟೆಂಟ್ ಪೊಲೀಸ್ ಕಮಿಷನರ್ ಮಲ್ಲನ ಗೌಡರನ್ನ ಎಂದೂ ಮರೆಯುವಂತಿಲ್ಲ. ಹೋರಾಟ ಮುಂದುವರಿದಂತೆ ಹರಿಹರ ಪಾಲಿಫೈಬರ್ಸ್ ಕಾರ್ಮಿಕರು ಆಡಳಿತವರ್ಗದವರ ಗೂಂಡಾ ಪಡೆ ಮತ್ತು ಪೊಲೀಸರಿಂದ ಗುಂಡಿನ ಸುರಿಮಳೆಯನ್ನು ಎದುರಿಸಬೇಕಾಯಿತು. ಈ ಘರ್ಷಣೆಯಲ್ಲಿ ೧೧ ಜನ ಕಾರ್ಮಿಕರು ಗುಂಡೇಟಿನಿಂದ ಕೈಕಾಲುಗಳನ್ನು ಕಳೆದುಕೊಂಡರು. ಅಂದು ಗೆಳೆಯ ಯಶವಂತ ಸಾವರೆ ಎಂಬುವರು ಪೊಲೀಸರ ಗುಂಡೇಟಿಗೆ ಬಲಿಯಾದರು.

**ಜಿ. ಡಿ. ಬಿರ್ಲಾರೊಂದಿಗೆ ಪಂಪಾಪತಿಯವರ ಮಾತುಕತೆ**

ಬಂಡವಾಳಶಾಹಿ ಮಾಲೀಕರು, ಇಷ್ಟೆಲ್ಲಾ ಪೈಶಾಚಿಕ ಕೃತ್ಯವೆಸಗಿದ್ದಲ್ಲದೆ ಪಂಪಾಪತಿ ಒಬ್ಬ ರೌಡಿ, ಇವನೊಬ್ಬ ದುಷ್ಟ ವ್ಯಕ್ತಿ, ರಕ್ತಪಿಪಾಸಿ, ಕಾರ್ಮಿಕರನ್ನು ಚಿತಾವಣೆಮಾಡಿ ಮುಷ್ಕರಕ್ಕಿಳಿಸುವುದೇ ಇವನ ಕೆಲಸ, ಇವನ ದಂಧೆ. ತಮಿಳುನಾಡಿನಲ್ಲಿ ಸಾಲುಮನೆಗಳನ್ನು ಕಟ್ಟಿದ್ದಾನೆ ಇತ್ಯಾದಿ... ಸುಳ್ಳು ವದಂತಿಗಳನ್ನು ಹರಡಿ ಜನರಲ್ಲಿ ತಪ್ಪು ಅಭಿಪ್ರಾಯ ಮೂಡುವಂತೆ ಅವ್ಯಾಹತವಾದ ಅಪಪ್ರಚಾರ ಮಾಡಿದರು. ಇದೆಲ್ಲಾ ಕಿವಿಗೆ ಬಿದ್ದ ಆಗಿನ ಬಿರ್ಲಾ ಸಾಮ್ರಾಜ್ಯದ ಒಡೆಯರಾದ ಜಿ. ಡಿ. ಬಿರ್ಲಾ ಅವರು, ಪಂಪಾಪತಿ ಎನ್ನುವವನು ಯಾರು, ಹೇಗಿದ್ದಾನೆ, ಇವನ ನಡುವಳಿಕೆಗಳೇನು ಎಂಬಿತ್ಯಾದಿಗಳ ಬಗ್ಗೆ ಕುತೂಹಲಗೊಂಡು ದೆಹಲಿಗೆ ಬರುವಂತೆ ಪಂಪಾಪತಿಯವರಿಗೆ ಆಹ್ವಾನಿಸಿದರು. ಯಾವ ಪಂಪಾಪತಿಯನ್ನು ಮಾಲಿಕವರ್ಗ ಗುರುತಿಸಲಿಲ್ಲವೋ ಅದೇ ಪಂಪಾಪತಿಯವರು ಆಡಳಿತವರ್ಗದ ಆಹ್ವಾನದ ಮೇಲೆ ವಿಮಾನದಲ್ಲಿ ದೆಹಲಿಗೆ ಹಾರಿದರು. ಈ ಮೂಲಕ ಪಂಪಾಪತಿಯವರ ನೇತೃತ್ವದ ಬಲಿಷ್ಠವಾದ ಸಂಘಕ್ಕೆ ಮಾನ್ಯತೆ ನೀಡಲೇಬೇಕಾಯಿತು.

ಎ. ಆರ್. ಆನಂದತೀರ್ಥ
ನಂ ೨೩೨, ೯ನೇ 'ಎ' ಮುಖ್ಯರಸ್ತೆ, ವಿಜಯನಗರ
ಬೆಂಗಳೂರು-೫೬೦ ೦೪೦

# ಹೊಂಟಿರೇನ ಹೊಂಟುಬಿಟ್ಟಿರೇನ!

## ಸತ್ಯಕಾಮರೊಡನೆ ಒಂದು ಅನೌಪಚಾರಿಕ ಸಂದರ್ಶನ

**ಕ**ನ್ನಡ ಬರಹಗಾರರಲ್ಲೇ ವಿಶಿಷ್ಟ ಸ್ಥಾನಮಾನವನ್ನು ಹೊಂದಿದ್ದ ಸತ್ಯಕಾಮರದು ಬಹುಮುಖ ವ್ಯಕ್ತಿತ್ವ, ಬಹುಕೋನ ದೃಷ್ಟಿ, ಕತೆಗಾರ, ಕಾದಂಬರಿಕಾರ, ಚಿಂತಕ, ಕೃಷಿಕ, ಸ್ವಾತಂತ್ರ್ಯಯೋಧ, ಸಾಧಕ, ಶೋಧಕ, ತಪಸ್ವಿ, ತಾಂತ್ರಿಕ, ಯೋಗಿ.. ಹೀಗೆ ಅನಂತ ಮುಖಗಳನ್ನು ಹೊಂದಿದ್ದರು ಶ್ರೀ ಅನಂತ ಕೃಷ್ಣ ಶಹಾಪುರ (ಸತ್ಯಕಾಮ) ಅವರು. ಕವಿ ಯೋಗಿಗಿಂತ ಭಿನ್ನವಲ್ಲ, ನಾನು ಯೋಗಿಯೂ ಅಲ್ಲ, ಕವಿಯೂ ಅಲ್ಲ ಎಂದು ವಿನಮ್ರವಾಗಿ ಹೇಳಿಕೊಳ್ಳುತ್ತಿದ್ದ ಅವರು ಈ ಎಲ್ಲವೂ ಆಗಿದ್ದರು.

ಓದಿದಂತೆ, ಓದಿದಂತೆ ಬೆಳೆಯುತ್ತಾ ಹೋಗುವ ಹಲವು ಶ್ರೇಷ್ಠ ಕೃತಿಗಳನ್ನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನೀಡಿದ ವಿಶಿಷ್ಟ ಸಾಹಿತಿ ಅವರು. ಹೊರಗಿನಿಂದ ಹಣಕಿ ಹಾಕುವವರಿಗೆ ಕಾಣುವ ನಿಗೂಢ, ವಿಕ್ಷಿಪ್ತ ಮನುಷ್ಯ. ಬದುಕು ಒಂದು ನೆರಳು, ಅದರ ಹಿಂದಿನ ಬೆಳಕೇ ಸತ್ಯ ಎಂದು ಅರಿದು ಬಳಿ ಸಾರಿದರೆ ಅಂಥವರಿಗೆ ಹೃದಯವನ್ನೇ ತೆರೆದು ತೋರಿಸುವ ಅಪ್ಪಟ ವಾತ್ಸಲ್ಯಮಯಿ ಸತ್ಯಕಾಮ ಉಪಮಾತೀತ ವ್ಯಕ್ತಿ ಮತ್ತು ಲೇಖಕ.



''ಸತ್ಯಕಾಮ ಮರಣದ ಬಗ್ಗೆ ಮಾತನಾಡಿದರೆ – ಮರಣದ ಭಯವೇ ಮಟಾಮಾಯವಾಗಿ ಬಿಡುತ್ತಿತ್ತು– ಅಂಥ ಯೋಗಿ ಆತ'' ಎನ್ನುತ್ತಾರೆ ಅವರ ನಿಕಟ ಸ್ನೇಹಿತ ಶ್ರೀ ಕುಸುಮಾಕರ ದೇವರಗೆಣ್ಣೂರ (ಎಸ್. ದಿವಾಣಜಿ) ಅವರು. ಅನೂಹ್ಯವಾದ ಸತ್ಯದ ದರ್ಶನ ಮಾಡಿಸುವ ಅಮೃತ ಘಳಿಗೆ ಅವರೊಂದಿಗಿನ ಭೆಟ್ಟಿ.

ಗುಮ್ಮಗೂಢ, ನಿಗೂಢ ವ್ಯಕ್ತಿತ್ವದ ಮನುಷ್ಯ ಎಂದು ಟೀಕೆಗೊಳಗಾಗಿದ್ದ ಅವರು ನಮ್ಮೊಂದಿಗೆ ತೆರೆದುಕೊಳ್ಳತೊಡಗಿದ್ದ ರೀತಿ ಅಚ್ಚರಿ ಹುಟ್ಟಿಸುತ್ತಿತ್ತು. ಅವರೊಂದಿಗೆ ಅವರ ಜೀವಿತದ ಕೊನೆಯ ದಿನಗಳಲ್ಲಿ ಹಾಕಿದ ಗುದಮುರಿಗೆ, ತುಂಬ ದಿನಗಳ ಹಿಂದೆ ಆಡುತ್ತ-ಆಡುತ್ತ ಕೇಳಿದ ಕೆಲವು ಪ್ರಶ್ನೆ ಹಾಗೂ ಪಡೆದ ಉತ್ತರ (ಅನೌಪಚಾರಿಕ ಸಂದರ್ಶನ) ಇಲ್ಲಿ ಸಂಗ್ರಹಿಸಿ ಕೊಡುವ ಒಂದು ಪ್ರಯತ್ನ ಮಾಡಿದ್ದೇನೆ.

**'ಪಂಚಮ'ಗಳ ನಡುವೆ'**, **'ತಂತ್ರಯೋನಿ'**, **'ತಣ್ಣಗಿನ ಬೆಂಕಿ'**, **ಪುರುಷಸೂಕ್ತ**, **ರಾಜಬಲಿ**, **ಚಂಡ-ಪ್ರಚಂಡ**, **ಅಜ್ಜರ ಕಾಡು**, **ವಿಜ್ಞಾನಭೈರವ** ಮುಂತಾದ ಶ್ರೇಷ್ಠ ಕೃತಿಗಳ ಕರ್ತೃವಿನ ವ್ಯಕ್ತಿತ್ವದ ಒಳನೋಟ ಈ ಅನೌಪಚಾರಿಕ ಮಾತುಗಳ ಮೊತ್ತದಲ್ಲಿದೆಯೆಂದು ಭಾವಿಸುವೆ.

''ಸತ್ಯಕಾಮರೆ, ನೀವು ಹುಟ್ಟಿದ್ದು ಯಾವಾಗ ?'' ಎಂಬ ಪ್ರಶ್ನೆಗೆ, ''ಅದೊಂದು ಅಪಘಾತ, ಅದನ್ನು ಮರೆತುಬಿಡಿ'' ಎಂದು ಹೇಳುತ್ತ, ಹುಟ್ಟಿಗಿಂತ ಬದುಕು ಮುಖ್ಯ, ಬದುಕಿಗಿಂತ ಸಾವು ಮತ್ತದರ ಆಗಮನದ ಪರಿಯ ಬಗ್ಗೆ ಕುತೂಹಲ ಇಟ್ಟುಕೊಂಡಿದ್ದ ಅವರು ಏಕಾಏಕಿ ಸಾವಿರದ ಒಂಭೈನೂರಾ ತೊಂಭತ್ತೆಂಟರ ದೀವಳಿಗೆಯ ದಿನ (೨೦-೧೦-೧೯೯೮) ಹೊರಟು ಹೋದಾಗ ಕಲ್ಲಹಳ್ಳಿಯಲ್ಲಿ ಹಾಡು ಹಗಲೇ ಕತ್ತಲೆ.

'ರಾಯರ, ನನ್ನಪ್ಪಾ , ಏನ ಉಣಸಾಂವ, ಏನ ತಿನಸಾಂವ, ಎಂದು ಹೊರಳಾಡಿ ಅಳುವ ಹೃದಯವಂತರ ಕಣ್ಣ-ಹುಜುರಿನಲ್ಲೇ ಪಂಚಮಹಾಭೂತಗಳಲ್ಲಿ ಒಂದಾಗಿಹೋದರು. ನನ್ನ ಸಾಮಾನ್ಯ ಪ್ರಶ್ನೆಗಳಿಗೆ ಅವರ ಅಸಾಮಾನ್ಯ ಉತ್ತರಗಳು – ಇದೇ ಸತ್ಯಕಾಮರ ವೈಶಿಷ್ಟ್ಯ. ಅದರ ಚಾರು-ಚೂರು ಸಂಗ್ರಹ ಹೀಗೆ...

**ಪೋಲೀಸ್ ಪಾಟೀಲ:** 'ಸತ್ಯಕಾಮ' ನಿಮ್ಮ ಕಾವ್ಯ-ನಾಮ ಇದನ್ನೇ ಏಕೆ ಇಟ್ಟುಕೊಂಡಿರಿ?

**ಸತ್ಯಕಾಮ :** ನಾನು ಆ ಹೆಸರಿಟ್ಟುಕೊಳ್ಳುವ ಸಂದರ್ಭದಲ್ಲಿ ನನಗೆ ಅಸತ್ಯತೆಯ ಆಸರೆಯ ಅನಿವಾರ್ಯತೆ ಇತ್ತು.

**ಪೋಪಾ :** ಆ ಪೌರಾಣಿಕ ಸತ್ಯಕಾಮ (ಜಾಬಾಲಿಯ ಮಗ) ನಿಗೂ ನಿಮ್ಮ ಹೆಸರಿಗೂ...

**ಸತ್ಯಕಾಮ :** ಏನೇನೂ ಸಂಬಂಧವಿಲ್ಲ.

**ಪೋಪಾ :** ಕ್ಷಮಿಸಿ, ಇದು ಬಾಲಿಶ ಪ್ರಶ್ನೆಯೆನ್ನಿಸಬಹುದು, ಕುತೂಹಲಕ್ಕಾಗಿ ಕೇಳುತ್ತಿದ್ದೇನೆ, ನೀವು ಯಾಕೆ ಬರೆಯುತ್ತೀರಿ ?

**ಸತ್ಯಕಾಮ :** ನನ್ನೊಳಗಿನ 'ಅಹಂ' ಅನ್ನು ಹೊರಹಾಕುವುದಕ್ಕೆ.

**ಪೋಪಾ:** ಪೌರಾಣಿಕ ವಸ್ತುಗಳನ್ನೇ ಹೆಚ್ಚು ಆರಿಸಿಕೊಂಡಿದ್ದೀರಲ್ಲ?

**ಸತ್ಯಕಾಮ :** ಕಡಿಮೆ ಜನ ಬೇಟೆಯಾಡುವ ಪ್ರದೇಶ ಇದು. ಹೆಚ್ಚು ಓದಿದರೆ, ಹೆಚ್ಚು ನೋಡಿದರೆ ಹುಚ್ಚು ಹಿಡಿಯುವುದಿಲ್ಲವೆ ?

**ಪೋಪಾ :** ನೀವು ನಿಮ್ಮ ಬರವಣಿಗೆ ಆರಂಭಿಸಿದ್ದು ಕಾವ್ಯದಿಂದ ಎಂದು ಕೇಳಿದ್ದೇನೆ. ನಿಮ್ಮ ಕವಿತೆಗಳನ್ನು ನೋಡಬೇಕಲ್ಲ ?

**ಸತ್ಯಕಾಮ :** ಎಲ್ಲ ನಾಶಪಡಿಸಿದ್ದೇನೆ, ಕೆಲವೊಂದು ಕೃತಿಗಳು ನಾಶವಾಗುವುದರಿಂದಲೇ ಸಾಹಿತ್ಯಕ್ಕೆ, ದೇಶಕ್ಕೆ ಉಪಕಾರ.

**ಪೋಪಾ :** ನಿಮ್ಮ ಊರು ಕೃಷ್ಣಾತೀರದ ಗಲಗಲಿ ಬಿಟ್ಟು ಕಲ್ಲಹಳ್ಳಿಗೆ ಬರಲು ಕಾರಣ ?

**ಸತ್ಯಕಾಮ :** ಈ ಅಲೆಮಾರಿಗೆ ಎಲ್ಲ ಹಳ್ಳಿಗಳೂ ಮುಗಿದಿದ್ದವು.

**ಪೋಪಾ :** ನಿಮ್ಮ ಸ್ವಾತಂತ್ರ್ಯ ಹೋರಾಟದ ಬಗ್ಗೆ ಏನು ಹೇಳುತ್ತೀರಿ ?

**ಸತ್ಯಕಾಮ :** ಈ ದೇಶಕ್ಕಾಗಿ ನಾನೇನೂ ಮಾಡಿಲ್ಲ, ಸ್ವಾತಂತ್ರ್ಯಕ್ಕಾಗಿ ಹೋರಾಡುವ ನೆಪದಲ್ಲಿ ನನ್ನೊಳಗಿನ ವಿಧ್ವಂಸಕ ಮನಸ್ಸಿಗೆ ಆಹಾರ ಸಿಕ್ಕಿತು. ನಾನು-ನನ್ನಂಥವರು ಮಾಡಿದ್ದೆಲ್ಲವನ್ನೂ 'ದೇಶಪ್ರೇಮ' ಎಂದು ಕರೆದರೆ ಅದು ನನ್ನ ತಪ್ಪಲ್ಲ.

**ಪೋಪಾ :** ಕೆಲವರು ಏನನ್ನೂ ಮಾಡದೆ ದೇಶಪ್ರೇಮದ ಕವಚ ಧರಿಸುತ್ತಾರೆ, ನೀವು ಮಾಡಿಯೂ...

**ಸತ್ಯಕಾಮ :** ನಾನು ಆ ತರದ ಮನುಷ್ಯನಲ್ಲ.

**ಪೋಪಾ :** ನಿಮಗೆ ಅತ್ಯಂತ ಪ್ರೀತಿಯ ಸಂಗತಿ...

**ಸತ್ಯಕಾಮ :** ಕೂಡಿ ಉಣ್ಣುವುದು.

**ಪೋಪಾ :** ಅತ್ಯಂತ ದುಃಖದ ಸಂಗತಿ ?

**ಸತ್ಯಕಾಮ :** ಕದ್ದು ತಿನ್ನುವುದು.

**ಪೋಪಾ :** ನೀವು ಹಣವನ್ನು ನೀರಿನಂತೆ ವ್ಯಯಿಸುತ್ತೀರಲ್ಲ ?

**ಸತ್ಯಕಾಮ :** ನನ್ನದು ಪಾಪದ ದುಡ್ಡು ಅದಕ್ಕೆ.

**ಪೋಪಾ :** ಪಾಪದ ದುಡ್ಡು ಯಾಕೆ ?

**ಸತ್ಯಕಾಮ :** ನನಗೆ ಪುಣ್ಯಮಾಡಿ ಗೊತ್ತಿಲ್ಲವಲ್ಲ.

**ಪೋಪಾ:** ''ನಾನು ತಪ್ಪು ಮಾಡಿದ್ದೇನೆ'' ಎಂದು ನಿಮಗೆ ಯಾವಾಗಲಾದರೂ ಅನ್ನಿಸಿದೆಯೆ?

**ಸತ್ಯಕಾಮ :** ಖಂಡಿತ. 'ಸತ್ಯಕಾಮ' ಎಂದರೆ ಯಾರು ಎಂದು ಅರಿಯದವರ ನಡುವೆ ನಾನು, 'ಬಾಪು' ಎಂದರೇನು ಎಂದು ತಿಳಿಯದವರ ನಡುವೆ 'ನೀವು' ಬದುಕುತ್ತಿಲ್ಲವೇ ? ಇದಕ್ಕಿಂತ ಗಂಭೀರವಾದ ಪ್ರಮಾದವೊಂದಿದೆ. ನಿಮ್ಮನ್ನು ಬಾಗಲಕೋಟೆ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಚುನಾವಣೆಗೆ (೧೯೯೮) ನಿಲ್ಲಲ್ಲು ಹಚ್ಚಿದ್ದು ಸಣ್ಣ ತಪ್ಪೆ ? ನೀವು ತಣ್ಣಗೆ ನಿಮ್ಮ ಮನೆಯಲ್ಲಿ ಇದ್ದಿರಿ. ನಾನು ನಿಮ್ಮ ಮನೆಯವರೆಗೆ ಬಂದು ನಿಮ್ಮನ್ನು ಹೊರಗೆ ತಂದು ಕೊಲೆ ಮಾಡಿದೆ, ಉಣ್ಣುವ ಗಂಗಾಳದಲ್ಲಿ ಹೊಲಸು ಮಾಡುವವರ ನಡುವೆ ತಂದು ನಿಲ್ಲಿಸಿದೆ.

**ಪೋಪಾ :** ನಿಲ್ಲಿಸಿದಿರಿ, ಗೆಲ್ಲಿಸಿದಿರಿ, ಆಯಿತಲ್ಲ.

**ಸತ್ಯಕಾಮ :** ಗೆಲ್ಲಿಸಿದ್ದು ನಾನಲ್ಲ, ನಿಮ್ಮ ದುಡಿಮೆ, ನಿಮ್ಮ ಚಾರಿತ್ರ್ಯ.

**ಪೋಪಾ :** ಅದು ನಿಮ್ಮ ದೊಡ್ಡಗುಣ. ಈಗ ಏನು ಮಾಡಬೇಕು ಹೇಳಿ.

**ಸತ್ಯಕಾಮ :** ಹತ್ತರೊಳಗೆ ಹನ್ನೊಂದಾಗಬೇಡಿರಿ, ಬಾಗಲಕೋಟೆ ಜಿಲ್ಲೆ ಇಪ್ಪತ್ತೇಳರಲ್ಲಿ ಒಂದಾಗದಂತೆ ನೋಡಿಕೊಳ್ಳಿ.

**ಪೋಪಾ :** ಇದರಲ್ಲಿ ನಿಮ್ಮ ಪಾಲು ?

**ಸತ್ಯಕಾಮ :** ಈಗಲೂ ಮುಂದೆಯೂ ನಾನು ಯಾವಾಗಲೂ ನಿಮ್ಮೊಂದಿಗಿದ್ದೇನೆ. ಎಲ್ಲರೂ ಬಾಗಲಕೋಟೆ ಕಡೆಗೆ ನೋಡುವಂಥ ಕೆಲಸ ಮಾಡೋಣ.

**ಪೋಪಾ :** ಒಂದು ವೈಯಕ್ತಿಕ ಪ್ರಶ್ನೆ, ಕೇಳಬಹುದೆ ?

**ಸತ್ಯಕಾಮ :** ಬ್ರಹ್ಮಚಾರಿಗೆ 'ವೈಯಕ್ತಿಕ' ಎನ್ನುವಂಥದ್ದೇನಿದೆ? ಧಾರಾಳವಾಗಿ ಕೇಳಿ.

**ಪೋಪಾ :** ಅದೇ ನನ್ನ ಪ್ರಶ್ನೆ. ನೀವು ಬ್ರಹ್ಮಚಾರಿಗಳು, ಕಾಮ-ಪ್ರೇಮದ ಬಗ್ಗೆ ನಿಮ್ಮ ಕೃತಿಗಳಲ್ಲಿ ಇಷ್ಟೊಂದು ನೈಜಚಿತ್ರಣ ನೀಡಿದ್ದು ಹೇಗೆ ?

**ಸತ್ಯಕಾಮ :** ದುಃಶಂತ ಶಕುಂತಲೆಯನ್ನು ಅನುಭವಿಸುವುದಕ್ಕಿಂತ

ಪಿ. ಆರ್. ಪೋಲೀಸ್ ಪಾಟೀಲ

ಮೊದಲು ನಾನು ಅವಳನ್ನು ಅನುಭವಿಸಿದ್ದೇನೆ. ಪ್ರೇಮದ ಮೂಲ ಕಾಮ. ನನ್ನದು ಎಲ್ಲೆಯಿರದ ಪ್ರೀತಿ. ಕಾಮದ ಕುರಿತು ಬರೆಯುವುದೇನು ಮಹಾ !

**ಪೋಪಾ** : ನೀವು ದೇವರನ್ನು ನಂಬುತ್ತೀರಾ ?

**ಸತ್ಯಕಾಮ** : ಹೌದು.

**ಪೋಪಾ** : 'ದೇವರಿಲ್ಲ' ಎನ್ನುವವರಿಗೆ ನಿಮ್ಮ ಉತ್ತರ ಏನು ?

**ಸತ್ಯಕಾಮ** : ಅಂಥವರು 'ದೇವರು ಇಲ್ಲ' ಎನ್ನುವುದನ್ನು ಸಾಬೀತು ಮಾಡಲಿ.

**ಪೋಪಾ** : ನೀವು ಕತೆ ಕಾದಂಬರಿಗಳ ಜೊತೆಗೆ ತಾಂತ್ರಿಕ-ವಿಷಯಗಳನ್ನೊಳಗೊಂಡ ಹಲವಾರು ಕೃತಿಗಳನ್ನು, 'ಪಂಚಮ'ಗಳ ನಡುವೆ, 'ತಂತ್ರಯೋನಿ' ಇತ್ಯಾದಿ ರಚಿಸಿದ್ದೀರಿ. ಇವುಗಳಲ್ಲಿ ನಿಮಗೆ ತೃಪ್ತಿ ಕೊಟ್ಟ ಕೃತಿ ಯಾವುದು ?

**ಸತ್ಯಕಾಮ** : ಯಾವುದೂ ಇಲ್ಲ.

**ಪೋಪಾ** : 'ಪಂಚಮಗಳ ನಡುವೆ' ನಿಮ್ಮ ಮಹಾತ್ವಾಕಾಂಕ್ಷೆಯ ಕೃತಿ, ನಿಮಗೆ ಹೆಸರು ತಂದ ಕೃತಿ, ಇದರ ಬಗ್ಗೆ ಏನು ಹೇಳುತ್ತೀರಿ ?

**ಸತ್ಯಕಾಮ** : ಅದು ನನ್ನ ಮಹಾತ್ವಾಕಾಂಕ್ಷೆಯ ಕೃತಿ ಅಲ್ಲ, ನನ್ನ ಬದುಕಿನ ಹಂದರದ ಮೇಲೆ ಹಬ್ಬಿದ ಬಳ್ಳಿ. ೧೯೪೪ರಿಂದ ೧೯೫೬ರವರೆಗೆ ನನ್ನ ತಪದ ಕಾಲದಲ್ಲಿ ನಾನು ಹಲವು ಶಾಕ್ತರ ಜೊತೆಗೆ ಇದ್ದೆ. ಅವರೆಲ್ಲ ತಾಂತ್ರಿಕರು. ಈ ತಾಂತ್ರಿಕರ ಕಣ್ಣಳತೆಯಲ್ಲಿ, ಕೈಯಳತೆಯಲ್ಲಿದ್ದು ಪಡೆದ ಅನುಭವಗಳ ಅಭಿವ್ಯಕ್ತಿ ಈ ಪುಸ್ತಕ.

**ಪೋಪಾ** : ತಂತ್ರದ ಹೆಸರಿನಲ್ಲಿ ಇಂಥವರು ಶ್ರೀಸಾಮಾನ್ಯರನ್ನು ವಂಚಿಸುತ್ತಾರೆ. ಕೊಲ್ಲುತ್ತಾರೆ, ಅವರ ನೆಮ್ಮದಿ ಕಸಿಯುತ್ತಾರೆ ಎಂದು ನಿಮಗೆ ಅನ್ನಿಸಲಿಲ್ಲವೆ?

**ಸತ್ಯಕಾಮ** : ಹೌದು ನಾನು ಒಪ್ಪುತ್ತೇನೆ. ನಮ್ಮ ದೇಶದಲ್ಲಿ ಎಲ್ಲಕ್ಕೂ ಹೆಚ್ಚು ವಂಚಕರು ಬೀಡು ಬಿಟ್ಟ ಕ್ಷೇತ್ರ ಈ ತಂತ್ರಜಗತ್ತು. ಇಲ್ಲಿ ಶಕ್ತಿ ವಿಪುಲವಾಗಿದ್ದರೂ ಅದರ ಬಳಕೆಯಲ್ಲಿ ವೈಜ್ಞಾನಿಕ ತಿಳುವಳಿಕೆ ಕಡಿಮೆ. ಆದರೆ ಮನುಷ್ಯ ಅಪಾರ ಶಕ್ತಿ ಪಡೆಯಬಲ್ಲ, ಉಪಯೋಗಿಸಬಲ್ಲ. ಒಬ್ಬ ವ್ಯಕ್ತಿಗೆ ಯಂತ್ರದಷ್ಟು ಶಕ್ತಿಯಿದೆ ಎಂದರೆ ವಿಜ್ಞಾನಿಗೆ ಅಚ್ಚರಿಯಾಗುತ್ತದೆ. ಆದರೆ ತಂತ್ರಸಿದ್ಧನೊಬ್ಬ ಆಧುನಿಕ ಯಂತ್ರವನ್ನು ನೋಡಿ 'ಅಯ್ಯೋ ಇಷ್ಟೇನಾ?' ಎನ್ನುತ್ತಿದ್ದ. ಈ ಅಚ್ಚರಿ ನನ್ನನ್ನು ಈ ತಾಂತ್ರಿಕ ಜಗತ್ತಿನಲ್ಲಿ ತುಂಬ ದೂರ ನಡೆಯಲು ಹಚ್ಚಿತು.

ಸತ್ಯಕಾಮರ ನೆನಪಿನ ಮನೆ - 'ಸುಮ್ಮನೆ'

**ಪೋಪಾ** : ನೀವೊಬ್ಬ ತಾಂತ್ರಿಕರು, ಲೇಖಕರಲ್ಲ, ಎಂಬುದು ಕೆಲ ವಿಮರ್ಶಕರ ವಾದ, ಇದಕ್ಕೆ ನೀವೇನಂತೀರಿ ?

**ಸತ್ಯಕಾಮ** : ನಡೆಯಲು ಬಾರದವರ ಓಟವನ್ನು ನಾನು ನಂಬುವುದಿಲ್ಲ. 'ಶಂಕೆ ಅಶಕ್ತತೆಯ ಅನುಸ್ವಾರ' ಎನ್ನುತ್ತದೆ ಮಾನವಶಾಸ್ತ್ರ. ಇನ್ನೊಂದನ್ನು ಶಂಕಿಸುವ ಮೊದಲು ನಮ್ಮ-ನಮ್ಮ ಅರಿವು-ನಂಬಿಕೆಗಳನ್ನು ಅಳೆದುಕೊಳ್ಳಬೇಕು.

**ಪೋಪಾ** : 'ತಂತ್ರಯೋನಿ' ನಿಮ್ಮ ಮಾಸ್ಟರ್‌ಪೀಸ್ (ಆಚಾರ್ಯ ಕೃತಿ) ಇದರ ಬಗ್ಗೆ...

**ಸತ್ಯಕಾಮ** : ನನ್ನ ಮಾಸ್ಟರ್‌ಪೀಸ್ ಇನ್ನೂ ಬರಬೇಕು. ನನ್ನ ಈ ಪುಸ್ತಕ ನಡೆಯ ಹಚ್ಚುತ್ತದೆ, ನಡೆಯುವವನಿಗೆ ಕೈ ಹಿಡಿಯುತ್ತದೆ. ಅದು ಓದಿ ಇಡುವ ವಸ್ತು ಅಲ್ಲ.

**ಪೋಪಾ** : 'ತಂತ್ರಯೋನಿ' ಕತೆಯಲ್ಲ, ಕಾದಂಬರಿ ಅಲ್ಲ, ಪ್ರಬಂಧ ಅಲ್ಲ, ನಾಟಕವೂ ಅಲ್ಲ. ಒಂದು ಶಾಸ್ತ್ರಗ್ರಂಥ. ಸುಮಾರು ಮುನ್ನೂರು ಪುಟಗಳಷ್ಟು. ತುಂಬ ದೊಡ್ಡದಾಗಲಿಲ್ಲವೆ ?

**ಸತ್ಯಕಾಮ** : ನಿಜ, ನನ್ನ ಮಾತು ಇಲ್ಲಿ ಉದ್ದವಾಗಿದೆ. ಉದ್ದ ಮಾತಿಗೆ ಹುರಿ ಕಡಿಮೆ. ಅದೂ ಗೊತ್ತು. ಆದರೆ ದೂರವನ್ನು ತಲುಪಲು ಉದ್ದ ಅಗತ್ಯ.

**ಪೋಪಾ** : ನಿಮ್ಮ ಪುಸ್ತಕ ಓದುವುದು ಸುಲಭವಲ್ಲ. ಮೂರು ಪುಟ ಓದಲು ಮೂರು ತಾಸೇ ಹಿಡಿಯುತ್ತದೆ. ಇನ್ನು ಮುನ್ನೂರು ಪುಟ ?

**ಸತ್ಯಕಾಮ** : ಅದಕ್ಕೆ ನಾನು ಮಾತ್ರ ಹೊಣೆಗಾರನಲ್ಲವಲ್ಲ ? ನಿಮ್ಮ ಓದಿನ ಕ್ರಮ ನನಗೆ ಹಿಡಿಸಿತು.

**ಪೋಪಾ** : ೧೯೯೭ರ ವಿಜಯದಶಮಿಯ ಮರುದಿನ ಈ 'ತಂತ್ರಯೋನಿ' ಪುಸ್ತಕ ನನ್ನ ಕೈಗಿಟ್ಟಿರಿ. ಇಂದಿಗೆ ಒಂದು ವರ್ಷವಾಯಿತು. ಅದರ ಒಳಪುಟದಲ್ಲಿ 'ಹೆಚ್ಚಾದ ಪ್ರೀತಿಯನ್ನು ಕಡಿಮೆ ಮಾಡಲು' ಎಂದು ಬರೆದುಕೊಟ್ಟಿದ್ದೀರಿ, ಇದರ ಅರ್ಥ ಏನು?

**ಸತ್ಯಕಾಮ** : ಅದು ಇಷ್ಟರಲ್ಲೇ ನಿಮಗೆ ಗೊತ್ತಾಗುತ್ತದೆ.

**ಪೋಪಾ** : ಅಂದರೆ ಬಿಡಿಸಿ ಹೇಳಬಾರದೆ?

**ಸತ್ಯಕಾಮ** : ಕೆಲವು ಸಂಗತಿಗಳನ್ನು ಬಿಡಿಸಿ ಹೇಳಲು ಬರುವುದಿಲ್ಲ. ಅನುಭವ ಮಾತ್ರದಿಂದ ಅರಿಯುವಂಥವು ಅವು.

**ಪೋಪಾ** : ನಿಮ್ಮ ಸಾಹಿತ್ಯಕ್ಕೆ ಸಿಗಬೇಕಾದಷ್ಟು ಮನ್ನಣೆ ಪ್ರಶಸ್ತಿ, ಪುರಸ್ಕಾರಗಳು ಸಿಕ್ಕಿಲ್ಲ.

**ಸತ್ಯಕಾಮ** : ಹಾಗೆಂದು ನಾನು ದೂರಿಲ್ಲವಲ್ಲ ?

**ಪೋಪಾ** : ನೀವು ದೂರಿಲ್ಲ, ಕರುಬಿಲ್ಲ ನಿಜ. ಹಾಗೆಂದು ನಿಮ್ಮನ್ನು ತೆರೆದ ಕಣ್ಣುಗಳಿಂದ ನೋಡಿದವರಿಗೆ, ನಿಮ್ಮ ಅಭಿಮಾನಿ ಓದುಗರಿಗೆ ಅನ್ನಿಸಿದೆ.

**ಸತ್ಯಕಾಮ** : ಖೇದವಿಲ್ಲ. ಪ್ರಶಸ್ತಿಗಾಗಿ ಬರೆಯಬಾರದು. ಬದುಕಬಾರದು. ಬರೆಹದಲ್ಲಿ ಬದುಕಿರಬೇಕು. ಇದು ನನ್ನ ನೀತಿ. ಪ್ರಶಸ್ತಿ ಕೊಡುವವರಿಗೆ ಕೆಲವು ಮಾನದಂಡಗಳಿರುತ್ತವೆ. ಅದರ ಅಳತೆಗೆ ನಾನು ಬಂದಿರಲಿಕ್ಕಿಲ್ಲ. ಪ್ರಶಸ್ತಿ-ಪುರಸ್ಕಾರ ಅಹಂಕಾರ - ಮೂಲ. ಬರದಿದ್ದರೇ ಬೆಳೆಯಲು ಅನುಕೂಲ.

**ಪೋಪಾ** : ಬಹಳ ಹೊತ್ತು ನಿಮ್ಮನ್ನು ಪೀಡಿಸಿದ್ದಕ್ಕೆ ಕ್ಷಮೆ ಇರಲಿ, ಅಪ್ಪಣೆ ಕೊಡಿರಿ ಹೋಗಿ ಬರುತ್ತೇನೆ.

**ಸತ್ಯಕಾಮ** : ಊಟ ಮಾಡಿಕೊಂಡು ಹೋಗಿ.

**ಪೋಪಾ** : ಇಲ್ಲ, ಊಟ ಮಾಡುವುದಿಲ್ಲ, ನಿನ್ನೆ ಯಲ್ಲಟ್ಟಿಯ ಲೇಖಕರ ಶಿಬಿರಕ್ಕೆ (ಬಾಗಲಕೋಟ ಜಿಲ್ಲಾ ಕ. ಸಾ.ಪ.ದಿಂದ ಏರ್ಪಡಿಸಿದ್ದು) - ಬಂದು ನಮ್ಮೊಂದಿಗೆ ಮಾತಾಡಿ ಊಟ ಮಾಡಿಕೊಂಡು ಬರುತ್ತೇನೆಂದಿದ್ದಿರಿ. ಊಟ ಮಾಡದೆ ದಾರಿ ಕಾಯ್ದೆ, ಬರಲಿಲ್ಲ. ಅದಕ್ಕೆ ಈಗ ನಾನು ಊಟ ಮಾಡುವುದಿಲ್ಲ.

**ಸತ್ಯಕಾಮ** : ಅದಕ್ಕೆ ನಾನು ತಪ್ಪುದಂಡ ಕೊಡುತ್ತೇನೆ.

**ಪೋಪಾ** : ಏನು ?

**ಸತ್ಯಕಾಮ** : ಸಂಜೆಯವರೆಗೆ ಉಳಿಸಿಕೊಂಡು ಇನ್ನೊಂದು ಊಟ ಮಾಡಿಸಿ ಕಳಿಸುತ್ತೇನೆ.

ಅಂದು ಸಂಜೆಯವರೆಗೆ ನನ್ನ ಬಿಡಲಿಲ್ಲ. ಜಯಶೀಲರಾವ್, ನೇಮಿನಾಥ, ಡಾ. ಗಂಗಾಧರ, ವೀಣಾ ಬನ್ನಂಜೆ ಇನ್ನೂ ಅನೇಕ ಜನರ ಜೊತೆ ಚರ್ಚೆ - ಹರಟೆ - ಕೊಡುಕೊಳ್ಳುವಿಕೆ. ಒತ್ತಾಯ ಮಾಡಿ ಸಂಜೆ ಮತ್ತೊಂದು ಊಟ ಮಾಡಿಸಿಯೇ ಬೀಳ್ಕೊಟ್ಟರು. ಉಣ್ಣಿಸುವುದರಲ್ಲಿ ಸತ್ಯಕಾಮರು ನಿಸ್ಸೀಮರು.

ಒಂದು ಮಧ್ಯಾಹ್ನ ಇವರು ಗೆಳೆಯರು ಹಾಗೂ ಮನೆಮಂದಿಯೊಂದಿಗೆ ತೋಟದ ಮನೆಯಲ್ಲಿ ಊಟಕ್ಕೆ ಸಿದ್ಧವಾಗುತ್ತಿದ್ದಾಗ ಹತ್ತಾರು ಜನ ಹಸಿದ ದಾರಿಹೋಕರು ಬಂದು ನೀರು ಕೇಳಿದಾಗ ಅವರಿಗೆ ಹೊಟ್ಟೆ ತುಂಬ ಉಣ್ಣಿಸಿ ಕಳಿಸಿ ತಾವೇ ನೀರು ಕುಡಿದು ಹೊಟ್ಟೆ ತುಂಬಿಸಿಕೊಂಡ ಮಾತೃಹೃದಯಿ ಸತ್ಯಕಾಮರು. ಹೊಟ್ಟೆ ಹಸಿವು, ನೆತ್ತಿ ಹಸಿವು ಎರಡನ್ನೂ ನೀಗಿಸಬಲ್ಲ ಧೀಮಂತರು, ಹೃದಯವಂತರು.

ಅಂದಿನದು ನಮ್ಮ ಕೊನೆಯ ಭೇಟಿ.

ಮುಂದೆ ಹದಿನೈದು ದಿನಗಳಲ್ಲೇ ದೀವಳಿಗೆ ಹಬ್ಬದ ದಿನ ಅತ್ತ ಪಣತಿ ಹಚ್ಚುತ್ತಲೇ ಇತ್ತ ನಡೆದು ಬಿಟ್ಟರು ಸತ್ಯಕಾಮ. ಅಂದು ಅವರು ಬಿಡಿಸಿ ಹೇಳಲೊಲ್ಲದ ಸತ್ಯ ಅವರ ಗರ್ಭದಿಂದ ನನ್ನ ಉಡಿಗೆ ಬಂದ ಕರಾಳ ದಿನ ಅಕ್ಟೋಬರ್ ಇಪ್ಪತ್ತು ಸಾವಿರದ ಒಂಭತ್ತನೂರಾ ತೊಂಭತ್ತೆಂಟು.

ಕಲ್ಲಹಳ್ಳಿಯ ಮಣ್ಣಿನಲ್ಲಿ ಮಣ್ಣಾಗಿ, ಹಸಿರಾಗಿ, ಚಿಗುರಾಗಿ, ಫಲವಾಗಿ ಹಾಡೂ ಹಕ್ಕಿಯ ಕಂಠದ ಇಂಪಾಗಿ ಇದ್ದಾರೆ ಸತ್ಯಕಾಮ ನಮ್ಮ-ನಿಮ್ಮ ನಡುವೆ ಸುಮ್ಮನೆ. ಅಂತಯೆ ಕಲ್ಲಹಳ್ಳಿಯ ತೋಟದಲ್ಲಿ ಅವರ ನೆನಪಿಗಾಗಿ ಮನೆ-'ಸುಮ್ಮನೆ'. ಇದೊಂದು ಗುಡಿಯಲ್ಲ, ಧ್ಯಾನ ಮಂದಿರ.

ಆಗಾಗ ಹೋಗಿ ಕುಳಿತು ಬರುತ್ತೇನೆ 'ಸುಮ್ಮನೆ' - ಮತ್ತೆ ಅವರ ನೆನಪಾದಾಗ ಹಾಡಿಕೊಳ್ಳುತ್ತೇನೆ ನನ್ನಷ್ಟಕ್ಕೆ ನಾನೇ..

ಹೊಂಟಿರೇನ, ಹೊಂಟಬಿಟ್ಟಿರೇನ !
ಸಂಸಾರದಿಸ ಬೀಜ ಹುರದು ಬ್ಯಾಳಿಯ ಮಾಡಿ
ಉಡಿಯಾಗ ಕಟಗೊಂಡು, ಸಕ್ಕಾಸರಗಿ ಆಡಿ
ಹೊಂಟಿರೇನ, ಹೊಂಟಬಿಟ್ಟಿರೇನ !
ಎಂದು... ಎಂದೆಂದೂ....

ಬಿ. ಆರ್. ಪೋಲೀಸ್ ಪಾಟೀಲ
ವಾತ್ಸಲ್ಯ, ಬನಹಟ್ಟಿ

# ಕುಡುಕಪ್ಪನ ಜ್ಞಾನೋದಯ

ಮುನಿಸಿಪಾಲ್ಟಿಯ ಅಧಿಕಾರ ವಹಿಸಿಕೊಂಡ ಕೂಡಲೇ ಕುಡಕಪ್ಪನವರು ತಮ್ಮ ಸೆಕ್ರೆಟರಿಗೆ ಕರೆದು ಆಜ್ಞಾಪಿಸಿಬಿಟ್ಟರು: 'ನೋಡಪಾ ಕರೆಪ್ಪಾ, ನಾ ಎಲ್ಲೆಲ್ಲಿ ಹೋಗ್ತೇನಿ ಅಲ್ಲೆಲ್ಲ ಗಾಂಧಿ ಚೌಕ, ಗಾಂಧಿರೋಡ್ ಅಂತ ಇರ್ತಾವ. ಆದ್ರ ನಮ್ಮ ರಾಸೂರಾಗ ಅಂಥಾದೊಂದು ಯಾಕಿಲ್ಲ ಅಂತ ಯೋಚ್ನೆ ಆಗ್ಯಾದ ನೋಡು. ನಾ ಪ್ರೆಸಿಡೆಂಟ ಆಗೇನಿ ಅಂದಮ್ಯಾಲ ಅಂಥಾದೊಂದು ಕೆಲಸಾ ಮೊದಲ ಆಗಬೇಕು ನೋಡಪಾ.'

ಸೆಕ್ರೆಟರಿ ತಲೆ ಕೆರೆದುಕೊಂಡು ಯೋಚನೆ ಮಾಡಿ ಹೇಳಿದ, 'ಬಸ್‌ಸ್ಟ್ಯಾಂಡ ಸರ್ಕಲನ್ಯಾಗ ಒಂದು ಗಾಂಧಿ ಸ್ಟ್ಯಾಚ್ಯೂ ಕೂಡಿಸಿದ್ರ ಭಲೋ ಆಗ್ತದರಿ.'

'ಖರೇ ನೋಡಲೇ, ಎಂಥಾ ಮೋಕಾದ ಜಾಗಾ ಅದಾ! ನನ ಮಕ್ಕಳು ಈ ಮೊದಲು ಪ್ರೆಸಿಡೆಂಟ ಆದ ಯಾವ ಜಾಮರ್ದನೂ ಈ ಕೆಲಸಾ ಮಾಡಿಲ್ಲ. ನೌನ, ಈ ಪ್ರೆಸಿಡೆಂಟಗಿರಿ ಎಷ್ಟ ದಿನ ಇರ್ತದೋ ಏನೋ ? ಎಲ್ಯರೆ ತಯಾರ ಸ್ಟ್ಯಾಚ್ಯೂ ಇದ್ದರ ತಂದು ಕೂಡಿಸು.'

'ಹುಮ್ನಾಬಾದ್ಯಾಗ ಒಂದು ಸ್ಟ್ಯಾಚ್ಯೂ ಇದ್ದಾಂಗದ. ಗಾಂಧಿ – ಅಂಬೇಡಕರ ಜಗಳದಾಗ ಹಾಂಗೇ ಧೂಳ ತಿಂತಾ ಬಿದ್ದಾದ ಅಂತಿದ್ರು. ಕೇಳಿ ನೋಡ್ತೇನಿ.' ತಲೆ ಕೆರೆಯುತ್ತ ಸೆಕ್ರೆಟರಿ ಹೇಳಿದ.

'ಏನ ಮಾಡ್ತ್ಯೋ ಮಾಡು. ನಾವು ಕುಟುಂಬ ಸಮೇತ ದೇವರಿಗೆ ಹೊಂಟೇವಿ, ಹರಕಿ ಮುಟ್ಟಸಾಕ. ಹಾಂಗೇ ಬೆಂಗಳೂರಿಗೆ ಹೋಗಿ ಹೈಕಮಾನಗೆ ಹಾರ ಹಾಕಿ ಬರ್ತೇವಿ. ನಾವು ಬರೋದ್ರಾಗ ಎಲ್ಲ ರೆಡಿ ಇರ್ಬೇಕು ನೋಡು. ಬಂದ ಕೂಡ್ಲೇ ನಾ ಉದ್ಘಾಟನಾ ಮಾಡ್ಬೇಕು.'

ಕುಡಕಪ್ಪನವರು ಎಲ್ಲಾ ದೇವರುಗಳ ಯಾತ್ರಾ ಮುಗಿಸಿಕೊಂಡು ಬೆಂಗಳೂರಿಗೆ ಹೋಗಿ ತಮ್ಮ ಪಾಲಿಟಿಕಲ್ ಗಾಡಫಾದರಗೆ ಅಷ್ಟವಿಧಾರ್ಚನೆಯೊಂದಿಗೆ ಷೋಡಷೋಪಚಾರ ಮಾಡಿ ರಾಸೂರಿಗೆ ಬರುವಷ್ಟರಲ್ಲಿ ಬಸ್‌ಸ್ಟ್ಯಾಂಡ ಸರ್ಕಲನಲ್ಲಿ ಸೆಕ್ರೆಟರಿ ಕಟ್ಟೆ ಕಟ್ಟಿಸಿ ಅದರ ಮೇಲೆ ಹುಮ್ನಾಬಾದಿನಿಂದ ಗಾಂಧಿ ಸ್ಟ್ಯಾಚ್ಯೂ ತಂದು ಕೂಡಿಸಿ, ಅದರ ಸುತ್ತ ಗೋಣಿ ತಟ್ಟು ಕಟ್ಟಿ ಮರೆಮಾಡಿಟ್ಟಿದ್ದ.

ಕುಡಕಪ್ಪನವರು ಊರಿಂದ ಬಂದ ಕೂಡಲೇ ಕೇಳಿದರು,'ಎಲ್ಲಾ ರೆಡಿ ಅದಾ ಏನಪಾ ? ನಮ್ಮ ಗಾಂಧಿ ಸ್ಟ್ಯಾಚ್ಯೂನೇ ಕೂಡ್ಸೀಯಲ್ಲೋ ?'

ಸೆಕ್ರೆಟರಿ ಹೌದೆಂದು ತಲೆಯಾಡಿಸಿದ.

ಒಂದು ಒಳ್ಳೆ ಮುಹೂರ್ತ ನೋಡಿ ಸ್ಟ್ಯಾಚ್ಯೂ ಉದ್ಘಾಟನೆಯ ಕಾರ್ಯಕ್ರಮ ಇಟ್ಟುಕೊಳ್ಳಲಾಯಿತು. ಮೊದಲೇ ನಿರ್ಧರಿಸಿದಂತೆ ನಮ್ಮ ಹೊಸ ಪ್ರೆಸಿಡೆಂಟ ಕುಡಕಪ್ಪನವರು ಇರಬೇಕಾದರೆ ಹೊರಗಿನಿಂದ ಬ್ಯಾರೆ ಅತಿಥಿ ಯಾಕೆ ಎಂದು ವಿಚಾರ ಮಾಡಿ ಯಾರಿಗೂ ಕರೆಸಲಿಲ್ಲ. ಬಾಜಾಬಜಂತ್ರಿಯೊಂದಿಗೆ ಸುಕ್ರಾರ ಸಂತೆಯ ದಿನ ಕುಡಕಪ್ಪನವರು ಊರದೇವಿ ಚೌಡಮ್ಮನಿಗೆ ಪೂಜೆ ಸಲ್ಲಿಸಿ ಬಸ್‌ಸ್ಟ್ಯಾಂಡ ಸರ್ಕಲ್ಲಿಗೆ



ಬಂದು, ಆರತಿ ಮಾಡಿ, ಊದ ಹಾಕಿ, ಕಾಯಿ ಒಡೆದು ಜನರ ಚಪ್ಪಾಳೆಯ ಸದ್ದಿನ ನಡುವೆ ಗಾಂಧಿ ಸ್ಟ್ಯಾಚ್ಯೂ ಮರೆ ಮಾಡಿದ್ದ ಗೋಣಿ ತಟ್ಟು ಸರಿಸಿ ಉದ್ಘಾಟನೆ ಮಾಡಿದರು. ಜನ ಒಕ್ಕೊರಲಿನಿಂದ 'ಬೋಲೋ ಮಹಾತ್ಮಾ ಗಾಂಧಿ ಕೀ ಜೈ' ಎಂದು ಕೇಕೆ ಹಾಕಿದರು. ಮುಗಿಲಂಥ ಮುಗಿಲು ಢಣಢಣ ಎಂದು ಪ್ರತಿಧ್ವನಿಸಿತು.

ಆದರೆ, ಕುಡಕಪ್ಪನವರ ಪಾದರಸ ಒಮ್ಮೆಲೆ ಏರಿತು. ನಿಂತಲ್ಲಿಂದಲೇ ಗಂಟಲು ಹರಿದುಕೊಂಡು ಸೆಕ್ರೆಟರಿಗೆ ಕೂಗಿದರು, 'ಏನಲೇ ಕರಿಯಾ, ನಾ ಗಾಂಧಿ ಸ್ಟ್ಯಾಚ್ಯೂ ಅಂತ ಹೇಳಿದರ ನೀ ಈ ಯಾವ ಮುದುಕನ ಗೊಂಬಿ ತಂದು ನಿಲ್ಸಿದ್ದೀ?'

ಏನೋ ಅನಾಹುತವಾಯಿತು ಎಂದು ಹೌಹಾರಿ ಸೆಕ್ರೆಟರಿ ಓಡಿ ಬಂದು ನಿವೇದಿಸಿ ಕೊಂಡ, 'ಇದು ಗಾಂಧಿ ಸ್ಟ್ಯಾಚ್ಯೂನೇ ಸೂರ್. ನೀವು ಹೇಳಿದ ಗಾಂಧಿ ಸ್ಟ್ಯಾಚ್ಯೂನೇ.'

'ಯಾವನಿಗೆ ಮಳ್ಳ ಮಾಡಬೇಕಂತಿ ? ನೌನ, ಇಂಥ ಗೊಂಬಿಗೋಳ ನಾ ಬಾಳ ನೋಡೇನಿ. ಹರ್ ಒಂದು ಊರಾಗ ಇಂಥಾ ಗೊಂಬಿ ಕೂಡ್ಸೋ ಫ್ಯಾಶನ್ ಆಗ್ಯಾದ. ನಾ ಈ ಮುದುಕನ ಕೈಯಾನ ಬಡಗೀನೇ ಮುರ್ದು ಹಾಕಿದ್ದೆ, ನನ ಮಗಂದು ಯಾರಿಗೂ ಗೊತ್ತೇ ಆಗಿರಲಿಲ್ಲ. ನಾ ಹೇಳಿದ್ದು ಈ ಗಾಂಧಿ ಅಲ್ಲ, ನನ್ನ ಜೊತೆಗೆ ಜೈಲಿನ್ಯಾಗ ಇದ್ದನಲ್ಲ, ಆ ಗಾಂಧಿ. ನಾವಿಬ್ಬರೂ ಕೂಡೇ ಕುಡೀತಿದ್ದೆವು, ಕೂಡೇ ಬೀಡಿ ಸೇದತಿದ್ದೆವು. ಅವನೂ ನನ್ನ ಹಾಂಗೇ ಸಿಕ್ಕಿಬಿದ್ದು ಜೈಲಿಗೆ ಬಂದಿದ್ದ. ನಾವೆಲ್ಲ ಅಂವನ ಮುಂದ ಏನು? ಅಂವ ಮಗಾ, ಖರೆ ಗಂಡಸ ಇದ್ದ. ದೊಡ್ಡ ದೊಡ್ಡ ಕೆಲಸ ಮಾಡ್ತಿದ್ದ. ಆದ್ರೂ ಭಾಳ ಸಾರೆ ತಪ್ಪಿಸ್ಕೊಂಡ. ನಾ ಅಂಥವನ ಸ್ಟ್ಯಾಚ್ಯೂ ಕೂಡ್ಸೂ ಅಂತ ಹೇಳಿದ್ದೆ' ಎಂದು ಕುಡುಕಪ್ಪನವರು ಆವೇಶದಲ್ಲಿ ತಮ್ಮ ಹೊಟ್ಟೆಯಲ್ಲಿದ್ದ ಮಾತುಗಳನ್ನು ತುಟಿಯ ಮೇಲೆ ತಂದು ನುಡಿದುಬಿಟ್ಟರು. ಸೆಕ್ರೆಟರಿ ಅವರನ್ನು ಸಮಾಧಾನ ಮಾಡಿ 'ಇದು ಸಾರ್ವಜನಿಕ ಜಾಗ. ಇಲ್ಲಿ ಅಂಥದೆಲ್ಲ ಹೇಳಬಾರ್ದು' ಎಂದು ಕಿವಿಯಲ್ಲಿ ಹೇಳಿ ಅವರನ್ನು ಬೇರೆ ಕಡೆಗೆ ಕರೆದುಕೊಂಡು ಹೋಗಿ ತಿಳಿಸಿ ಹೇಳಿದ, 'ನೀವು ಈ ಕುರ್ಚಿ ಮಜಬೂತ ಮಾಡ್ಕೋಬೇಕು ಅಂತಿದ್ದರ ಆ ನಿಮ್ಮ ಗಾಂಧಿನ ಮರತು ಈ ಗಾಂಧಿಯ ಹೆಸರು ಹೇಳಿ ಜೈಕಾರ ಹಾಕಬೇಕು. ನಿಮ್ಮ ತ್ವಾಟದ ಮನ್ಯಾಗ ಏನ ಕುಡ್ದರೂ, ಏನ ತಿಂದರೂ, ಏನ ಮಾಡಿದ್ರೂ, ಯಾರಿಗೆ ಒಯ್ದು ಹಾಕ್ಕೊಂಡು ಮಕ್ಕೊಂಡ್ರೂ ಯಾರೂ ಏನೂ ಅನ್ನಲ್ಲ. ಆದರ ನೀವು ಪಬ್ಲಿಕನ್ಯಾಗ ಹೀಂಗೆಲ್ಲ ಮಾತಾಡ್ಬಾರ್ದು.'

ಕುಡುಕಪ್ಪನವರಿಗೆ ಜ್ಞಾನೋದಯವಾಯ್ತು. ಕೂಡಲೆ ತಮ್ಮ ಎಲ್ಲ ಮಾಯಾ ಮಮಕಾರಗಳನ್ನು ಮರೆತು, ಮನಸ್ಸಿನಲ್ಲಿ ನಾಟಿದ್ದ ಗಾಂಧಿನ್ನ ಮರೆತು, ಎದುರಿಗೆ ಕಲ್ಲಾಗಿ ನಿಂತಿದ್ದ ಗಾಂಧಿಯ ಜೈಕಾರ ಹಾಕಿದ, 'ಬೋಲೋ ಮಹಾತ್ಮಾ ಗಾಂಧಿ ಕೀ...........'

ಜನಸ್ತೋಮವೆಲ್ಲ ದನಿಗೂಡಿಸಿ ಕೂಗಿತು, '.........ಜೈ'

**ಪ್ರೊ। ಬಾಲಚಂದ್ರ ಜಯಶೆಟ್ಟಿ**
ನಮ್ಮ ಮನೆ, ಜಯನಗರ, ಸೇಡಮ್ ರಸ್ತೆ, ಗುಲಬರ್ಗಾ – ೫೮೫ ೧೦೫

# ಆರ್ಥಿಕತೆ ಮತ್ತು ಸಂಸ್ಕೃತಿ

**ಪ್ರಗತಿಯತ್ತ ಸಾಗುವ ಯಾವುದೇ ಸಮಾಜದ ಜನಜೀವನದಲ್ಲಿ ಆರ್ಥಿಕತೆ ಮತ್ತು ಸಂಸ್ಕೃತಿ ಎಂಬ ಮೌಲ್ಯಗಳು ಮಹತ್ತರ ಪಾತ್ರ ನಿರ್ವಹಿಸುತ್ತವೆ. ಆದರೆ ಇವುಗಳಿಗೆ ಕುತ್ತುಂಟಾಗುವುದು ಸಂಕುಚಿತ ಮನೋಭಾವದ, ಪ್ರತಿಗಾಮಿ ಚಿಂತನೆಗಳುಳ್ಳ ರಾಜಕೀಯ ಮತ್ತು ಮತಾಂಧ ಶಕ್ತಿಗಳಿಂದ. ತಂತಮ್ಮ ಹಿತಾಸಕ್ತಿಗಳಿಗಾಗಿ ಮತಧರ್ಮವನ್ನು ದುರುಪಯೋಗಮಾಡಿಕೊಳ್ಳುವ, ಇತಿಹಾಸವನ್ನು ತಿರುಚುವ ಇದೇ ಶಕ್ತಿಗಳು ಸ್ಥಾವರದ ಕೇಂದ್ರಗಳಾಗುತ್ತವೆ. ಪುರಾತನ ಮೌಲ್ಯಗಳು, ಗ್ರಂಥಗಳು ಕೃತಿಗಳು ಹೊಸ ಅರ್ಥ ಪಡೆಯುತ್ತವೆ. ಇಂದಿನ ಭಾರತೀಯ ಸಂದರ್ಭದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವೂ ಈ ಪ್ರಕ್ರಿಯೆಗೆ ಹೊರತಲ್ಲ.**

ಅರವಿಂದ ಚೊಕ್ಕಾಡಿ

ಸ್ವಾತಂತ್ರ್ಯಾನಂತರದ ಭಾರತದ ಇತಿಹಾಸದಲ್ಲಿ ೧೯೯೦ರ ದಶಕ ಎರಡು ಕಾರಣಗಳಿಗಾಗಿ ಬಹು ಮುಖ್ಯವಾಗುತ್ತದೆ. ಮೊದಲಿನದು – ಆ ತನಕ ಸರಕಾರದ ಆದ್ಯತೆಯಾಗಿದ್ದ ಸಮಾಜವಾದಿ ಚಿಂತನೆಯ ಸ್ಥಾನಕ್ಕೆ ಜಾಗತೀಕರಣ, ಖಾಸಗೀಕರಣದ ಮೂಲಕ ಬಂಡವಾಳಶಾಹಿ ಚಿಂತನೆಯ ಅತಿಯಾದ ಪ್ರವೇಶ. (ಗಮನಿಸಿ – ಇತ್ತೀಚೆಗೆ ಕೇಂದ್ರ ಗೃಹಮಂತ್ರಿಗಳು ಸಂವಿಧಾನದ ಆಶಯವಾದ ಸಮಾಜವಾದಿ ಸಮಾಜ ಇಂದಿಗೆ ಅಪ್ರಸ್ತುತವಾಗಿರುವುದರಿಂದ ಅದನ್ನು ಕಿತ್ತುಹಾಕಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.)

ಇನ್ನೊಂದು, ರಾಜಕೀಯ ಹಿತಾಸಕ್ತಿಗಾಗಿ ಸಮಾಜದ ಧ್ರುವೀಕರಣದ ತೀವ್ರತೆ. ಜನರಲ್ಲಿನ ಧಾರ್ಮಿಕ ನಂಬಿಕೆಯನ್ನು ಮತೀಯ ಮೂಲಭೂತವಾಗಿ ಪರಿವರ್ತಿಸಿ, ಅನ್ಯ ಧರ್ಮೀಯರ ವಿರುದ್ಧ ಎತ್ತಿ ಕಟ್ಟಿ ರಾಜಕೀಯ ಲಾಭ ಪಡೆಯುವ ಹುನ್ನಾರ. ಮೂಲಭೂತವಾದವನ್ನು ಪ್ರೇರೇಪಿಸುವ ಮೂಲಕ ಯಾವ ಚುನಾವಣೆಯನ್ನಾದರೂ ಗೆಲ್ಲಬಹುದು ಎಂಬ ಅಪಾಯಕಾರಿ ನಿಲುವು ಇತ್ತೀಚೆಗೆ ಹೆಚ್ಚು ಹೆಚ್ಚಾಗಿ ಕಂಡುಬರತೊಡಗಿದೆ.

ಇತ್ತೀಚೆಗೆ ಜರುಗಿದ ಗುಜರಾತ್ ನರಮೇಧ ಮೂಲಭೂತವಾದದ ವ್ಯಾಪಕತೆಯನ್ನು ಮನಗಾಣಿಸಿಕೊಡುತ್ತದೆ. ಅದು ಸಾಮಾನ್ಯ ಜನರ ಮಟ್ಟದಲ್ಲಿ ಮಾತ್ರ ಉಳಿದಿಲ್ಲ, ಬುದ್ಧಿಜೀವಿಗಳ ವಲಯವನ್ನೂ ಬಾಚಿಕೊಳ್ಳುತ್ತಿದೆ. ಅಂಥ ಒಂದು ನಿದರ್ಶನವನ್ನು ಇತ್ತೀಚೆಗೆ ಒಂದು ಪತ್ರಿಕಾ ವರದಿ ಹೊರಗೆಡಹಿತು. ವಿದ್ವಾಂಸರೆನ್ನಿಸಿಕೊಂಡವರು ನಡೆಸಿದ ಆರ್ಥಿಕ ವಿಚಾರ ಗೋಷ್ಠಿಯಲ್ಲಿ "ಕೌಟಿಲ್ಯನ ಅರ್ಥಶಾಸ್ತ್ರವೇ ಇಂದಿಗೆ ಪ್ರಸ್ತುತ" ಎಂಬ ವಿದ್ವಾಂಸರ ಅಭಿಪ್ರಾಯವನ್ನು ವರದಿ ಮಾಡಲಾಯಿತು.

ಇಂಥ ಅಭಿಪ್ರಾಯ ಕಂಡುಬರಬೇಕಾದರೆ ಒಂದೋ ಭಾಗವಹಿಸಿದ ವಿದ್ವಾಂಸರೆಲ್ಲರೂ ಅರ್ಥವಿಜ್ಞಾನದ ಬಗ್ಗೆ ಅಜ್ಞರಾಗಿರಬೇಕು. ಹಾಗಿರಲು ಖಂಡಿತಾ ಸಾಧ್ಯವಿಲ್ಲ. ಇಲ್ಲವೇ ಈ ಅಭಿಪ್ರಾಯದ ಉದ್ದೇಶ ಒಂದು ವರ್ಗದ ರಾಜಕೀಯ ಹಿತಾಸಕ್ತಿಯನ್ನು ಪೋಷಿಸುವುದಾಗಿರಬೇಕು. ಸ್ವದೇಶ, ಸ್ವಧರ್ಮ, ಸ್ವಸಂಸ್ಕೃತಿಗಳ ಕುರಿತಾಗಿ ಜನರಲ್ಲಿ ಭಾವನಾತ್ಮಕ ಒಲವು ಅತ್ಯಂತ ಸಹಜ. ನಾವೆಲ್ಲ ನಂಬಿರುವಂತೆ ಕೌಟಿಲ್ಯನು **ಅರ್ಥಶಾಸ್ತ್ರ**ವೆಂಬ ಕೃತಿಯ ಕರ್ತೃ ಮಾತ್ರವಲ್ಲ, ಭಾರತ ವಿದೇಶೀಯರ ದಾಳಿಗೆ ತುತ್ತಾಗುತ್ತಿದ್ದಾಗ ಮೌರ್ಯ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿದ ನಿಪುಣ ರಾಜತಂತ್ರಜ್ಞನೂ ಹೌದು. ಹಾಗಿರುವಾಗ ಆತನ ಬಗ್ಗೆ ಇರುವ ಭಾವನಾತ್ಮಕ ಒಲವನ್ನು ರಾಜಕೀಯ ವರ್ಗ ಒಂದಕ್ಕೆ ಒದಗಿಸಿಕೊಡುವುದು ನಮ್ಮ ವಿದ್ವಾಂಸರ ಆದ್ಯತೆಯಾಗಿಬಿಟ್ಟಿತೇನೋ ಎನಿಸುತ್ತದೆ.

ಎಲ್ಲಕ್ಕೂ ಮೊದಲು ಕೌಟಿಲ್ಯನು ರಚಿಸಿದನೆನ್ನಲಾದ ಅರ್ಥಶಾಸ್ತ್ರದ ೧೫ ಭಾಗಗಳಲ್ಲಿ, ೨ ಮತ್ತು ೩ನೆಯ ಭಾಗಗಳು ಮಾತ್ರ ಅತ್ಯಂತ ಪ್ರಾಚೀನವಾಗಿದ್ದು ಇತರ ಭಾಗಗಳನ್ನು ಹಲವು ಕರ್ತೃಗಳು ನಾನಾ ಕಾಲದಲ್ಲಿ ರಚಿಸಿದಂತೆ ತೋರುತ್ತದೆ ಎಂಬ ಆರ್. ಎಸ್. ಶರ್ಮಾ ಅವರ ಅಭಿಪ್ರಾಯವನ್ನು ಗಮನಿಸಬೇಕು. ಆದರೆ ನಂಬಿಕೆಯನ್ನೇ ಇತಿಹಾಸ ಎನ್ನುವ ವಿದ್ವಾಂಸರು ಇಂಥ ಅನುಮಾನಗಳನ್ನು ಕೂಲಂಕಷವಾಗಿ ವಿಮರ್ಶಿಸುವುದಕ್ಕೆ ತೊಡಗುವುದಿಲ್ಲ. ನಿರ್ದಾಕ್ಷಿಣ್ಯವಾಗಿ ಯಾವ ಪುರಾವೆಯನ್ನೂ ಮುಂದೊಡ್ಡದೆ ಪ್ರೊ॥ ಆರ್. ಎಸ್. ಶರ್ಮಾ ಅವರ ವಾದವನ್ನು ತಳ್ಳಿಹಾಕಿಬಿಡುತ್ತಾರೆ !

ಕೃತಿಯ ರಚನೆಯ ಬಗೆಗಿನ ವಾದ ವಿವಾದಗಳೇನೇ ಇರಲಿ, ಅದರ ವಸ್ತುವಿನತ್ತ ಗಮನ ಹರಿಸೋಣ. ಮೇಲುವರ್ಗದ ತುಳಿತವನ್ನು ಒಪ್ಪಿಕೊಂಡಿದ್ದ ವ್ಯವಸ್ಥೆಯಲ್ಲೇ ಬದುಕಿದ್ದೂ, ಕೆಳವರ್ಗದ ಹಕ್ಕುಗಳನ್ನು ಎತ್ತಿಹಿಡಿಯುವ ಕೌಟಿಲ್ಯನ ಪ್ರಯತ್ನ ನಿಜಕ್ಕೂ ಶ್ಲಾಘನೀಯ. ಕೆಳವರ್ಗವು ಮೇಲುವರ್ಗದ ಒಳಿತಿಗಾಗಿಯೇ ಬದುಕಬೇಕಾದ್ದಿಲ್ಲ, ಬದುಕುವುದು ಕೆಳವರ್ಗದ ಹಕ್ಕು ಎನ್ನುತ್ತಾನೆ ಕೌಟಿಲ್ಯ. ಮತ್ತೂ ಮುಂದುವರಿದು ದೇಶ ರಕ್ಷಣೆಯ ಪ್ರಧಾನ ಅಂಗವಾದ ಸೈನ್ಯದ ನೇಮಕಾತಿಯಲ್ಲಿ ಎಲ್ಲ ವರ್ಗದ ಜನರನ್ನೂ ಆಯ್ದುಕೊಳ್ಳಬೇಕು ಎನ್ನುತ್ತಾನೆ. ಮನಸ್ಸಿಗೆ ಸಂತೋಷ ಕೊಡುವ ಆಟೋಟಗಳು, ಹಬ್ಬ ಹರಿದಿನಗಳು ನಡೆಯಬೇಕು ಎನ್ನುವ ಕೌಟಿಲ್ಯ ಅವು ವೈಯಕ್ತಿಕ ಅಥವಾ ಸಾರ್ವಜನಿಕ ಹಿತಾಸಕ್ತಿಗೆ ಭಂಗ ತರಬಾರದು ಎಂದು ಎಚ್ಚರಿಸುತ್ತಾನೆ. ವಿವಾಹ ವಿಧಿಗಳ ಬಗ್ಗೆ, ಗೃಹಕಾರ್ಯಗಳ ಬಗ್ಗೆ ಸ್ಮೃತಿಗಳ ಪರವಾಗಿಯೇ ತನ್ನ ನಿಲುವನ್ನು ಮುಂದಿಡುವ ಕೌಟಿಲ್ಯ ಆ ಕಾಲಮಾನಕ್ಕೆ ತಕ್ಕುದಾಗಿಯೇ ಹೇಳಿದ್ದಾನೆ. ಆದರೆ ಆತ ಗೃಹ ವ್ಯವಸ್ಥೆಯಲ್ಲಿ ಹೆಂಡತಿಯ ಕರ್ತವ್ಯವನ್ನು ಮಾತ್ರ ಉಲ್ಲೇಖಿಸುವುದಿಲ್ಲ. ಹೆಂಡತಿಯ ಕುರಿತಾಗಿ ಗಂಡನ ಕರ್ತವ್ಯಗಳೇನು ಎಂಬುದನ್ನೂ ದಾಖಲಿಸುತ್ತಾನೆ. ವಿಧವಾ ಪುನರ್ವಿವಾಹವನ್ನು ಪರಿಗಣಿಸುವ ಆತನ ಚಿಂತನೆ ಇಂದಿನ ದಿನಕ್ಕೂ ಒಂದು ಪ್ರಗತಿಗಾಮಿ ಹೆಜ್ಜೆಯಾಗಿದೆ ಎನ್ನುವುದು ಮರೆಯಲೇಬಾರದ ವಿಷಯ.

ಆದರೆ, ಕೌಟಿಲ್ಯ ರಾಜನ ಅನಿಯಂತ್ರಿತ ಸಾರ್ವಭೌಮತ್ವವನ್ನು ಪುಷ್ಟೀಕರಿಸುತ್ತಾನೆ. 'ನೀತಿ' ರಾಜನನ್ನು ನಿಯಂತ್ರಿಸಬೇಕು ಎನ್ನುತ್ತಾನೆ. ಹೀಗೆನ್ನುವ ಕೌಟಿಲ್ಯನ 'ನೀತಿ'ಯನ್ನು ಕಾರ್ಯಗತಗೊಳಿಸುವವನು ರಾಜನೇ ಆಗಿರುತ್ತಾನೆ ಎಂಬುದು ಗಮನಾರ್ಹ ಸಂಗತಿ. ಒಂದು ಸಮಾಜದ ರೀತಿನೀತಿಗಳನ್ನು ರೂಪಿಸುವಲ್ಲಿ ಜನಜೀವನ, ಧರ್ಮ, ಸಂಸ್ಕೃತಿಗಳು ಪ್ರಧಾನ ಪಾತ್ರ ವಹಿಸುತ್ತವೆ ಎನ್ನುವುದೇನೋ ಸತ್ಯ. ಆದರೆ ಅನಿಯಂತ್ರಿತ ಸಾರ್ವಭೌಮ ಅಧಿಕಾರ ಉಳ್ಳ ಪ್ರಭುತ್ವ ಸಾಮಾಜಿಕ ನೀತಿಗಳನ್ನು ತನಗಿಷ್ಟ ಬಂದಂತೆ ತಿರುಚಿದೆ ಎನ್ನುವುದಕ್ಕೆ ಸಾಕಷ್ಟು ಪುರಾವೆಗಳಿವೆ. ಇಂದಿನ ದಿನಗಳಲ್ಲಿಯೂ ಕೂಡ ಅತ್ಯಂತ ಮೇಲುವರ್ಗವನ್ನು ನಿಯಂತ್ರಿಸುವ ಶಕ್ತಿ 'ನೀತಿ'ಗೆ ಇಲ್ಲ ಎನ್ನುವುದನ್ನು ಗಮನಿಸಬೇಕು. ಆದ್ದರಿಂದಲೇ ಹೈಟೆಕ್ ವೇಶ್ಯಾವಾಟಿಕೆಗಳಲ್ಲಿ ತೊಡಗಿಕೊಂಡವರೂ ನಾಯಕರಾಗುವುದಕ್ಕೆ, ನಾಲ್ಕೈದು ಗಂಡಂದಿರನ್ನು , ಏಳೆಂಟು ಹೆಂಡತಿಯರನ್ನು ಕಟ್ಟಿಕೊಂಡ ಮಂದಿಯನ್ನೂ ಸಾಮಾನ್ಯ ಜನ ಆರಾಧಿಸುವುದಕ್ಕೆ ಸಾಧ್ಯವಾಗಿದೆ. ನಿತ್ಯ ಸುಖ ಲೋಲುಪ್ತರಾಗಿ ಜನರನ್ನು ಕೊಳ್ಳೆ ಹೊಡೆಯುವವರು ತೆರಿಗೆಯಿಂದ ತಪ್ಪಿಸಿಕೊಳ್ಳಲು ಅವಕಾಶವಿದೆ. ಹೀಗಿರುವಾಗ 'ನೀತಿ' ರಾಜನನ್ನು ನಿಯಂತ್ರಿಸುತ್ತದೆ ಎಂಬುದು ಒಂದು ಭ್ರಮೆ ಮಾತ್ರ.

ರಾಜ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ, ಕೌಟಿಲ್ಯ ಕೊಡುವ ಸಲಹೆಗಳು ಒಂದು ಸಮಾಜದ ಅಧಃಪತನಕ್ಕೆ ದಾರಿ ತೋರಿಸುತ್ತವೆ. ತನ್ನ ಮಗ ತನಗೆ ಎದುರಾಡದಂತೆ ಆತನನ್ನು ಮದ್ಯಾಸಕ್ತನನ್ನಾಗಿಯೂ, ಸ್ತ್ರೀ ಲೋಲುಪ್ತನನ್ನಾಗಿಯೂ ಸಿದ್ಧಪಡಿಸಬಹುದೆಂಬ ಕೌಟಿಲ್ಯನ ನೀತಿ ರಾಜನಿಗೆ ಸಂಬಂಧಿಸಿದ್ದಾಗಿತ್ತು. ಆದರೆ ಈಗಿನ ಪ್ರಜಾರಾಜ್ಯದಲ್ಲಿ ಪ್ರತಿಯೊಬ್ಬರೂ ಈ ತತ್ವವನ್ನು ಅಳವಡಿಸಿಕೊಳ್ಳತೊಡಗಿದರೆ ಈ ದೇಶದ ಅಧಃಪತನಕ್ಕೆ ಬೇರಾರೂ ಮುನ್ನುಡಿ ಬರೆಯಬೇಕಿಲ್ಲ.

ಗೂಢಚಾರ ವ್ಯವಸ್ಥೆಯಲ್ಲಿ ವೇಶ್ಯೆಯರ ಬಳಕೆ, ತನಗೆ ತಿರುಗಿ ಬಿದ್ದವರನ್ನು ಹೆಂಡತಿ, ಮಕ್ಕಳು, ಸಾಮಂತರು, ಅಮಾತ್ಯರೆನ್ನದೆ ಕೊಂದುಹಾಕುವುದು, ಪೊಳ್ಳು ಆಶ್ವಾಸನೆಗಳನ್ನು ಕೊಡುವುದು, ಇವೇ ಮೊದಲಾದವು ಕೌಟಿಲ್ಯನು ಪ್ರಭುತ್ವಕ್ಕೆ ಬೋಧಿಸುವ ಕಾರ್ಯತಂತ್ರಗಳು !

ಈ ಎಲ್ಲ ಸಲಹೆಗಳು ಕೌಟಿಲ್ಯ ಬದುಕಿದ್ದ ವ್ಯವಸ್ಥೆಯಲ್ಲಿ ಸಮಂಜಸವಾಗಿರಬಹುದು. ಆದರೆ ನಮ್ಮ ಮುಂದಿರುವ ಪ್ರಶ್ನೆ ಆತನ ಪ್ರಸ್ತುತತೆ. ಈಗ ಈ ದೇಶಕ್ಕೆ ಅಗತ್ಯವಾಗಿರುವುದು ಪೊಳ್ಳು ಆಶ್ವಾಸನೆಗಳನ್ನು ಕೊಟ್ಟು ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಳ್ಳುವ ಆಡಳಿತಗಾರರಲ್ಲ. ಪ್ರಗತಿಪರ ಕಾರ್ಯಕ್ರಮಗಳನ್ನು ಜಾರಿಗೆ ತರಬಲ್ಲ ಪಾರದರ್ಶಕ ಆಡಳಿತ. ಇಲ್ಲಿ ಗುಪ್ತ ಕಾರ್ಯಸೂಚಿಯನ್ನಿಟ್ಟುಕೊಂಡಿರುವ ಆಡಳಿತ ವ್ಯವಸ್ಥೆ ಅತ್ಯಂತ ಅಪಾಯಕಾರಿ. ದುರದೃಷ್ಟವಶಾತ್ ಜನರನ್ನು, ರಾಷ್ಟ್ರೀಯ ಸಮಸ್ಯೆಗಳಿಗೆ ವಿಮುಖರನ್ನಾಗಿ, ಆಡಳಿತದ ಲೋಪದೋಷಗಳನ್ನು ಮರೆಮಾಚುವುದಕ್ಕಾಗಿ ಕೌಟಿಲ್ಯನ ಆಣತಿಯಂತೆ ಭ್ರಮೆಯಲ್ಲಿ ಕೆಡಹುವ ಪ್ರಕ್ರಿಯೆ ಭರದಿಂದ ಸಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರವೇ ಪ್ರಸ್ತುತ

ಎನ್ನುವ ವಾದವೂ ಅಂಥ ಒಂದು ಪ್ರಯತ್ನವೇ ಆಗಿದೆ ಎನ್ನಬಹುದು.

ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಮುಕ್ತ ಚರ್ಚೆಗೆ ಅವಕಾಶ ಇದೆ. ಇರಬೇಕು. ಆದರೆ ಕೌಟಿಲ್ಯನನ್ನು ಯಥಾವತ್ತಾಗಿ ಸ್ವೀಕರಿಸಿದರೆ ಇಲ್ಲಿ ಸಾರ್ವಜನಿಕ ಚರ್ಚೆಗೆ ವೇದಿಕೆಗಳೇ ಇರುವುದಿಲ್ಲ. ಯಾರೂ ಆಡಳಿತಗಾರರನ್ನು ಪ್ರಶ್ನಿಸುವಂತಿಲ್ಲ. ಆ ದೃಷ್ಟಿಯಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸುವವರು, ಟಾಡಾ, ಪೋಟೋ, ಕೋಕಾಗಳನ್ನು ಜಾರಿಗೆ ತರುವವರು ಕೌಟಿಲ್ಯನ ಅನುಯಾಯಿಗಳೇ ಆಗಿದ್ದಾರೆ. ಈ ಕಾಯ್ದೆಗಳು ಬಹುಮಟ್ಟಿಗೆ ತನ್ನ ಮೂಲ ಉದ್ದೇಶವನ್ನು ಸಾಧಿಸದೆ ವಿರೋಧಿಗಳನ್ನು ಹತ್ತಿಕ್ಕುವುದಕ್ಕಾಗಿ ಬಳಸಲ್ಪಟ್ಟಿರುವುದನ್ನು, ಬಳಸಲ್ಪಡುತ್ತಿರುವುದನ್ನು ಗಮನಿಸಬೇಕು.

ಆರ್ಥಿಕ ನೆಲೆಗಟ್ಟಿನಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವು ಪ್ರಸ್ತಾಪಿಸುವ ಅಂಶಗಳು ಕೆಲವೇ ಕೆಲವು. ಲಂಚ–ಭ್ರಷ್ಟಾಚಾರಗಳ ನಿಗ್ರಹಕ್ಕೆ ಸಾರ್ವಜನಿಕರಿಂದ ದೂರು ಸ್ವೀಕರಿಸುವುದು, ಬಂಜರು ಭೂಮಿಯನ್ನು ವ್ಯವಸಾಯ ಯೋಗ್ಯವಾಗಿಸಲು ಶೂದ್ರವರ್ಗವನ್ನು ಸಾಮೂಹಿಕವಾಗಿ ಸ್ಥಳಾಂತರಿಸುವುದು, ತೆರಿಗೆ ಸಂಗ್ರಹದ ಕೊರತೆಯುಂಟಾದಾಗ ಭೂತ ಭಯದ ನಿವಾರಣೆಯ ಕಾರಣವನ್ನೊಡ್ಡಿ ಹಣ ಸಂಗ್ರಹಿಸುವುದು, ರಾಜ್ಯದಲ್ಲಿರಬೇಕಾದ ಅಧಿಕಾರಿಗಳ ಸಂಬಳ, ಸೌಲಭ್ಯ, ಅಪರ ಮರಣಾನಂತರ ಕುಟುಂಬಕ್ಕೆ ಒದಗಿಸಬೇಕಾದ ಸೌಲಭ್ಯಗಳು, ಇಂಥ ಕೆಲವು ಆರ್ಥಿಕ ವಿಚಾರಗಳ ಕುರಿತು ಹೇಳುತ್ತಾನಾದರೂ ಆಧುನಿಕ ಅರ್ಥವಿಜ್ಞಾನದ ವ್ಯಾಪ್ತಿಯ ದೃಷ್ಟಿಯಲ್ಲಿ ಇವಾವುವೂ ಆತನ ಬಹು ದೊಡ್ಡ ಕೊಡುಗೆ ಎನ್ನಲಾಗದು.

ಬಹಳ ವ್ಯಾಪಕವಾದ ಆಧುನಿಕ ಅರ್ಥವಿಜ್ಞಾನದ ಪಿತ ಎಂದು ಕರೆಸಿಕೊಂಡವನು 'ಆ್ಯಡಂ ಸ್ಮಿತ್'. ''ಸ್ಮಿತ್‌ನ ತನಕ ನಾವು ಅರ್ಥಶಾಸ್ತ್ರವನ್ನು ಚರ್ಚಿಸುತ್ತಿದ್ದೆವು. ಅವನ ನಂತರ ಚರ್ಚಿಸುವ ಅರ್ಥಶಾಸ್ತ್ರದ ಹಂತವನ್ನು ತಲುಪಿದ್ದೇವೆ'' ಎಂಬುದು ಅಲೆಗ್ಸಾಂಡರ್ ಗ್ರೇ ಎಂಬ ಆರ್ಥಿಕ ತಜ್ಞನ ಅಭಿಮತ. ಸ್ಮಿತ್ ೧೭೭೬ರಲ್ಲಿ ಪ್ರಕಟವಾದ ತನ್ನ ಕೃತಿ, 'ಆ್ಯನ್ ಎನ್‌ಕ್ವಯರಿ ಇನ್ ಟು ದ ನೇಚರ್ ಆ್ಯಂಡ್ ಕಾಸಸ್ ಆಫ್ ವೆಲ್ತ್ ಆಫ್ ನೇಷನ್ಸ್'ನಲ್ಲಿ ಅರ್ಥಶಾಸ್ತ್ರವೆಂದರೆ ಹಣ ಗಳಿಸುವುದನ್ನು ಮತ್ತು ಖರ್ಚು ಮಾಡುವುದನ್ನು ಅಧ್ಯಯನ ಮಾಡುವ ಶಾಸ್ತ್ರ ಎಂದು ಕರೆದ. ಆತನ ವ್ಯಾಖ್ಯೆಗೆ ಸಾಕಷ್ಟು ಪರ-ವಿರೋಧಗಳು ಬಂದವು. ತದನಂತರ ಡಾ|| ಆಲ್‌ಫ್ರೆಡ್ ಮಾರ್ಷಲ್ ಅವರು ಅರ್ಥಶಾಸ್ತ್ರವನ್ನು ಮಾನವ ಕಲ್ಯಾಣದ ಕುರಿತು ಅಧ್ಯಯನ ಮಾಡುವ ಶಾಸ್ತ್ರವೆಂದು ಕರೆದರು.

ಮುಂದಿನ ಅರ್ಥತಜ್ಞರಾದ ಲಯನೊಲ್ ರಾಬಿನ್ಸ್, ಪ್ರೊ. ಸ್ಯಾಮ್ಯುಯೆಲ್‌ಸನ್, ಟಿ. ಆರ್. ಮಾಲ್ತಸ್, ಜಾನ್ ಮೆನಾರ್ಡ್ ಕೇನ್ಸ್, ಗುನ್ನಾರ್ ಮಿರಡಾಲ್ ಮುಂತಾದವರು ಆಧುನಿಕ ಅರ್ಥ ವಿಜ್ಞಾನಕ್ಕೆ ಹಲವು ಆಯಾಮಗಳನ್ನು ಕೊಟ್ಟರು. ಕಾರ್ಲ್ ಹೆನ್ರಿಕ್ ಮಾರ್ಕ್ಸ್‌ರ ಆಗಮನದೊಂದಿಗೆ ಅರ್ಥವಿಜ್ಞಾನವು ದುಡಿಯುವ ವರ್ಗಕ್ಕೆ ಹೆಚ್ಚು ಒತ್ತು ಕೊಡುವಂತಾಯಿತು.

ಇಂದು ನಾವು ಇಡೀ ಜಗತ್ತು ಒಂದು ಆರ್ಥಿಕ ಘಟಕವೆನಿಸುವ ಹಂತದಲ್ಲಿದ್ದೇವೆ. ಅರ್ಥವಿಜ್ಞಾನದಲ್ಲಿ ಹೊಸ ಹೊಸ ತತ್ವಗಳಿವೆ. ಅನುಭೋಗಿಯ ಮಿಗುತೆ, ಪರಿಣಾಮಕಾರಿ ಬೇಡಿಕೆ, ಸಮಾಜವಾದ, ಸಮತಾವಾದ, ಉಳಿತಾಯ, ಹೂಡಿಕೆ ಮುಂತಾದ ಸಿದ್ಧಾಂತಗಳು, ನಿಯಮಗಳು ಇವೆ. ಇಂದು ಒಂದು ಕಾಗದವೂ ಹಣವಾಗಿ ಚಲಾವಣೆಯಲ್ಲಿದೆ. ಭಾರತದ ರಿಸರ್ವ್ ಬ್ಯಾಂಕ್ ಕನಿಷ್ಠ ಕಾಪುನಿಧಿ ಪದ್ಧತಿ, ಅಂದರೆ ೧೧೫ ಕೋಟಿ ರೂಪಾಯಿ ಮೌಲ್ಯದ ಚಿನ್ನ ಹಾಗೂ ೮೫ ಕೋಟಿ ರೂಪಾಯಿ ಮೌಲ್ಯದ ದಾಖಲೆ ಪತ್ರ, ಹೀಗೆ ಒಟ್ಟು ೨೦೦ ಕೋಟಿ ರೂಪಾಯಿ ಮೌಲ್ಯವನ್ನು ಭದ್ರತಾ ಠೇವಣಿಯಾಗಿರಿಸಿಕೊಂಡು ಅಗತ್ಯವಿದ್ದಷ್ಟು ಕರೆನ್ಸಿ ನೋಟುಗಳನ್ನು ಚಲಾವಣೆಗೆ ತರುತ್ತಿದೆ. ನಮ್ಮ ಬ್ಯಾಂಕಿಂಗ್ ಕ್ಷೇತ್ರ ಬೆಳೆದು ನಿಂತಿದೆ. ಉದ್ಯೋಗ ನಿರ್ಮಾಣದ ಯೋಜನೆಗಳು, ಅದರ ಸಾಧನೆ ವೈಫಲ್ಯಗಳು ನಮ್ಮ ಮುಂದಿವೆ. ಜನಸಂಖ್ಯಾಸ್ಫೋಟ ಬೃಹತ್ ಆಗಿ ದುಷ್ಪರಿಣಾಮ ಬೀರುತ್ತಿದೆ. ಇಷ್ಟೆಲ್ಲಾ ಇರುವಾಗ ಕೌಟಿಲ್ಯನ ಅರ್ಥಶಾಸ್ತ್ರ, ರಾಮಾಯಣ, ಮಹಾಭಾರತಗಳು ನಮಗೆ ಪ್ರಸ್ತುತ ಎನ್ನುವ ಮೊದಲು ಸ್ವಲ್ಪ ಯೋಚಿಸಬೇಕಾಗುತ್ತದೆ.

ಅಂಥ ಯಾವ ಯೋಚನೆಯನ್ನೂ ಮಾಡದೆ ಮಹಾಭಾರತದಲ್ಲಿ ಜನರು ಕರಭಾರದ ಹೊರೆಯಿಂದ ವಲಸೆ ಹೋಗಬಾರದು ಎನ್ನಲಾಗಿದೆ. ಗರ್ಭಿಣಿ ಸ್ತ್ರೀಯರಿಗೆ ಉಚಿತವಾಗಿ ದೋಣಿ ಸೌಲಭ್ಯವನ್ನು ಮಾಡಿಕೊಡಬೇಕು ಎಂಬ ಉಲ್ಲೇಖನವಿರುವುದರಿಂದ ಕಮಂಡಕನ ನೀತಿಸಾರ, ಪಂಚತಂತ್ರ, ರಾಮಾಯಣ, ಮಹಾಭಾರತಗಳು ಇಂದಿಗೂ ಪ್ರಸ್ತುತವಾಗುತ್ತವೆ ಎಂಬ ವಾದ ಕೇವಲ ಬಾಲಿಶವಾಗುತ್ತದೆ. ಹಾಗೆ ವಾದ ಮಾಡುವುದಾದರೆ ಜಗತ್ತಿನ ಎಲ್ಲ ಕಥೆಗಳು, ನಂಬಿಕೆಗಳು, ಆಚಾರ ವಿಚಾರಗಳೂ ಪ್ರಸ್ತುತವೇ ಆಗುತ್ತ ಮಾನವನ ಜೀವನದಲ್ಲಿ ಅಲ್ಲಲ್ಲಿ ಆರ್ಥಿಕ ಚಿಂತನೆಗಳಿದ್ದವು ಎಂಬುದನ್ನು ಗಮನಿಸಿದಾಗ ಆಡಂ ಮತ್ತು ಈವ್ ಈಡನ್ ಗಾರ್ಡನ್‌ನಲ್ಲಿ ಹಣ್ಣಿಗಾಗಿ ಕೈ ಚಾಚಿದ್ದೂ ಪ್ರಸ್ತುತವಾಗಬಹುದಾದ ಆರ್ಥಿಕ ವಿಚಾರವೇ ಆಗಿದೆ. ಏಕೆಂದರೆ ಮಾನವನ ಆಸೆಗಳೆಲ್ಲವನ್ನೂ ಅರ್ಥವಿಜ್ಞಾನವು ಆವರಿಸಿಕೊಂಡಿದೆ.

ಹೀಗಿರುವ ವಾದವನ್ನು ಮುಂದೊಡ್ಡುವ ಮಹನೀಯರು, ಪಾಶ್ಚಾತ್ಯ ಚಿಂತಕರು ಭಾರತದ ಸಂಸ್ಕೃತ ಗ್ರಂಥಗಳನ್ನು ಕೊಂಡೊಯ್ದು ಅನುವಾದಿಸಿ ಅಧ್ವಾನಗಳನ್ನು ಮಾಡಿಬಿಟ್ಟರು ಎನ್ನುತ್ತಾರೆ. ಅಂಥ ಅಧ್ವಾನಗಳು ಯಾವುವು ಎನ್ನುವುದರ ಬಗ್ಗೆ ಮೌನ. ಬಹುಶಃ ತಮ್ಮ ತಮ್ಮ ದೇಶಗಳನ್ನು ಬಲಾಢ್ಯ ಆರ್ಥಿಕ ಶಕ್ತಿಯಾಗಿ ರೂಪಿಸಿದ್ದೇ

ಅಧ್ವಾನ ಎನ್ನಿಸಿರಲೂಬಹುದು ! ಒಬ್ಬ ಸಾಮಾನ್ಯ ವ್ಯಕ್ತಿ ಈ ರೀತಿ ಹೇಳಿದರೆ ಅದನ್ನು ಸ್ವದೇಶಾಭಿಮಾನ ಎನ್ನಬಹುದಿತ್ತು. ವಿದ್ವಾಂಸರೇ ಹೀಗೆ ಹೇಳುವುದಾದರೆ ಅದು ಸ್ವದೇಶಾಭಿಮಾನ ಆಗುವುದಿಲ್ಲ; ದುರಭಿಮಾನವಾಗುತ್ತದೆ. ಅವರದು ಪ್ರಶ್ನಾರ್ಥ ವೈದುಷ್ಯವಾಗುತ್ತವೆ. ಇಷ್ಟೆಲ್ಲ ಸ್ವದೇಶಿ, ಸ್ವಸಂಸ್ಕೃತಿಯ ಬಗ್ಗೆ ಉಪನ್ಯಾಸ ಕೊಡುವವರಿಗೆ ಜಾಗತೀಕರಣದಿಂದಾಗಿ ಈ ದೇಶದ ಭಾಷೆ, ಸಂಸ್ಕೃತಿಗಳು ನಾಶವಾಗುತ್ತಿವೆ ಎಂಬ ಪರಿಜ್ಞಾನವೇ ಇಲ್ಲದಿರುವುದು ಒಂದು ವಿಚಿತ್ರ ಸಂಗತಿ.

ಈ ದೇಶ ಒಂದು ಮಿಶ್ರ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದೆ. ನಮ್ಮ ಪೂರ್ವಜರು ನಮ್ಮವೇ ಆದ ಹಲವು ಭಾಷೆಗಳನ್ನು ಕೊಟ್ಟಿದ್ದಾರೆ. ಹೀಗಿರುವಾಗ ಅವುಗಳ ಉತ್ತಮ ಅಂಶಗಳನ್ನು ಉಳಿಸಿ ಬೆಳೆಸಿಕೊಂಡು ಹೋಗುವುದು ನಮ್ಮ ಕರ್ತವ್ಯ. ಆ ನಮ್ಮ ಬದ್ಧತೆಯನ್ನು ಜಾಗತೀಕರಣ ಪ್ರಕ್ರಿಯೆಯು ಅಳಿಸತೊಡಗಿರುವುದನ್ನು ಗಮನಿಸಬೇಕು. ಜೊತೆಗೆ ಈ ದೇಶದ ಬಡ, ಮಧ್ಯಮ ವರ್ಗದ ಜೀವನವನ್ನು ನರಕ ಸದೃಶ್ಯವಾಗಿಸುತ್ತಿವೆ ಎಂಬ ಸತ್ಯವನ್ನು ನಾವಿಂದು ಮನಗಾಣಬೇಕಾಗಿದೆ.

ಅದಕ್ಕಾಗಿ ನಾವೀಗ ಮಾಡಬೇಕಾಗಿರುವುದು ಪಾಶ್ಚಾತ್ಯ ಚಿಂತಕರ ಹೀಯಾಳಿಕೆಯಲ್ಲ. ಹಾಗೆಯೇ ಅವರ ಕುರುಡು ಅನುಕರಣೆಯೂ ಅಲ್ಲ. ಎಲ್ಲವೂ ನಮ್ಮ ಪ್ರಾಚೀನ ಗ್ರಂಥಗಳಲ್ಲಿತ್ತು ಎಂಬ ಒಣ ಹೆಮ್ಮೆಯಲ್ಲ. ಹಾಗೊಂದು ವೇಳೆ ಎಲ್ಲವೂ ಇದ್ದಿತಾದರೆ ನಮ್ಮ ಚರಿತ್ರೆಯಲ್ಲಿ ಅರ್ಥವಿಜ್ಞಾನದ ವ್ಯವಸ್ಥಿತ ಅಧ್ಯಯನದ ಬಗ್ಗೆ ಪುರಾವೆಗಳು ದೊರೆಯಬೇಕಾಗಿತ್ತು. ಒಂದು ವೇಳೆ ನಮ್ಮ ಸಂಸ್ಕೃತ ಗ್ರಂಥಗಳನ್ನು ಉಪಯೋಗಿಸಿಕೊಂಡು ಪಾಶ್ಚಾತ್ಯ ವಿದ್ವಾಂಸರು ತಮ್ಮವೇ ಹೊಸ ಸಿದ್ಧಾಂತಗಳನ್ನು ರೂಪಿಸಿಕೊಂಡರು ಎಂದಾದಲ್ಲಿ ಅವರು ಅಷ್ಟರ ಮಟ್ಟಿಗೆ ಬುದ್ಧಿವಂತರು ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಅಂಥ ಬುದ್ಧಿವಂತರಿಗೆ ಸಂಸ್ಕೃತ ಗ್ರಂಥಗಳ ಆಧಾರವಿಲ್ಲದೆಯೂ, ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಬಲ್ಲ ಸಾಮರ್ಥ್ಯವೂ ಇದ್ದಿರಲೇಬೇಕು. ಅಲ್ಲದೆ ಯಾವ ಸಂಸ್ಕೃತ ಗ್ರಂಥಗಳಲ್ಲಿ ಬರುವ ಆರ್ಥಿಕ ವಿಚಾರಗಳೂ ಆಧುನಿಕ ಅರ್ಥ ವಿಜ್ಞಾನದ ವ್ಯಾಪ್ತಿಯನ್ನು ಹೊಂದಿಲ್ಲ ಎಂಬುದನ್ನು ಗಮನಿಸಬೇಕು.

ಹೀಗಿರುವ ವಾದಗಳು ನಮ್ಮ ದೇಶದ ಸಾಂಸ್ಕೃತಿಕ ವ್ಯವಸ್ಥೆಯನ್ನಾಗಲಿ, ಆರ್ಥಿಕತೆಯನ್ನಾಗಲಿ ಬಲಪಡಿಸುವುದಿಲ್ಲ ಎನ್ನುವುದು ಹೇಳುವವರಿಗೂ ಗೊತ್ತು, ಕೇಳುವವರಿಗೂ ಗೊತ್ತು. ಸ್ವಸಂಸ್ಕೃತಿಯ ಬಗ್ಗೆ ನಿಜವಾಗಿಯೂ ಅಭಿಮಾನ ಇರುವುದಾದರೆ ಏನೇನೋ ಕಟ್ಟು ಕಥೆಗಳನ್ನು ಹೇಳುತ್ತಾ, ಧರ್ಮ, ಶಾಸ್ತ್ರ, ಪುರಾಣಗಳಲ್ಲಿ ಬರುವ ಯಾವ್ಯಾವುವೋ ವಿಚಾರಗಳನ್ನು ಅರ್ಥವಿಜ್ಞಾನದೊಂದಿಗೆ ಥಳುಕು ಹಾಕುತ್ತಾ ದಿನ ಕಳೆಯುವುದಲ್ಲ. ಬದಲಿಗೆ ನಮ್ಮ ಇಂದಿನ ಆದ್ಯತೆ ಏನು ಎಂಬುದನ್ನು ಗ್ರಹಿಸಬೇಕು.

ಈಗ ನಮಗೆ ಮುಖ್ಯವಾಗಬೇಕಾದ್ದು ಕೌಟಿಲ್ಯ ಏನು ಹೇಳುತ್ತಾನೆ, ಪಾಶ್ಚಾತ್ಯ ಚಿಂತಕರು ಏನು ಹೇಳುತ್ತಾರೆ, ಯಾರು ನಮ್ಮವರು, ಯಾರು ಹೊರಗಿನವರು, ಪಾಶ್ಚಾತ್ಯ ವಿದ್ವಾಂಸರ ಆಧಾರ ಗ್ರಂಥಗಳ ಮೂಲ ಯಾವುದು ಎಂಬ ಜಿಜ್ಞಾಸೆಯಲ್ಲ. ಪಾಶ್ಚಾತ್ಯ ಚಿಂತಕರ ಬರವಣಿಗೆಗಳು, ಚಿಂತನೆಗಳು ಎಲ್ಲಿಯವೇ ಆಗಿರಲಿ ಅವು ಆ ದೇಶಗಳನ್ನು ವ್ಯವಸ್ಥಿತ ಆರ್ಥಿಕ ಶಕ್ತಿಯಾಗಿ ರೂಪಿಸಿದವು ಎಂಬುದು ಮುಖ್ಯವಾಗಬೇಕು.



ನಾವು ಎಷ್ಟೆಲ್ಲಾ ಸಾಧಿಸಿದ್ದೆವು ಎಂಬ ಹೆಮ್ಮೆಗಿಂತ ಈಗ ಹೇಗಿದ್ದೇವೆ ಎಂಬ ಪ್ರಮುಖ ವಿಚಾರ ಹೆಚ್ಚು ಪ್ರಸ್ತುತವಾಗುತ್ತದೆ. ನಮ್ಮ ಎಲ್ಲ ಅಧಃಪತನಗಳಿಗೂ ಪಾಶ್ಚಾತ್ಯರತ್ತ ಬೆರಳು ತೋರುವ ಪರಿಪಾಠವಿದೆ. ಹಾಗಾದರೆ ನಮ್ಮ ಪರಂಪರೆ ಪಾಶ್ಚಿಮಾತ್ಯರ ದಾಳಿಯಿಂದ ನಮ್ಮನ್ನು ನಾವು ರಕ್ಷಿಸಿಕೊಳ್ಳುವಷ್ಟು ಗಟ್ಟಿಗೊಳಿಸುವಲ್ಲಿ ಏಕೆ ವಿಫಲವಾಯಿತು ಎಂಬುದನ್ನೂ ಸ್ಪಷ್ಟಪಡಿಸಬೇಕು.

ಈಗ ನಾವು ಏನಾಗುತ್ತಿದ್ದೇವೆ ಎನ್ನುವುದನ್ನು ಒಂದು ಕಿರು ಕಥೆಯ ಮೂಲಕ ಸ್ಪಷ್ಟಪಡಿಸುವುದು ಹೆಚ್ಚು ಅರ್ಥಪೂರ್ಣವಾದೀತು. ಒಂದೂರಿನಲ್ಲಿ ಒಬ್ಬ ಸಂಗೀತ ಅಧ್ಯಾಪಕರು ಇದ್ದರಂತೆ. ಅವರು ತಮ್ಮ ವಿದ್ಯಾರ್ಥಿಗಳು, ವಂದನೆಯನ್ನೇ ಹೇಳಲಿ, ಊಟ ಬೇಕೆನ್ನಲಿ, ತರಗತಿಗೆ ಬರಲೇ ಎನ್ನಲಿ ಎಲ್ಲವನ್ನೂ ಶಾಸ್ತ್ರೀಯ ಸಂಗೀತದ ರಾಗಗಳ ರೀತಿಯಲ್ಲೇ ಹೇಳಬೇಕೆಂದು ತಾಕೀತು ಮಾಡಿದ್ದರಂತೆ. ಒಮ್ಮೆ ಸಂಗೀತ ಅಧ್ಯಾಪಕರ ಮನೆಗೆ ಬೆಂಕಿ ಬಿತ್ತಂತೆ. ಅದನ್ನು ಕಂಡ ಅವರ ಒಬ್ಬ ಶಿಷ್ಯ ಓಡುತ್ತಾ ಬಂದು ಅಧ್ಯಾಪಕರ ಮುಂದೆ ನಿಂತು, ''ನಿ..ಮ್ಮ..ಮ..ನೆ..ಗೆ.. ಬೆಂ..ಕಿ..ಬಿ..ದ್ದಿ..ದೆ'' ಎಂದು ರಾಗವಾಗಿ ಹಾಡುವಷ್ಟರಲ್ಲಿ ಆ ಮನೆ ಹೊತ್ತಿ ಉರಿದು ಹೋಗಿತ್ತು.

ನಮ್ಮ ಸ್ಥಿತಿಯೂ ಈಗ ಆಗುತ್ತಿರುವುದು ಹೀಗೆಯೇ. ಸಾಂಸ್ಕೃತಿಕ ಅಧ್ವರ್ಯುಗಳು ನಮ್ಮಲ್ಲಿ ಏನೇನೆಲ್ಲ ಇತ್ತು ಎಂಬ ಜಿಜ್ಞಾಸೆಯನ್ನು ಪೂರ್ಣಗೊಳಿಸುವಷ್ಟರಲ್ಲಿ ಈ ದೇಶದ ಸಂಸ್ಕೃತಿಯ ಗೋರಿ ನಿರ್ಮಾಣವಾಗಿರುತ್ತದೆ. ನಮ್ಮ ದೇಶಕ್ಕೆ ಯಾರು ಹೇಳಿದ ಅರ್ಥವ್ಯವಸ್ಥೆ ಸೂಕ್ತ ಎಂದು ತೀರ್ಮಾನಿಸುವಷ್ಟರಲ್ಲಿ ಈ ದೇಶ ದಿವಾಳಿಯಾಗಿರುತ್ತದೆ.

ಇಂದು ಈ ದೇಶದ ಸಂಸ್ಕೃತಿಯ ಬಗ್ಗೆ, ಆರ್ಥಿಕ ಸ್ಥಿರತೆಯ ಬಗ್ಗೆ ಆಸಕ್ತರಾಗಿರುವವರು ಪಾಶ್ಚಾತ್ಯ ಅರ್ಥ ವಿಜ್ಞಾನಿಗಳ, ಈ ದೇಶದ ಪ್ರಾಚೀನ ಆರ್ಥಿಕ ತಜ್ಞರ ಚಿಂತನೆಗಳನ್ನು ಒಟ್ಟಾಗಿ ಗ್ರಹಿಸಿ ಇಂದಿಗೆ ಸೂಕ್ತವಾಗಬಹುದಾದ ಅಂಶಗಳನ್ನು ಕ್ರೋಡೀಕರಿಸಿ ಅವುಗಳನ್ನು ದೇಶೀಯ ಭಾಷೆಗಳಿಗೆ ತರಬೇಕಾಗಿದೆ. ಕೌಟಿಲ್ಯನ 'ಅರ್ಥಶಾಸ್ತ್ರ'ವನ್ನು ಸ್ನಾತಕೋತ್ತರ ಅರ್ಥವಿಜ್ಞಾನದ ತರಗತಿಗೆ ಕಡ್ಡಾಯಗೊಳಿಸಬೇಕು ಎನ್ನುವುದಕ್ಕಿಂತ ಸ್ನಾತಕೋತ್ತರ ತರಗತಿಗೆ ದೇಶೀಯ ಭಾಷೆಯಲ್ಲಿ ಬೋಧನೆ ನಡೆಯಬೇಕು ಎನ್ನುವುದು ಮುಖ್ಯ ವಿಷಯವಾಗಬೇಕಾಗಿದೆ. ಏಕೆಂದರೆ ಒಂದು ಭಾಷೆಗೆ, ಆ ಭಾಷೆಯ ವ್ಯಾಪ್ತಿಗೆ ಒಳಪಟ್ಟ ಸಂಸ್ಕೃತಿಯನ್ನು ಜೀವಂತವಾಗಿಡುವ ಚೈತನ್ಯವಿದೆ. ಭಾಷೆ ಎಂದಾಕ್ಷಣ ಸಂಸ್ಕೃತದ ಬಗೆಗೆ ಅನಗತ್ಯ ವ್ಯಾಮೋಹ ಅಗತ್ಯವಿಲ್ಲವೆಂದು ತೋರುತ್ತದೆ. ಅದು ತನ್ನ ಯಥಾ ರೂಪದಲ್ಲಿ ಸತ್ತು ಹೋಗಿದೆ. ಸತ್ತದ್ದನ್ನು ಬದುಕಿಸುವ ಸಂಜೀವಿನಿಯನ್ನು ತರಲು ನಮ್ಮಿಂದ ಸಾಧ್ಯವಿಲ್ಲವೆಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳೋಣ. ಆದರೆ ಆ ಸಂಸ್ಕೃತ ಇತರ ಎಲ್ಲ ಭಾರತೀಯ ಭಾಷೆಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಆದ್ದರಿಂದ ಸತ್ತು ಹೋಗಲಿರುವ ಭಾರತೀಯ ಭಾಷೆಗಳನ್ನು ಉಳಿಸಿಕೊಳ್ಳುವ ಮೂಲಕ ನಮ್ಮ ಸಂಸ್ಕೃತಿಯನ್ನು ರಕ್ಷಿಸುವುದು ಎಷ್ಟು ಅಗತ್ಯವೋ ಇಂದು ನಮ್ಮ ಆರ್ಥಿಕತೆಯನ್ನು ಬಲಪಡಿಸಬೇಕಾದದ್ದೂ ಅಷ್ಟೇ ಅಗತ್ಯವಾಗಿದೆ.


**ಅರವಿಂದ ಚೊಕ್ಕಾಡಿ**
'ಕಮಲದೀಪ', ತೆಳ್ಳಾರು ಕ್ರಾಸ್‌ರಸ್ತೆ, ಕಾರ್ಕಳ - ೫೭೪ ೧೦೪

# ಹೊರೆಯಾದ ವಿದ್ಯಾಭ್ಯಾಸ



ಎನ್. ಜಿ. ಶುಭಮಂಗಳ

**ಬೇ**ಸಿಗೆ ರಜೆ ಮುಗಿದು ಪೋಷಕರು ಸಂತಸದಿಂದಿದ್ದರೆ (ಒಂದು ಕಡೆ ಭರಿಸಬೇಕಾದ ಖರ್ಚು ನೆನೆಸಿಕೊಂಡು ಭಯಪಟ್ಟರೂ) ಮಕ್ಕಳು ಮಾತ್ರ ತಾವು ಹೊರಬೇಕಾದ ಭಾರವನ್ನು ನೆನೆಸಿಕೊಂಡು ದಿಗಿಲುಗೊಂಡಿದ್ದಾರೆ. ರಜೆಯಲ್ಲಿ ಪೂರ್ತಿ ಆಟದಲ್ಲಿಯೇ ತಮ್ಮ ಕಾಲವನ್ನು ಕಳೆಧು ಈಗ ಮತ್ತೆ ತಮ್ಮ ಹೊರೆಯನ್ನು ಜ್ಞಾಪಿಸಿಕೊಂಡು, 'ಕತ್ತೆ ಹೊರೆ ಮತ್ತೆ ಬಂತಲ್ಲಪ್ಪಾ!' ಎಂದು ಪೇಚಾಡುತ್ತಾರೆ.

ಈ ಸ್ಪರ್ಧಾತ್ಮಕ ಪ್ರಪಂಚದಲ್ಲಿ ಮಕ್ಕಳ ಭವಿಷ್ಯವನ್ನು ರೂಪಿಸಬೇಕಾದ ಪೋಷಕರು ತಮ್ಮ ಕೈಮೀರಿದ ಪ್ರಯತ್ನ ಮಾಡುತ್ತಾ ತಮ್ಮ ಮಹತ್ವಾಕಾಂಕ್ಷೆಗಳನ್ನು ಈಡೇರಿಸುವಿಕೆಗೆ ಮಕ್ಕಳನ್ನು ಬಂಧಿಗಳನ್ನಾಗಿ ಮಾಡುತ್ತಿದ್ದಾರೆ. ತಮ್ಮ ಮಕ್ಕಳನ್ನು ಇತರ ಮಕ್ಕಳ ಜೊತೆ ಹೋಲಿಸಿ ಮಕ್ಕಳ ಮನಸ್ಸಿನಲ್ಲಿ ಸ್ವಾರ್ಥದ ಬೀಜ ಬಿತ್ತುತ್ತಿದ್ದಾರೆ. ಶೈಕ್ಷಣಿಕ ಸಂಸ್ಥೆಗಳ ಮುಖ್ಯಸ್ಥರು ಹೆಚ್ಚಿನ ಪುಸ್ತಕಗಳನ್ನು ಪೋಷಕರು ಖರೀದಿಸುವಂತೆ ಮಾಡಿ, ಮಕ್ಕಳಿಗೆ ಹೊರೆ ಹೊರಿಸುತ್ತಾರೆ. ಮಕ್ಕಳು ಮನೆಗೆ ಬಂದ ತಕ್ಷಣ ಅವರ ಮನೋವಿಕಾಸದ ಬಗೆಗೆ ಗಮನ ಕೊಡದ ತಾಯಂದಿರು, ಅವರನ್ನು ಹೋಂವರ್ಕ್ ಮಾಡುವಂತೆ ಒತ್ತಾಯಿಸುತ್ತಾರೆ.

ಇವೆಲ್ಲಕ್ಕೂ ಕಾರಣಗಳು ಬಹಳಷ್ಟಿವೆ. ಅದರಲ್ಲಿ ಮುಖ್ಯವಾದುದೆಂದರೆ, ಪ್ರಸ್ತುತ ವಿದ್ಯಾಭ್ಯಾಸದ ಪದ್ಧತಿಯಲ್ಲಿನ ದೋಷಗಳು. ಇದನ್ನು ಸರಿಪಡಿಸಲು ಸರ್ಕಾರವು ಅನೇಕ ಕಮಿಷನ್‌ಗಳನ್ನು ನೇಮಕ ಮಾಡಿತು. ಅವುಗಳೆಂದರೆ, ೧. ರಾಧಾಕೃಷ್ಣನ್ ಕಮಿಷನ್ (೧೯೪೮); ೨. ಮೊದಲಿಯಾರ್ ಕಮಿಷನ್ (೧೯೫೨); ೩. ಕೊಠಾರಿ ಕಮಿಷನ್ (೧೯೬೪); ೪. ಈಶ್ವರಿಭಾಯಿ ಕಮಿಟಿ (೧೯೭೭); ೫. ಯಶಪಾಲ್ ಕಮಿಟಿ (೧೯೯೦) ಇನ್ನಿತರ ಕಮಿಟಿಗಳು.

ಪ್ರಮುಖವಾದ ಕೊಠಾರಿ ಕಮಿಷನ್ ತನ್ನ ಶಿಫಾರಸಿನಲ್ಲಿ ರಾಷ್ಟ್ರೀಯ ಐಕ್ಯತೆ, ಸಾಮಾಜಿಕ ನ್ಯಾಯ, ಸಾಮಾನ್ಯ ಪ್ರವೇಶ ನೀತಿಯ ಮೂಲಕ ಶೈಕ್ಷಣಿಕ ಸಮಾನತೆ, ಮನೆ ಪಾಠರಹಿತ ಶಾಲಾ ಶಿಕ್ಷಣ ಮತ್ತು ಶಿಕ್ಷಕರ ನಡುವೆ ಸಮಾನತೆಯನ್ನುಳ್ಳ ''ಸಾಮಾನ್ಯ ಶಾಲಾ ಪದ್ಧತಿ'' ಸ್ಥಾಪನೆಯಾಗಬೇಕೆಂಬ ಅಂಶಗಳನ್ನುಳ್ಳ ತನ್ನ ವರದಿಯನ್ನು ಮಂಡಿಸಿದೆ.

೯೦ರ ದಶಕದಲ್ಲಿ ನೇಮಕವಾದ ಯಶಪಾಲ್ ಕಮಿಟಿಯು 'ಹೊರೆಯಿಲ್ಲದ ಕಲಿಯುವಿಕೆ' ಶಿಫಾರಸನ್ನು ಮಂಡಿಸಿತು. ತನ್ನ ಈ ಶಿಫಾರಸಿನಲ್ಲಿ ಮಕ್ಕಳಿಗೆ ಅನವಶ್ಯಕ ಹೊರೆಯಿಂದಾಗುವ ಮಾನಸಿಕ ಯಾತನೆಯನ್ನು ತಡೆಯಬೇಕು, ಶಿಕ್ಷಕರು ಪಠ್ಯರಚನಾ ಕ್ರಮದಲ್ಲಿ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳಬೇಕು, ಉತ್ತಮ ಶೈಕ್ಷಣಿಕ ತರಬೇತಿ ಪಡೆಯಬೇಕು, ಮಾತೃಭಾಷೆ ಮತ್ತು ಗಣಿತ ಪಠ್ಯಕ್ರಮದಲ್ಲಿ ಸುಧಾರಣೆಯಾಗಬೇಕು ಹಾಗೂ ಐಚ್ಛಿಕ ವಿಷಯಗಳನ್ನು ಅಭ್ಯಸಿಸಿ ಮಕ್ಕಳು ಅದನ್ನು ವಿಶ್ಲೇಷಣೆ ಮಾಡುವಂತಿರಬೇಕೆಂದು ವರದಿ ಮಾಡಿತು.

ನಾಲ್ಕು ವರ್ಷಗಳ ಹಿಂದೆ ಯಶಪಾಲ್ ಕಮಿಟಿಯ ನಿವೇದನೆಯನ್ನು ಸ್ವೀಕರಿಸಿದ ಕೇಂದ್ರ ಪ್ರಭುತ್ವವು ವಿದ್ಯಾರ್ಥಿಗಳ ಹೊರೆಯನ್ನು ಬರುವ ವರ್ಷದಿಂದ ಕಡಿಮೆ ಮಾಡುತ್ತೇವೆ ಎಂದು ಪ್ರಕಟಿಸಿತು. ಆದರೆ ಕಮಿಟಿ ಮಾಡಿದ ಶಿಫಾರಸುಗಳು ಜಾರಿಗೆ ತಂದ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಒಟ್ಟಿನಲ್ಲಿ ಪ್ರಭುತ್ವಕ್ಕೆ ಆಸಕ್ತಿಯಿಲ್ಲ.

**ಲಾಭದಾಯಕ ವ್ಯಾಪಾರವಾಗಿ ವಿದ್ಯಾಕ್ಷೇತ್ರ**

ನರ್ಸರಿಯಿಂದ ಹಿಡಿದು ಯಾವುದೇ ಸ್ನಾತಕೋತ್ತರ ವ್ಯಾಸಂಗದವರೆಗೂ ಮೊದಲಿಗೆ ಎಂಟ್ರೆನ್ಸ್ ಪರೀಕ್ಷೆ ಬರೆಯುವುದು ಇಂದಿನ ದಿನಗಳಲ್ಲಿ ಸಾಮಾನ್ಯವಾಗಿದೆ. ಸರ್ಕಾರದ ಅನುದ್ದೇಶಿತ ವಿಧಾನಗಳಿಂದ ವಿದ್ಯಾರಂಗವು ಲಾಭಪಡೆಯುವ ವ್ಯಾಪಾರವಾಗಿ ರೂಪುಗೊಂಡಿದೆ. ಡೊನೇಷನ್ ಹೆಸರಿನಲ್ಲಿ ಕೆಲವು ಶಾಲೆಗಳು ಹೆಚ್ಚು ಮೊತ್ತದ ಹಣ ವಸೂಲಿ ಮಾಡುತ್ತಿದ್ದರೆ, ಇನ್ನು ಕೆಲವು ಶಾಲೆಗಳು ಡೊನೇಷನ್ ತೆಗೆದುಕೊಳ್ಳುವುದಿಲ್ಲವೆಂದು ಹೇಳಿ ಬೇರೆ ವಿಧಾನಗಳಿಂದ ತಮಗೆ ಬೇಕಾದ ಮೊತ್ತವನ್ನು ತಮ್ಮ ಖಜಾನೆಗೆ ತುಂಬಿಕೊಳ್ಳುತ್ತಿವೆ. ಮೊದಲಿಗೆ ಒಬ್ಬ ವಿದ್ಯಾರ್ಥಿಯು ತನ್ನ ಪಿಹೆಚ್.ಡಿ.ವರೆಗೂ ವೆಚ್ಚ ಮಾಡುತ್ತಿದ್ದ ಹಣವನ್ನು ಇಂದು ಕೇವಲ ವಿದ್ಯಾರ್ಥಿಯ ಪ್ರಾಥಮಿಕ ಹಂತದ ವಿದ್ಯಾಭ್ಯಾಸಕ್ಕಾಗಿ ಖರ್ಚು ಮಾಡಬೇಕಾಗುತ್ತಿದೆ. ಶಿಕ್ಷಕರು ಟ್ಯೂಷನ್‌ಗಳನ್ನು ಶಾಲೆಯ ಹೊರಗೆ ಮಾಡುತ್ತಾ ಹಣ ಸಂಪಾದನೆ ಮಾಡುತ್ತಾರೆ. ಇದರ ಸಲುವಾಗಿ ಅವರು ಶಾಲೆಗಳಲ್ಲಿ ತಾವು ಮಾಡಬೇಕಾದ ಪಠ್ಯಗಳ ಬಗೆಗೆ ಹೆಚ್ಚಿನ ಆಸಕ್ತಿ ತೋರುವುದಿಲ್ಲ.

**ಕುಸಿಯುತ್ತಿರುವ ವಿದ್ಯಾಭ್ಯಾಸದ ಮಟ್ಟ**

ಯಾವ ಶಿಕ್ಷಣ ವ್ಯವಸ್ಥೆಯು ಮಕ್ಕಳಿಗೆ ಆತ್ಮ ವಿಶ್ವಾಸವನ್ನು ಕೊಟ್ಟು ಬದುಕನ್ನು ಎದುರಿಸಲು ಧೈರ್ಯ ಕೊಡಬೇಕೋ ಅದೇ ಶಿಕ್ಷಣ ಕ್ರಮವು ಶಿಕ್ಷೆಯಾಗಿ ಮಾರ್ಪಟ್ಟಿರುವುದು ಒಂದು ದುರಂತವಾಗಿದೆ. ಶಾಲೆಗೆ ಹೋಗಿ ಬರುವುದನ್ನು ಒಂದು ಕಡ್ಡಾಯ ಕ್ರಿಯೆ ಎಂಬುದಾಗಿ ಮಕ್ಕಳು ತೀರ್ಮಾನಿಸಿದ್ದಾರೆ. ಶಾಲೆಗೆ ಹೋಗಿ ವಿದ್ಯೆ ಕಲಿತು, ಆಟ-ಪಾಠಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಆಶಾಮನೋಭಾವದ ಕೊರತೆ ಮಕ್ಕಳಲ್ಲಿ ಎದ್ದು ಕಾಣುತ್ತಿದೆ. ಆಡುವ ವಯಸ್ಸಿನಲ್ಲಿ ಅವರಿಗೆ ಪುಸ್ತಕಗಳ ಹೊರೆ ಹೆಚ್ಚಾಗಿದೆ. ಪರೀಕ್ಷೆಗಳು ಹತ್ತಿರ ಬರುತ್ತಿದ್ದಂತೆ ಸ್ಪರ್ಧೆಯ ಒತ್ತಡ ಹೆಚ್ಚುತ್ತದೆ. ರ್‍ಯಾಂಕ್ ಪಡೆಯುವಲ್ಲಿ ಪೈಪೋಟಿ ಏರ್ಪಡುತ್ತದೆ. ಪುಸ್ತಕಗಳಲ್ಲಿನ ಇಡೀ ಪಠ್ಯಗಳನ್ನು ಬಾಯಿಪಾಠ ಮಾಡಿಕೊಂಡು ಪರೀಕ್ಷೆಯಲ್ಲಿ ಬರೆದು ಬಂದುಬಿಟ್ಟರೆ ತಮ್ಮ ಆ ವರ್ಷದ ಜವಾಬ್ದಾರಿ ಮುಗಿದಂತೆ ಎಂದು ಭಾವಿಸುತ್ತಾರೆ. ಆದರಿಂದ ಅವರು ಯಾವುದೇ ರೀತಿಯ ವಿಷಯವನ್ನು ಸರಿಯಾಗಿ ಗ್ರಹಿಸಿದಂತೆ ಆಗುವುದಿಲ್ಲ. ಈ ರೀತಿಯ ಶಿಕ್ಷಣ ವ್ಯವಸ್ಥೆ ಅನಿವಾರ್ಯವಾಗಿರುವುದು ಒಂದು ವಿಪರ್ಯಾಸದ ಸಂಗತಿಯಾಗಿದೆ.

ವಿದ್ಯಾ ವಿಧಾನವೆನ್ನುವುದು ಮಕ್ಕಳ ಆಲೋಚನಾ ಶಕ್ತಿಯನ್ನು ಬೆಳೆಸುವ ರೀತಿಯಲ್ಲಿರಬೇಕು. ಶಿಕ್ಷಕರು ನಿರಂತರವಾಗಿ ಸಂಶೋಧನೆಯಲ್ಲಿ ನಿರತರಾಗಿ ಹೊಸ ವಿಷಯಗಳನ್ನು ಗ್ರಹಿಸುತ್ತಿರಬೇಕು. ಆಗ ಮಕ್ಕಳಿಗೆ ಅವರು ಹೊಸ ವಿಷಯಗಳ ಬೋಧನೆ ಮಾಡಲು ಅನುಕೂಲವಾಗುತ್ತದೆ. ವಿದ್ಯಾರ್ಥಿಗಳಿಗೆ ವೈಜ್ಞಾನಿಕ ಮನೋಧರ್ಮ, ಜಾತ್ಯತೀತತೆ, ಮಾನವೀಯತೆ, ಸಮಾಜಸೇವೆ ಮುಂತಾದ ಮೌಲ್ಯಗಳ ಬಗ್ಗೆ ವಿವರಣೆ ಕೊಡಬೇಕು. ಸಾಮಾಜಿಕ ಎಚ್ಚರವನ್ನು ವಿದ್ಯಾರ್ಥಿಗಳಲ್ಲಿ ಉಂಟುಮಾಡುವಂತಹ ಶಿಕ್ಷಣ ಅತ್ಯವಶ್ಯಕವಾಗಿದ್ದು ಈಗಿರುವ ಪದ್ಧತಿಯಲ್ಲಿ ಸಮಗ್ರ ಬದಲಾವಣೆ ಆಗಬೇಕಾಗಿದೆ.

**ಪೋಷಕರ ಪಾತ್ರ**

ಯಾವುದೇ ಶಿಕ್ಷಣ ವ್ಯವಸ್ಥೆಯಲ್ಲಿ ಪೋಷಕರ ಪಾತ್ರ ಮಹತ್ವದ್ದಾಗಿದೆ. ಪೋಷಕರು ಮಕ್ಕಳನ್ನು ಬೆಳೆಸುವಾಗ ಮನೆಯಲ್ಲಿ ಮೊದಲು ಉತ್ತಮ ವಾತಾವರಣವನ್ನು ಸೃಷ್ಟಿಸಬೇಕು. 'ಮನೆಯೇ ಮೊದಲ ಪಾಠಶಾಲೆ-ತಾಯಿಯೇ ಮೊದಲ ಗುರು' ಎಂಬ ನಾಣ್ಣುಡಿಯನ್ನು ಅವರು ಕಾರ್ಯರೂಪಕ್ಕೆ ತರಬೇಕು. ಹಿರಿಯರನ್ನು ಗೌರವಿಸುವುದು, ಇತರರೊಂದಿಗೆ ಸ್ನೇಹದಿಂದಿರುವುದು, ಉದಾರ ಮನೋಭಾವ, ಇತರರು ಕಷ್ಟದಲ್ಲಿರುವಾಗ ತಮ್ಮ ಕೈಲಾದ ಸಹಾಯ ಮಾಡುವುದು, ಇನ್ನಿತರ ಒಳ್ಳೆಯ ಗುಣಗಳು ಮಕ್ಕಳಲ್ಲಿ ಬರುವಂತೆ ಮಾಡುವ ಹೊಣೆ ತಂದೆ-ತಾಯಂದಿರುಗಳದಾಗಿದೆ. ಶಾಲೆಯ ಒಳಗಿನ ಪಾಠ ಎಷ್ಟು ಮುಖ್ಯವೋ ಶಾಲೆಯ ಹೊರಗಿನ ಚಟುವಟಿಕೆ ಅಷ್ಟೇ ಮುಖ್ಯ. ಶಾಲೆಗೆ ಮಗುವನ್ನು ಕಳುಹಿಸಿದರೆ ಮಾತ್ರ ಸಾಲದು. ಆಗಾಗ ಶಾಲೆಗೆ ಭೇಟಿ ಕೊಟ್ಟು ವಿದ್ಯಾರ್ಥಿಯ ಪ್ರಗತಿಯ ಬಗ್ಗೆ ವಿಚಾರಿಸಿಕೊಳ್ಳಬೇಕು. ಮಕ್ಕಳು ಓದಿನಲ್ಲಿ ಹಿಂದಿದ್ದರೆ, ಅವರನ್ನು ಮನವೊಲಿಸಿ ಓದುವಂತೆ ಹೇಳಬೇಕು. 'ಮಕ್ಕಳಿಸ್ಕೂಲ್ ಮನೇಲಲ್ವೆ' ಎಂಬ ಟಿ. ಪಿ. ಕೈಲಾಸಂ ಮಾತಿನಂತೆ ಮನೆಯು ಮತ್ತೊಂದು ವಿದ್ಯಾಸಂಸ್ಥೆಯಾಗಬೇಕು. ಶಾಲೆಗಿಂತ ಹೆಚ್ಚಿನ ವೇಳೆಯನ್ನು ಮಕ್ಕಳು ಮನೆಯಲ್ಲಿ ಕಳೆಯುವುದರಿಂದ ತಮ್ಮ ಎಲ್ಲ ಜವಾಬ್ದಾರಿಯನ್ನು ಕೇವಲ ಅಧ್ಯಾಪಕರ ಮೇಲೆ ಹೊರಿಸದೆ, ಪ್ರತ್ಯೇಕ ಆಸಕ್ತಿಯನ್ನು ವಹಿಸಬೇಕಾದ ಹೊಣೆ ಪೋಷಕರದೇ ಆಗಿದೆ. ಯಾವುದೇ ಶಿಕ್ಷಣ ರೀತಿಯ ಯಶಸ್ಸಿಗೆ ವಿದ್ಯಾರ್ಥಿ, ಅಧ್ಯಾಪಕ ಮತ್ತು ಪೋಷಕರ ನಿಕಟ ಸ್ನೇಹ, ಸಹಕಾರ, ಸಂಬಂಧ ಅನಿವಾರ್ಯವಾಗಿದೆ.

**ಶಿಕ್ಷಕರ ಪಾತ್ರ**

ಭಾವೀ ಭಾರತ ಪ್ರಜೆಗಳಾದ ಮಕ್ಕಳಿಗೆ ಶಿಕ್ಷಣ ನೀಡಿ ಉತ್ತಮ ಪೌರರಾಗಿ ರೂಪಿಸುವ ಮಹತ್ವದ ಕಾರ್ಯವನ್ನು ಶಿಕ್ಷಕರು ನಿರ್ವಹಿಸಬೇಕಾಗಿದೆ. ವಿದ್ಯಾರ್ಥಿಗಳನ್ನು ಸನ್ಮಾರ್ಗದಲ್ಲಿ ನಡೆಸಬೇಕು. ತಾವೇ ಮಾದರಿಯಾಗಬೇಕು. ಶಿಕ್ಷಕರು ನಿರಂತರವಾಗಿ ಹೊಸ ಹೊಸ ವಿಷಯಗಳ ಸಂಗ್ರಹಣೆಯಲ್ಲಿರಬೇಕು. ಜ್ಞಾನಾರ್ಜನೆಗಾಗಿ ಹಾತೊರೆಯಬೇಕು. ದೈನಂದಿನ ವಿಚಾರಗಳನ್ನು ತಾವು ತಿಳಿದುಕೊಂಡು ಮಕ್ಕಳಿಗೂ ಅದನ್ನು ತಿಳಿಸಬೇಕು. ತಾವು ಮಾಡುವ ಪಾಠಗಳ ಜೊತೆಗೆ ಇತರ ಹೊಸ ಪ್ರಗತಿಪರ ವಿಚಾರಗಳನ್ನು ಮಕ್ಕಳಿಗೆ ತಿಳಿಸುತ್ತಿರಬೇಕು. ಮಕ್ಕಳು ಎಲ್ಲ ರಂಗಗಳಲ್ಲಿಯೂ ಅಭಿವೃದ್ಧಿ ಹೊಂದಲು ಸಹಕರಿಸಬೇಕು.

ಮಕ್ಕಳಿಗೆ ಅವರು ಕಠಿಣ ಶಿಕ್ಷೆಯನ್ನು ಎಂದಿಗೂ ಕೊಡಬಾರದು. ಬದಲಿಗೆ ಅವರನ್ನು ಹಿತವಾದ ಮಾತುಗಳಿಂದ ಮನವೊಲಿಸಿ ಪಾಠವನ್ನು ಹೇಳಿಕೊಡಬೇಕು. ಮಕ್ಕಳಿಗೆ ಅರ್ಥವಾಗದಿದ್ದಲ್ಲಿ ಮತ್ತೊಮ್ಮೆ ಅದನ್ನು ಒತ್ತಿಹೇಳಬೇಕು. ಆಗಿಂದಾಗ್ಗೆ ಮಕ್ಕಳ ಚಟುವಟಿಕೆಗಳನ್ನು ಗಮನಿಸುತ್ತಿರಬೇಕು. ಮಕ್ಕಳಿಗೆ ಶಿಕ್ಷಕರು ಸಿಂಹಸ್ವಪ್ನವಾಗಬಾರದು. ಮಕ್ಕಳನ್ನು ಶಿಕ್ಷಿಸಿದಷ್ಟು ಅವರಲ್ಲಿ ದ್ವೇಷ ಮನೋಭಾವ ಹೆಚ್ಚುತ್ತದೆ. ಓದಿನಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾರೆ. ಹಠಮಾರಿಗಳಾಗಿ ಬೆಳೆಯುವ ಇವರು ಸಮಾಜದಲ್ಲಿ ಬೇಡದ ವ್ಯಕ್ತಿಗಳಾಗುತ್ತಾರೆ. ಆದುದರಿಂದ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಭಾವೀ ಪ್ರಜೆಗಳನ್ನು ರೂಪಿಸುವ ಮಹೋನ್ನತ ಜವಾಬ್ದಾರಿ ಶಿಕ್ಷಕರ ಮೇಲೆಯೇ ಇರುತ್ತದೆ. ಶಿಕ್ಷಣದಲ್ಲಿ ಶಿಕ್ಷಕರ ಪಾತ್ರ ಪ್ರಮುಖವಾಗಿದೆ.

**ವಿದ್ಯಾರ್ಥಿಗಳಿಗೆ ನೀಡುತ್ತಿರುವ ಕ್ರೂರ ಶಿಕ್ಷೆ**

ಮಕ್ಕಳು ಇಂದಿನ ದಿನಗಳಲ್ಲಿ ಹೆಚ್ಚಿಗೆ ಶೋಷಣೆಗೆ ಒಳಗಾಗುತ್ತಿದ್ದಾರೆ. ಶಾಲೆ, ಶಿಕ್ಷಕರು ಎಂಬುದು ಅವರ ಪಾಲಿಗೆ ದುಃಸ್ವಪ್ನವಾಗಿದೆ. ಶಾಲೆಯಲ್ಲಿ ಕೊಡುವ ಹೋಂ ವರ್ಕ್‌ಗಳು, ಪುಸ್ತಕಗಳು ಅವರಿಗೆ ಹೊರೆಯಾಗಿವೆ. ಕೇವಲ ಹಿರಿಯರ ಒತ್ತಾಯಕ್ಕೆ ಮಣಿದು ಶಾಲೆಗೆ ಹೋಗುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಿದೆ. ಇದಕ್ಕೆ ಕಾರಣವೆಂದರೆ ಶಾಲೆಯಲ್ಲಿನ ಉಸಿರು ಕಟ್ಟುವ ವಾತಾವರಣ. ಶಾಲೆಗಳಲ್ಲಿ ಮಕ್ಕಳ ಆಟಗಳು, ಮನೋರಂಜನೆಗಳ ಬಗೆಗೆ ಗಮನ ಕೊಡುವುದಿಲ್ಲ. ಮಕ್ಕಳು ಹೋಂವರ್ಕ್ ಮಾಡದಿದ್ದರೆ ಅವರಿಗೆ ಕ್ರೂರ ಶಿಕ್ಷೆಯನ್ನು ಕೊಡುತ್ತಾರೆ. ಆದ್ದರಿಂದ ಅವರಿಗೆ ಶಾಲೆಗಳು ಭಯದ ಕೂಪಗಳಾಗಿ ಕಾಣಿಸುತ್ತವೆ.

ಶಾಲಾ ಮಕ್ಕಳಿಗೆ ಕ್ರೂರ ಶಿಕ್ಷೆಯನ್ನು ನೀಡುವುದರ ಬಗ್ಗೆ ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಚರ್ಚೆಗಳಾಗಿವೆ. ಕೆಲವು ಕಾನೂನುಗಳೂ ಆಗಿವೆ. ದೆಹಲಿಯ 1973ರ ದೆಹಲಿ ಸ್ಕೂಲ್ ಎಜ್ಯುಕೇಷನಲ್ ಆಕ್ಟ್ ಒಂದು ''ಶಾಲೆಯ ಮುಖ್ಯಸ್ಥರು ಮಕ್ಕಳಿಗೆ ದೈಹಿಕ ಶಿಕ್ಷೆಯನ್ನು ಕೊಡಬಹುದು'' ಎಂದು ಹೇಳುತ್ತದೆ. 1997ರಲ್ಲಿ ಈ ಶಾಲಾ ಮುಖ್ಯಸ್ಥರ 'ಹಕ್ಕ'ನ್ನು ಇತರ ಶಿಕ್ಷಕರಿಗೂ ನೀಡಲಾಯಿತು. ಪಾಲಕರ ಸಂಘಟನೆಯೊಂದರ ಮುಖ್ಯಸ್ಥೆ ಕುಸುಮ್ ಜೈನ್ ಎಂಬಾಕೆ ಹೈಕೋರ್ಟ್‌ಗೆ ದೂರು ಒಯ್ದಾಗ ಒಂದು ಮಹತ್ವದ ತೀರ್ಪು ಹೊರಬಿತ್ತು. ಮಕ್ಕಳಿಗೆ ದೈಹಿಕ ಶಿಕ್ಷೆ ಕೊಡಬಾರದೆಂದು ನ್ಯಾಯಾಲಯ ಹೇಳಿತು. ಆದರೆ ಅದು ಕಾರ್ಯರೂಪಕ್ಕೆ ಬಾರದೆ ಬರಿಯ ಕಾಗದದ ಮೇಲಿನ ಅಕ್ಷರಗಳಾಗಿವೆ. ಶಿಕ್ಷೆ ಮುಂದುವರಿದೇ ಇದೆ. ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಸಚಿವ ಡಾ॥ ಮುರಳಿ ಮನೋಹರ ಜೋಶಿಯವರು ಮಕ್ಕಳನ್ನು ಬೆತ್ತ ಅಥವಾ ಕೋಲಿನಿಂದ ಬಡಿಯುವ ಪದ್ಧತಿಯನ್ನು ನಿಷೇಧಿಸುವಂತಹ ಕ್ರಮಗಳನ್ನು ಕೈಗೊಳ್ಳಲು 'ಮಕ್ಕಳ ಆಯೋಗ'ವೊಂದನ್ನು ರಚಿಸುವುದಾಗಿ ಹೇಳಿದ್ದಾರೆ. ಆದರೆ ಅದು ಎಷ್ಟು ಪರಿಣಾಮಕಾರಿಯಾಗುವುದೋ ಕಾದು ನೋಡಬೇಕು.

ಇತ್ತೀಚಿನ ದಿನಗಳಲ್ಲಿ ಉಗ್ರಶಿಕ್ಷೆಯನ್ನು ನೀಡುವ ಶಿಕ್ಷಕರ ಸಂಖ್ಯೆ ಹೆಚ್ಚುತ್ತಿದೆ. ಅದೆಷ್ಟು ಹೆಚ್ಚಿನ ಮಟ್ಟದಲ್ಲಿದೆಯೆಂದರೆ ಮಕ್ಕಳ ಪ್ರಾಣಕ್ಕೇ ಮಾರಕವಾಗುತ್ತಿದೆ. ಅತಿ ಶಿಸ್ತಿನ ಹೆಸರಿನಿಂದ ಮಕ್ಕಳನ್ನು ಶಿಕ್ಷಿಸಿ ಅವರ ಅಂಗಗಳೇ ಊನವಾಗುವ ಪರಿಸ್ಥಿತಿ ಬಂದಿದೆ. ಇವೆಲ್ಲ ಜೀವಂತ ನಿದರ್ಶನಗಳು. ಆದ್ದರಿಂದ ಶಿಕ್ಷಕರು ಹೆಚ್ಚಿನ ಪ್ರೀತಿ, ತಾಳ್ಮೆ, ಸಹನೆಗಳಿಂದ ಮಕ್ಕಳನ್ನು ಸರಿಯಾದ ದಾರಿಗೆ ಒಯ್ಯಬೇಕು. ಇದು ಕಾನೂನು-ಕಟ್ಟಳೆಗಳಿಂದ ಪರಿಹಾರವಾಗುವ ಸಮಸ್ಯೆಯಲ್ಲ. ಪ್ರೀತಿ-ವಿಶ್ವಾಸಗಳಿಂದ ಬಗೆಹರಿಸಬೇಕಾದ ಸಮಸ್ಯೆ.

**ಎಂ. ಜಿ. ಶುಭಮಂಗಳ (ಗುಡಿಬಂಡೆ)**
೩೦೭, ೧ನೇ ಮಹಡಿ, ೧೩ನೇ ಮುಖ್ಯರಸ್ತೆ, ಮತ್ತಿಕೆರೆ ಅಂಚೆ ಕಚೇರಿ ಎದುರು, ೫ನೇ ಅಡ್ಡರಸ್ತೆ, ಗೋಕುಲ ೧ನೇ ಹಂತ, ಬೆಂಗಳೂರು-೫೪

## ಸಾದರ ಸ್ವೀಕಾರ

**ಚೈತನ್ಯದ ಚಿಲುಮೆ** (ಜೀವನ ಚಿತ್ರ)
*ಎಲ್. ವಿ. ಶಾಂತಕುಮಾರಿ*
**ಪುಟ : ೯೨** **ಬೆಲೆ : ರೂ. ೫೦**
**ಅನಿಕೇತನ ಪ್ರಕಾಶನ**, ರಾಜು ಬಿಲ್ಡಿಂಗ್ ಸಮೀಪ, ದೇವನೂರು ರಸ್ತೆ, ವಿಜಯನಗರ, ತುಮಕೂರು.

**ರಾಷ್ಟ್ರಪತಿ ಕೆ. ಆರ್. ನಾರಾಯಣನ್** (ಜೀವನ ಪರಿಚಯ)
*ಕಮಲವೇಲನ್*
**ಪುಟ : ೯೪** **ಬೆಲೆ : ರೂ. ೨೫**
**ಮಣಿವಾಸಗರ್ ಪ್ರಕಾಶನ**, ೮/೭, ಸಿಂಗರ್ ಬೀದಿ, ಪಾರಿಮುನ್ನೈ, ಚೆನ್ನೈ-೬೦೦ ೧೦೮

**ಸತ್ಯ** (ಕಿರುನಾಟಕ)
*ದೊಡ್ಡಣ್ಣ ಹೆಚ್. ಗದ್ದನಕೇರಿ*
**ಪುಟ : ೬೦** **ಬೆಲೆ : ರೂ. ೨೫**
**ಕಮಲ ಪ್ರಕಾಶನ**, ಚಿತ್ರವಾಡಗಿ, ಹುನುಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ.

**ಕನ್ನಡಕ್ಕೆ ರುಬಾಯಿಗಳು** (ಸಂಕಲನ)
*ಕೆ. ಬಿ. ಬ್ಯಾಳಿ*
**ಪುಟ : ೭೨** **ಬೆಲೆ : ರೂ. ೩೦**

**ಧರೆಹತ್ತಿ ಉರಿದರೆ** (ಆಧುನಿಕ ವಚನಗಳು)
*ಕೆ. ಬಿ. ಬ್ಯಾಳಿ*
**ಪುಟ : ೭೬** **ಬೆಲೆ : ರೂ. ೨೫**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ತಾಯಿ ಪ್ರಕಾಶನ**, ಕುಕನೂರು - ೫೮೩ ೨೩೨
ಕೊಪ್ಪಳ ಜಿಲ್ಲೆ

**ಉರಿಯ ಉಯ್ಯಾಲೆ** (ವಿಮರ್ಶಾ ಸಂಕಲನ)
*ಪ್ರೊ॥ ಶಿವರಾಮಯ್ಯ*
**ಪು : ೧೬೮** **ಬೆಲೆ : ರೂ. ೧೫೦**
**ಸಿ. ವಿ. ಜಿ. ಪಬ್ಲಿಕೇಷನ್ಸ್**, ೭೦, ೨ನೇ ಮೈನ್, ಜಬ್ಬಾರ್ ಬ್ಲಾಕ್, ವೈಯ್ಯಾಲಿಕಾವಲ್, ಬೆಂಗಳೂರು-೫೬೦ ೦೦೩

**ಭಾರತದ ಸಂವಿಧಾನ**
*ಸಂ. ಪ್ರೊ॥ ಮಾಲಿ ಮುದ್ದಣ್ಣ*
**ಪು : ೪೭೬** **ಬೆಲೆ : ರೂ. ೧೩೦**
**ಕಲಾ ಪ್ರಕಾಶನ**, ನಂ.೨, ೨ನೇ ಕ್ರಾಸ್, ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು-೫೬೦ ೦೦೩

**ಸುಲಭ ಚಿಕಿತ್ಸಾ ವಿಧಾನ ಹೋಮಿಯೋಪಥಿ**
*ಮಾಧವ ಕುಲಕರ್ಣಿ*
**ಪುಟ : ೯೨** **ಬೆಲೆ : ರೂ. ೨೫**
**ತನುಮನ ಪ್ರಕಾಶನ**, ತೃಪ್ತಿ, ೪೨, 'ಜಿ' ಬ್ಲಾಕ್, ೩ನೇ ತಿರುವು, ರಾಮಕೃಷ್ಣನಗರ, ಮೈಸೂರು-೫೭೦ ೦೨೨

**ವಿನೋದ** (ಸುವರ್ಣ ಮಹೋತ್ಸವ ವಿಶೇಷ ಸಂಚಿಕೆ) ೨೦೦೨
*ಸಂ. ಜಿ. ನಾರಾಯಣ*
**ಪುಟ : ೨೨೦** **ಬೆಲೆ : ರೂ. ೧೦**
**ವಿನೋದ**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

# ಹಿನ್ನಡೆಯ ದೃಷ್ಟಾಂತಗಳು



ಜನವರಿಯಿಂದಲೂ ಸಂಜೆಯ ಆಕಾಶದಲ್ಲಿ ರಾಜನಂತೆ ವಿಜೃಂಭಿಸುತ್ತಾ ಥಳಗುಟ್ಟುತ್ತಿದ್ದ ಶುಕ್ರ ಈ ತಿಂಗಳು ''ರಜೆ'' ತೆಗೆದುಕೊಳ್ಳುತ್ತಿದೆ. ತಿಂಗಳ ಮೊದಲರ್ಧದಲ್ಲಿ ಮಾತ್ರ ಕಾಣಸಿಗುವ ಇದು ದಿನೇ ದಿನೇ ದಿಗಂತದ ಅಂಚಿಗೆ ಸರಿದು ಮಾಯವಾಗುವುದು. ನವಂಬರ್‌ನಿಂದ ಬೆಳಗಿನ ಜಾವ ''ಸುಪ್ರಭಾತ'' ಹೇಳುವ ಕರ್ತವ್ಯಕ್ಕೆ ಅಣಿಯಾಗುವ ಸನ್ನಾಹ ಇದು. ಅಷ್ಟೇ ಅಲ್ಲ ಅಕ್ಟೋಬರ್ ೧೦ರಿಂದ ಹಿನ್ನಡೆಯೂ ಆರಂಭವಾಗುವುದು.

ಹೆದ್ದಾರಿಗಳಲ್ಲಿ ವಾಹನಗಳು ಒಂದನ್ನೊಂದು ಹಿಂದೆ ಹಾಕಿ ಓಡುವುದರಷ್ಟೇ ಸಹಜವಾದ ಘಟನೆ ಹಿನ್ನಡೆ (ಅಥವಾ ಹಿಮ್ಮುಖ ಚಲನೆ). ಹಿನ್ನಡೆಯನ್ನು ಗಮನಿಸುವ ಮೊದಲು ಸಹಜವಾದ ನೇರನಡೆಯನ್ನು ಗುರುತಿಸಲು ಕಲಿಯಬೇಕು. **ಹೊಸತುವಿನ** ಈ ಅಂಕಣವನ್ನು ಓದಿದ ಅನೇಕರು, ಆಕಾಶವನ್ನೂ ವೀಕ್ಷಿಸಿ ಶುಕ್ರದ ಚಲನೆಯನ್ನು ಗುರುತಿಸಿದ್ದಾರೆ. ಮಘ ನಕ್ಷತ್ರದ ಪಕ್ಕದಿಂದ ನಿಧಾನವಾಗಿ ಸರಿದು ಚಿತ್ರಾ ನಕ್ಷತ್ರವನ್ನು ಸಮೀಪಿಸಿದ್ದನ್ನು ಗಮನಿಸಿ, ಆಯಾ ನಕ್ಷತ್ರಗಳ ಪರಿಚಯ ಮಾಡಿಕೊಂಡಿದ್ದಾರೆ. ಮಘ ಎಂಬುದು ಸಿಂಹರಾಶಿಯ ಎಲ್ಲೆಯೊಳಗಿರುವ ನಕ್ಷತ್ರ; ಹಾಗೆಯೇ ಚಿತ್ರಾ ಎಂಬುದು ಕನ್ಯಾರಾಶಿಯ ನಕ್ಷತ್ರ. ರಾಶಿಚಕ್ರದ ಅನುಕ್ರಮಣಿಕೆಯನ್ನು ಅನುಸರಿಸಿ ಶುಕ್ರದ ಚಲನೆ ಸಿಂಹ ಆದ ಮೇಲೆ ಕನ್ಯಾ – ಹೀಗೆ ನಡೆಯಿತು. ಇದು ನೇರನಡೆ. ಮುಂದೆ ತುಲಾ, ನಂತರ ವೃಶ್ಚಿಕ, ಆ ಬಳಿಕ ಧನು... ಹೀಗೆ ಶುಕ್ರದ ಚಲನೆ ಸಾಗಿದ್ದಲ್ಲಿ ಅದು ನೇರನಡೆ.

ಅಕ್ಟೋಬರ್ ೧೦ರಂದು ತಟಸ್ಥವಾದಂತೆ ಕಂಡ ಶುಕ್ರ ಪುನಃ ಕನ್ಯಾರಾಶಿಯ ದಿಕ್ಕಿಗೇ ಹೊರಡುವುದು. ತುಲಾದಿಂದ ಹಿಂದಕ್ಕೆ ಕನ್ಯಾಗೆ ಹೊರಟಂತೆ ಕಾಣುವ ಈ ನಡೆ ನೇರವಲ್ಲ – ಆದ್ದರಿಂದ ಹಿನ್ನಡೆ. ಭೂಮಿಯನ್ನು ಹಿಂದೆ ಹಾಕಿ ಮುಂದೆ ಓಡುವ ಸಮಯ ಇದು. ಆದ್ದರಿಂದ ತಾತ್ಕಾಲಿಕವಾಗಿ (ಭೂಮಿಯಿಂದ ಕಂಡಂತೆ) ಅದು ಹಿಂದೆ ಸರಿಯುತ್ತಿದೆಯೋ ಎಂಬ ಭ್ರಮೆ ಉಂಟಾಗುತ್ತದೆ. ನವೆಂಬರ್ ನಂತರ ಪುನಃ ನೇರನಡೆ ಆರಂಭ.

> **ಈ ಅಂಕಣ ಖಗೋಳ ವಿಜ್ಞಾನದ ವಿಷಯದಲ್ಲಿ ನಿಮ್ಮ ಆಸಕ್ತಿಯನ್ನು ಪ್ರಚೋದಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಇನ್ನೂ ಹೆಚ್ಚು ತಿಳಿದುಕೊಳ್ಳಲು ಆಸಕ್ತರಾಗಿರುವವರು ಪ್ರಶ್ನೆಗಳನ್ನೂ ಕೇಳಬಹುದು. ನಿಮ್ಮ ಪ್ರಶ್ನೆ ಚುಟುಕಾಗಿರಲಿ. ಲೇಖಕಿ ನೀಡುವ ಉತ್ತರಗಳನ್ನು ಹೊಸತು ಸಂಚಿಕೆಗಳಲ್ಲಿ ಪ್ರಕಟಿಸುತ್ತೇವೆ.**
>
> *- ಸಂಪಾದಕ*

ದಿನೇ ದಿನೇ ಸೂರ್ಯನ ದಿಕ್ಕಿಗೇ ಚಲಿಸುತ್ತಿರುವ ಶುಕ್ರದ ಈ ಹಿನ್ನಡೆಯನ್ನು ಗಮನಿಸಲು ಸೂರ್ಯನೇ ಮುಖ್ಯ ಅಡಚಣೆ. ಅದನ್ನು ''ಸ್ವಿಚ್ ಆಫ್'' ಮಾಡುವಂತಿದ್ದಿದ್ದರೆ ಸುಲಭವಾಗಿ ಗಮನಿಸಬಹುದಾಗಿತ್ತು. ಚಿತ್ರದಲ್ಲಿ ಸೆಪ್ಟಂಬರ್ ೧೫ರಿಂದ ಡಿಸೆಂಬರ್ ೧೨ರವರೆಗಿನ ಚಲನೆಯನ್ನು ಗುರುತಿಸಲಾಗಿದೆ. ಪ್ರತಿ ಮೂರು ದಿನಗಳ ನಂತರದ ಸ್ಥಾನವನ್ನು ಚುಕ್ಕೆ ಸೂಚಿಸುತ್ತದೆ. ಬುಧ, ಶುಕ್ರ ಹಾಗೂ ಭೂಮಿ ಈ ಮೂರು ಗ್ರಹಗಳ ಚಲನೆಯನ್ನು ಗುರುತಿಸಲಾಗಿದೆ. ಅನುಕ್ರಮವಾಗಿ ಅದೇ ದಿನಗಳಲ್ಲಿ ಭೂಮಿ ಶುಕ್ರರನ್ನು ಸೇರಿಸುವ ಬಾಣದ ಗುರುತಿನ ರೇಖೆಗಳು ಆಕಾಶದಲ್ಲಿ ಅದು ಕಾಣುವ ದಿಕ್ಕನ್ನು ಸೂಚಿಸುತ್ತವೆ. ಸೆ. ೧೫ ರಿಂದ ಅಕ್ಟೋಬರ್ ೧೦ರವರೆಗೆ ಶುಕ್ರದ ಚಲನೆಯ ದಿಕ್ಕನ್ನು ಗಮನಿಸಿ. ಅ. ೧೦ ರಿಂದ ನವೆಂಬರ್ ೩, ಮತ್ತು ಮುಂದೆ ನವೆಂಬರ್ ೨೧ರವರೆಗೆ ದಿಕ್ಕು ಬದಲಾಯಿಸಿದೆ ಎಂಬುದನ್ನು ಗಮನಿಸಿ. ಅನಂತರ ಪುನಃ ದಿಕ್ಕು ಬದಲಾಯಿಸುವುದನ್ನು ಗಮನಿಸಿ. ಈ ಚಲನೆ ತುಲಾ ರಾಶಿಯಲ್ಲಿ ನಡೆಯುತ್ತಿದೆ ಎಂದು ತಿಳಿಯಲು, ಸೂರ್ಯನ ಸ್ಥಾನವನ್ನು ಗಮನಿಸಿ. ಸೆ. ೨೨ ರಂದು ಸೂರ್ಯ ಕನ್ಯಾ ರಾಶಿಯಲ್ಲಿರುವುದು, ಅ. ೨೨ ರಂದು ವೃಶ್ಚಿಕದಲ್ಲಿ. ಆದ್ದರಿಂದ ಇವೆರಡರ ನಡುವೆ ಇರುವುದೇ ತುಲಾ. ಶುಕ್ರದ ಹಿನ್ನಡೆ ಮುಗಿದ ಬಳಿಕ ಅದು ವೃಶ್ಚಿಕದತ್ತ ನಡೆಯುವುದು.




*ಈ ನಕ್ಷೆ ಅಕ್ಟೋಬರ್ ೧೫ ಸಂಜೆ ೭ ಘಂಟೆಗೆ ಅನ್ವಯವಾಗುವುದಾದರೂ ಚಂದ್ರನ ಸ್ಥಾನದ ಹೊರತಾಗಿ ತಿಂಗಳುದ್ದಕ್ಕೂ ಬಳಸಬಹುದು*

ಹಿನ್ನಡೆ ಎಂಬ ಈ ಘಟನೆ ಶುಕ್ರ ಗ್ರಹಕ್ಕೆ ಮಾತ್ರ ಸೀಮಿತವಾಗಿಲ್ಲ. ಬುಧವೂ ಹಿನ್ನಡೆಯಲ್ಲಿದ್ದು ಅಕ್ಟೋಬರ್ ೬ಕ್ಕೆ ಅದು ಮುಕ್ತಾಯವಾಗಲಿದೆ. ಬುಧ, ಶುಕ್ರ ಇವೆರಡೂ ಭೂಮಿಯನ್ನು ಹಿಂದೆ ಹಾಕಿ ಓಡುವುವು. ಭೂಮಿ ಇನ್ನುಳಿದ (ಅಂದರೆ ಮಂಗಳ, ಗುರು... ಮುಂತಾದ) ಗ್ರಹಗಳನ್ನು ಹಿಂದೆ ಹಾಕಿ ಓಡುವುದು. ಈ ಕಾರಣದಿಂದ ವರ್ಷಕ್ಕೊಮ್ಮೆಯಾದರೂ ಅವುಗಳ ಹಿನ್ನಡೆ ವ್ಯಕ್ತವಾಗುವುದು. ಈ ತಿಂಗಳಲ್ಲಿ ಶನಿ ಗ್ರಹ ಹಿನ್ನಡೆಯನ್ನು ಆರಂಭಿಸಲಿದೆ. ಅದರ ಸ್ಥಾನವನ್ನು ದೂರದರ್ಶಕ ಅಥವಾ ದುರ್ಬೀನಿನಿಂದ ಗಮನಿಸಿದಿರಾದರೆ ಅದರ ಚಲನೆಯ ವೈಶಿಷ್ಟ್ಯ ವ್ಯಕ್ತವಾಗುವುದು. ೧೧ನೇ ತಾರೀಖಿನಿಂದ ಅದಕ್ಕೆ ಚಲನೆಯೇ ಇಲ್ಲವೇನೋ ಎಂಬಂತೆ ತಟಸ್ಥವಾಗಿ ಬಿಡುವುದು. ಮುಂದೆ ನಿಧಾನವಾಗಿ ಹಿನ್ನಡೆ ಆರಂಭವಾಗುವುದು. ಮಿಥುನದತ್ತ ಹೊರಟಿದ್ದ ಅದು ಪುನಃ ವೃಷಭಕ್ಕೆ ಹೊರಟಿರುವಂತೆ ಕಾಣುವುದು. ಸಣ್ಣ ಪ್ರಮಾಣದ ಈ ಚಲನೆಯನ್ನು ಗುರುತಿಸಲು ದೂರದರ್ಶಕ ಅಥವಾ ದುರ್ಬೀನು ಬೇಕೇ ಬೇಕು.

ದೂರದರ್ಶಕ ಇರುವವರು ನೆಪ್ಚೂನ್‌ಅನ್ನು ಗುರುತಿಸಬಲ್ಲರಾದರೆ, ಅದರ ಹಿನ್ನಡೆಯ ಮುಕ್ತಾಯವನ್ನೂ ಈ ತಿಂಗಳಲ್ಲಿ ಕಾಣಬಹುದು. ೨೦ರಂದು ತಟಸ್ಥವಾಗಿರುವಂತೆ ಅದು ಕಾಣುತ್ತದೆ. ತಾತ್ಪರ್ಯ ಸರಳ, ಅದೇ ನೆಪ್ಚೂನ್ ಎಂದು ಗುರುತಿಸುವುದೇ ಕಷ್ಟವಾಗಿಬಿಡುತ್ತದೆ.

ಹಿನ್ನಡೆ ಎಂಬ ಈ ವಿದ್ಯಮಾನವನ್ನು ವಕ್ರನಡೆ ಎಂದೂ ಗುರುತಿಸಿರುವುದುಂಟು. ಗ್ರಹಗಳ ಈ ವಕ್ರನಡೆಯನ್ನು ಅರ್ಥೈಸಲು ನಮ್ಮ ಪೂರ್ವಜರು ಬಹಳ ಹೆಣಗಿದ್ದರು. ಭೂಮಿಯೇ ವಿಶ್ವದ ಕೇಂದ್ರ ಎಂಬ ಪೂರ್ವಗ್ರಹದ ಕಾರಣ ಈ ಸಮಸ್ಯೆ ಉದ್ಭವವಾಗಿತ್ತು. ಕ್ಲಿಷ್ಟವಾದ ಸೈಕ್ಲಾಯ್ಡ್ ಆಕಾರದ ಕಕ್ಷೆಯನ್ನು ಗ್ರೀಕರು ಅಳವಡಿಸಿದ್ದರು. ಇಂದು ಗಣಿತದಲ್ಲಿ ಸರ್ವೇಸಾಧಾರಣವಾಗಿ ಬಳಕೆಯಾಗುವ Transformation ತಂತ್ರವನ್ನೇ ಬಳಸಿ ಭಾರತದ ಪರಮೇಶ್ವರ, ನೀಲಕಂಠ ಸೋಮಯಾಜಿ ಇವರು ಪರಿಹಾರ ಕಂಡುಕೊಂಡಿದ್ದರು. ಸೂರ್ಯನನ್ನು ಮಧ್ಯದಲ್ಲಿರಿಸಿದರೆ ಲೆಕ್ಕ ಸುಲಭ ಎಂಬ ಗುಟ್ಟು ಅವರಿಗೆ ತಿಳಿದಿದ್ದರೂ ಅದರ ಒಳಗಿನ ಮರ್ಮವಾದ ಗುರುತ್ವಾಕರ್ಷಣ ಶಕ್ತಿಯ ತತ್ವವನ್ನು ಅವರು ಎತ್ತಿ ಹಿಡಿದಿರಲಿಲ್ಲ. ಈ ಕಾರಣದಿಂದ ಅವರ ಸಮಕಾಲೀನನಾದ ಕೊಪರ್ನಿಕಸ್‌ನ ತರ್ಕ ಪಟ್ಟಿನ ಸ್ಥಾನ

**ಡಾ॥ ಬಿ. ಎಸ್. ಶೈಲಜಾ**

ಪಡೆಯುತ್ತದೆ. ಆತ ಸೌರಕೇಂದ್ರ ಸಿದ್ಧಾಂತವನ್ನು ಮುಂದಿಟ್ಟಿದ್ದು ಅತಿ ಹಿಂಜರಿಕೆಯಿಂದ. ಲೆಕ್ಕವನ್ನು ಸರಳಗೊಳಿಸಲು ಇದೊಂದು ಸರಳವಿಧಾನ ಮಾತ್ರ, ಎಂದಾತ ಮುನ್ನುಡಿಯಲ್ಲಿ ಅರಿಕೆ ಮಾಡಿಕೊಂಡಿದ್ದ. ಭೂಮಿ ನಿಶ್ಚಲ ಎಂಬ ಬೈಬಲ್ ವಾಕ್ಯವನ್ನು ನೇರವಾಗಿ ವಿರೋಧಿಸಲು ಆತ ಹೆದರಿದ್ದಿರಬಹುದು. ಪುಸ್ತಕ ಪ್ರಕಟಣೆಯ ದಿನವೇ ಸತ್ತಿದ್ದರಿಂದ ಆತ ಚರ್ಚ್‌ನ ಕೆಂಗಣ್ಣಿನಿಂದ ಬಚಾವ್ ಆದ (ಬದುಕಿದ !). ಆತನ ಅನುಯಾಯಿಗಳ ಕತೆ ಏನಾಯಿತೆಂದು ತಿಳಿದೇ ಇದೆ. ಜಿಯಾರ್ಡನೋ ಬ್ರೂನೋ ಎಂಬಾತನನ್ನು ಜೀವಂತವಾಗಿ ಸುಟ್ಟು ಹಾಕಲಾಯಿತು. ಗೆಲಿಲಿಯೋನ ದುರಂತವಂತೂ ಎಲ್ಲರಿಗೂ ತಿಳಿದೇ ಇದೆ. ಮುನ್ನೂರೈವತ್ತು ವರ್ಷಗಳ ನಂತರ ೧೯೯೩ರಲ್ಲಿ ಚರ್ಚ್ ಆತನಿಗೆ (ಮರಣೋತ್ತರ?) ಕ್ಷಮಾದಾನ ನೀಡಿದ್ದು ಒಂದು ದಾಖಲೆಯೇ ಸರಿ. ಕೊಪರ್ನಿಕಸ್‌ನ ಕ್ರಾಂತಿ ಗುರುತ್ವಾಕರ್ಷಣೆಯ ಸಿದ್ಧಾಂತಕ್ಕೆ ನಾಂದಿ ಹಾಡಿತು ಎಂಬುದು ನಿರ್ವಿವಾದವಾದ ವಿಚಾರ.

ಭೂತದಿಂದ ವರ್ತಮಾನಕ್ಕೆ ಹಿಂದಿರುಗೋಣ. ಸೂರ್ಯಾಸ್ತವಾದೊಡನೆ ನೆತ್ತಿಯಲ್ಲಿ ಕಾಣುವ ''ಬೇಸಿಗೆ ತ್ರಿಕೋಣ'' ನಿಮ್ಮನ್ನು ಆಕರ್ಷಿಸುವುದು. ಪಶ್ಚಿಮದಲ್ಲಿ ಹೊಳೆಯುವ ಕೆಂಪು ಬಣ್ಣದ ಸ್ವಾತಿ, ನೈರುತ್ಯದಲ್ಲಿ ವೃಶ್ಚಿಕರಾಶಿಯ ಕೆಂಪು ಬಣ್ಣದ ಜ್ಯೇಷ್ಠಾ. ಧನುರಾಶಿಯನ್ನು ಹುಡುಕುವುದೂ ಕಷ್ಟವೇ ಆಗಬಹುದು. ಕುಂಭ ರಾಶಿಯ ಕ್ಷೀಣ ನಕ್ಷತ್ರಗಳೂ ಅಷ್ಟೇ. ಚಂದ್ರನಿಲ್ಲದಾಗ (ಮೊದಲ ವಾರ) ಮಕರರಾಶಿಯನ್ನು ಗುರುತು ಹಿಡಿಯಬಹುದು. ಚಿತ್ರದಲ್ಲಿ ತೋರಿಸಿರುವಂತೆ ಚಂದ್ರ ೧೫ರಂದು ಈ ರಾಶಿಯಲ್ಲೇ ಕಾಣುವುದು. ಬೇಸಿಗೆ ತ್ರಿಕೋಣದ ಮೂರು ನಕ್ಷತ್ರಗಳು ಮತ್ತು ಪುಂಜಗಳು ದೆನೆಬ್-ಮೀನಾಕ್ಷಿ (ರಾಜಹಂಸ ಅಥವಾ ಸಿಗ್ನಸ್), ಶ್ರವಣ-ಆಲ್ಟೇರ್ (ಅಕ್ವಿಲಾ - ಗರುಡಾ) ಮತ್ತು ಅಭಿಜಿತ್ - ವೇಗಾ (ಲೈರಾ - ವೀಣಾ) ಇವುಗಳಲ್ಲದೆ ಕ್ಷೀಣ ನಕ್ಷತ್ರಗಳನ್ನೂ ಗುರುತಿಸಬಹುದು.

ಚಂದ್ರನ ಚಲನೆಯ ವಿವರಗಳು –ಯಾವ ದಿನ ಯಾವ ಗ್ರಹದ ಸಮೀಪ ಇರುತ್ತದೆ - ಎಂಬುದನ್ನು ಪಟ್ಟಿಯಲ್ಲಿ ಕೊಟ್ಟಿದೆ. ೫ರಂದು ಬುಧ ಮತ್ತು ಮಂಗಳಗಳ ಪಕ್ಕ ಚಂದ್ರ ಹಾದು ಹೋಗುವುದನ್ನು ನೋಡುವುದು ಸಾಧ್ಯವಿಲ್ಲ. ಸಂಧ್ಯಾಪ್ರಕಾಶದಲ್ಲಿ ಮೂರುಕಾಯಗಳು ಕರಗಿಹೋಗುವುವು. ಹಾಗೆಯೇ ೩೧ರಂದು ಶುಕ್ರ ಸೂರ್ಯದಿಂದ ೫ ಡಿಗ್ರಿ ದಕ್ಷಿಣಕ್ಕಿರುವುದು ಎಂದು ಸೂಚಿಸಿದೆ. ಈ ಘಟನೆಯನ್ನು ನೋಡುವುದೂ ಸಾಧ್ಯವಿಲ್ಲ.

ಈ ತಿಂಗಳ ೬ ರಂದು ೪ ಗಂಟೆ ೮ ನಿ ಕ್ಕೆ ಅಮಾವಾಸ್ಯೆ. ಕಡಲತೀರದ ಬಂಧುಗಳಿಗೆ ಅಮಾವಾಸ್ಯೆಯಂದು ಭರತದ ಎತ್ತರ ಹೆಚ್ಚು ಎಂದು ಇಲ್ಲಿ ಬರೆದು ತಿಳಿಸಬೇಕಾಗಿಲ್ಲ. ಅವರು ಅನುಭವದಿಂದಲೇ ಕಂಡುಕೊಂಡ ವಿಷಯ ಇದು. ಆದರೆ ಈ ತಿಂಗಳ ಅಮಾವಾಸ್ಯೆಯ ಭರತದ ಆರ್ಭಟ ಗಮನಿಸಲು ಒಳ್ಳೆಯ ಅವಕಾಶವಿದೆ. ಅದೇ ದಿನ ೬.೪೮ಕ್ಕೆ ಚಂದ್ರ 'ಪುರಭೂ'' ಎಂಬ ಬಿಂದುವಿನಲ್ಲಿರುತ್ತದೆ. ಚಂದ್ರಕಕ್ಷೆ ದೀರ್ಘವೃತ್ತಾಕಾರದಲ್ಲಿದೆ. ಈ ಕಾರಣ ತಿಂಗಳಲ್ಲಿ ಒಂದು ದಿನ ಒಂದು ಕನಿಷ್ಠ ದೂರದಲ್ಲಿದ್ದರೆ ಇನ್ನೊಂದು ಸುಮಾರು ಹದಿನಾಲ್ಕು ದಿನಗಳಾದ ಮೇಲೆ ಗರಿಷ್ಠ ದೂರದಲ್ಲಿರುತ್ತದೆ. ಕಕ್ಷೆಯಲ್ಲಿನ ಈ ಬಿಂದುಗಳಿಗೆ ''ಪುರಭೂ'' (perigee) ಅಪಭೂ (apogee) ಎಂಬ ಹೆಸರಿದೆ. ಅಮಾವಾಸ್ಯೆಯಂದೇ ಚಂದ್ರ ಪುರಭೂ ಬಿಂದುವಿನಲ್ಲಿರುವುದು ಒಂದು ವಿಶೇಷ. ಆದ್ದರಿಂದ ಇನ್ಯಾವ ಅಮಾವಾಸ್ಯೆಗಿಂತ ಈ ಅಮಾವಾಸ್ಯೆಯಲ್ಲಿ ಭರತದ ಏರು ಗರಿಷ್ಠವಾಗಿರುತ್ತದೆ. ಚಂದ್ರ-ಭೂಮಿಯ ಅಂತರ ಸರಾಸರಿ ೩೮೪,೦೦೦ ಕಿ. ಮೀ. ಎಂದು ಬರೆಯುತ್ತೇವೆ. ೬ ರಂದು ೩೫೬,೯೨೦ ಕಿ. ಮೀ ದೂರ (ಹತ್ತಿರ?) ದಲ್ಲಿರುವ ಚಂದ್ರ ೨೦ ರಂದು ೪೦೬,೩೫೮ ಕಿ. ಮೀ. ದೂರಕ್ಕೆ ಓಡಿರುತ್ತದೆ.







*ಭೂಮಿ ಹಾಗೂ ಶುಕ್ರಗ್ರಹಗಳ ಚಲನೆಯನ್ನು ಸೆ. ೧೫ ರಿಂದ ಡಿ. ೧೨ರವರೆಗೆ ಗುರುತಿಸಲಾಗಿದೆ. ಒಂದೊಂದು ಚುಕ್ಕೆಯೂ ೩ ದಿನಗಳ ಅಂತರವನ್ನು ಸೂಚಿಸುತ್ತದೆ. ಕನ್ಯಾ ಮತ್ತು ವೃಶ್ಚಿಕ ರಾಶಿಗಳ ದಿಕ್ಕುಗಳನ್ನು ಸೂಚಿಸಲಾಗಿದೆ. ಬಾಣದ ಗುರುತಿರುವ ರೇಖೆಗಳು ಶುಕ್ರಗ್ರಹ ಕಾಣುವ ದಿಕ್ಕನ್ನು ಸೂಚಿಸುತ್ತದೆ. ಅ. ೧೦ ರಿಂದ ನ. ೨೧ ರವರೆಗೆ ಶುಕ್ರದ ಹಿನ್ನಡೆಯನ್ನು ಇಲ್ಲಿ ಗುರುತಿಸುವಷ್ಟು ಸುಲಭವಾಗಿ ಆಕಾಶದಲ್ಲಿ ಗುರುತಿಸುವುದು ಸಾಧ್ಯವಿಲ್ಲ. (ಅ. ೧೩ ರಂದು ಬುಧ ಗ್ರಹ ಮತ್ತು ಸೂರ್ಯ ನಡುವಿನ ಕೋನ ಗರಿಷ್ಠ ಎಂಬುದನ್ನೂ ಈ ಚಿತ್ರದಿಂದ ಗುರುತಿಸಬಹುದು.)*

ಭೂಮಿ ಗುರುಗ್ರಹದ ಸಮಭಾಜಕ ವೃತ್ತದ ತಲವನ್ನು ೬ ವರ್ಷಗಳಿಗೊಮ್ಮೆ ಹಾಯುತ್ತದೆ. ಆಗ ಅದರ ನಾಲ್ಕು ದೊಡ್ಡ ಚಂದ್ರಗಳು, ಇಯೋ, ಯುರೋಪಾ, ಗೆನಿಮಿಡ್ ಮತ್ತು ಕೆಲಿಸ್ಟೊ – ಇವುಗಳ ಕಕ್ಷೆಗಳ ತಲವನ್ನೂ ಹಾದಂತಾಗುತ್ತದೆ. ಈ ಕಾರಣ ಅವುಗಳು ಒಂದಕ್ಕೊಂದು ಅಡ್ಡ ಬರುವ ''ಗ್ರಹಣ''ಗಳನ್ನೂ ನೋಡಬಹುದು. ದೂರದರ್ಶಕ ಇರುವವರಿಗೆ ಈ ಚಂದ್ರಗಳನ್ನು ಗುರುತಿಸಲು ಇದು ಒಳ್ಳೆಯ ಅವಕಾಶ.

**ಖಗೋಳ ದಿನಚರಿ**

| ದಿನಾಂಕ | ಘಟನೆ |
|---|---|
| ೨ | ಚಂದ್ರನಿಂದ ೪ ಡಿಗ್ರಿ ದಕ್ಷಿಣಕ್ಕೆ ಗುರು |
| ೫ | ಮಂಗಳ, ಬುಧ ಎರಡೂ ಚಂದ್ರನ ಪಕ್ಕ* |
| ೬ | ಅಮಾವಾಸ್ಯೆ ೪ ಗಂಟೆ ೮ ನಿ. |
| | ಬುಧಗ್ರಹದ ಹಿನ್ನಡೆ ಮುಕ್ತಾಯ* |
| | ಚಂದ್ರ ಪುರಭೂ ಬಿಂದುವಿನಲ್ಲಿ (೬:೪೮ಕ್ಕೆ) |
| ೮ | ಚಂದ್ರನಿಂದ ೧೦ ಡಿಗ್ರಿ ಅಂತರದಲ್ಲಿ ಶುಕ್ರ |
| ೧೦ | ಶುಕ್ರ ತಟಸ್ಥ - ಹಿನ್ನಡೆಯ ಆರಂಭ |
| ೧೧ | ಶನಿ ತಟಸ್ಥ - ಹಿನ್ನಡೆಯ ಆರಂಭ |
| ೧೩ | ಚಾಂದ್ರಮಾಸದ ಪ್ರಥಮ ಪಾದ (ನಡುರಾತ್ರಿಗೆ ಚಂದ್ರಾಸ್ತ) |
| ೧೩ | ಬುಧಗ್ರಹದ ಗರಿಷ್ಠ ಎತ್ತರ ೧೮ ಡಿಗ್ರಿ |
| | (ಬೆಳಿಗ್ಗೆ ನೋಡಲು ಒಳ್ಳೆಯ ಅವಕಾಶ) |
| ೧೪ | ಚಂದ್ರನಿಂದ ೪ ೧/೨ ಡಿಗ್ರಿ ಉತ್ತರಕ್ಕೆ ನೆಪ್ಚೂನ್ |
| ೧೫ | ಚಂದ್ರನಿಂದ ೪ ೧/೨ ಡಿಗ್ರಿ ಉತ್ತರಕ್ಕೆ ಯುರೇನಸ್ |
| ೨೦ | ನೆಪ್ಚೂನ್ ತಟಸ್ಥ. ಹಿನ್ನಡೆಯ ಮುಕ್ತಾಯ |
| | ಚಂದ್ರ ಅಪಭೂ ಬಿಂದುವಿನಲ್ಲಿ |
| ೨೧ | ಹುಣ್ಣಿಮೆ (೧೨:೫೦ಕ್ಕೆ) ಚಂದ್ರ ಅಶ್ವಿನಿ ನಕ್ಷತ್ರದ ಸಮೀಪ |
| ೨೬ | ಚಂದ್ರನ ೩ ಡಿಗ್ರಿ ದಕ್ಷಿಣಕ್ಕೆ ಶನಿ |
| ೨೯. | ಚಾಂದ್ರಮಾಸದ ಅಂತಿಮಪಾದ |
| | (ಚಂದ್ರೋದಯ ನಡುರಾತ್ರಿಗೆ) |
| ೩೦ | ಚಂದ್ರನ ೪ ಡಿಗ್ರಿ ದಕ್ಷಿಣಕ್ಕೆ ಗುರು |
| ೩೧ | ಸೂರ್ಯನ ೫ ಡಿಗ್ರಿ ದಕ್ಷಿಣಕ್ಕೆ ಶುಕ್ರ* |

* ಈ ಘಟನೆಗಳ ವೀಕ್ಷಣೆ ಸಾಧ್ಯವಿಲ್ಲ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್‌ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಗ್ಯಾಟ್ ಮಾರಿ ನೇಣಿಗೆ ದಾರಿ

(ಕಿರುನಾಟಕ)

**ಹಾಡು**

*ಬೀದಿ ನಾಟ್ಕಾ ಬೀದಿ ನಾಟ್ಕ*
*ಬೀದಿ ನಾಟ್ಕಾ ಬೀದಿ ನಾಟ್ಕ*
*ಡಂಕಲ್ ಬಾರಿ ಗ್ಯಾಟ್ ಮಾರಿ*
*ಆಳುವವರ ಜೇಬ್ ದುಬಾರಿ*
*ಎದೆಯೊಳಗಿನ ಜೀವ ಪರಾರಿ*
*ರೈತರ ಕೊರಳ್ಗೆ ನೇಣಿನ ದಾರಿ*
*ಬೀದಿ ನಾಟ್ಕ ಬೀದಿ ನಾಟ್ಕ*
*ಬರ್ರೋ ಬರ್ರಿ, ಬರ್ರೋ ಬರ್ರಿ,*
*ಶಾಸಕರು ಬನ್ನಿ ಸಂಸದರೂ ಬನ್ನಿ*
*ಮುಖ್ಯಮಂತ್ರಿ, ಪ್ರಧಾನ ಮಂತ್ರಿ,*
*ಬನ್ನಿ ಬನ್ನಿ ಎಲ್ಲಾರೂ ಬನ್ನಿ*
*ರೈತರ ಹೆಣಾನ ಹೊರೂಕ ಬನ್ನಿ*
*ಬೀದಿ ನಾಟ್ಕಾ ಬೀದಿ ನಾಟ್ಕ*
*ಬೀದಿ ನಾಟ್ಕಾ ಬೀದಿನಾಟ್ಕ*

*(ಜನ ಜಮಾಯಿಸುವರು. ಹಾಡು ಮುಗಿದಂತೆ ಅನೇಕ ಗಂಡಸರು, ಹೆಂಗಸರು ಕಸಬರಿಗೆ ಹಿಡಿದು ನೆಲ ಗುಡಿಸುವ ತರಾತುರಿಯಲ್ಲಿದ್ದಾರೆ)*

**ಸೂತ್ರಧಾರ** : ನಿಲ್ಲಿಸರೋ ನಿಲ್ಲಿಸಿ. ಬೀದಿ ನಾಟ್ಕ ಆಡಬೇಕಂತ ನಾನು ಕೂಗತಾ ಇದ್ದೇನೆ. ಜನರನ್ನ ನೆರೆಸಿದೇನೆ. ನೀವು.. ನೀವು ಬಂದು ನೆಲ ಗುಡಿಸಲು ಶುರು ಮಾಡಿದರಲ್ಲ ! ಬಂದ್ ಮಾಡಿ. ಇಲ್ದಿದ್ರೆ ಕೆಲ್ಸ ನೆಟ್ಟಾಗಲಿಕ್ಕಿಲ್ಲ.

**೧ನೆಯವ** : ಏನ ಮಾಡತಿಯಪೊ, ಹೊಡಿತಿಯಾ ? ಬಡಿತಿಯಾ ? ಏನ ಮಾಡ್ತಿ ?

**ಸೂತ್ರಧಾರ** : ಪೋಲೀಸರ ಕರಸತೇನೆ, ಪೋಲೀಸರು *(ಎಲ್ಲರೂ ಬಿದ್ದು ಬಿದ್ದು ನಗುವರು. ಸೂತ್ರಧಾರ ಕಕ್ಕಾಬಿಕ್ಕಿಯಾಗಿ)* ಏನಾಯ್ತು? ಏನಾಯಿತೂ ಅಂತ ಬಿದ್ದು ಬಿದ್ದು ನಗತೀರಿ ?

**೧ನೆಯವ** : ದಡ್ಡ ದಡ್ಡ,

**೨ನೆಯವ** : ದಡ್ಡ ದಡ್ಡ.

**ಸೂತ್ರಧಾರ** : ಯಾರು ಯಾರು ದಡ್ಡರು; ಯಾಕೆ ದಡ್ಡರು ?

**೩ನೆಯವ** : ನೀನು... ನೀನೇ ಶತದಡ್ಡ.

**ಸೂತ್ರಧಾರ** : ಹಾಗಂದ್ರೆ ?

**೪ನೆಯವ** : ಪೋಲೀಸರ ಕರಸ್ತೇನೆ ಅಂದ್ಯಲ್ಲ ? ಅದಕ್ಕೆ.

**ಸೂತ್ರಧಾರ** : ತಪ್ಪೇನು ? ಮತ್ತೆ ಮತ್ತೆ ಹೇಳತೇನೆ, ಈಗಿಂದೀಗ ನೀವು ಗುಡಿಸುವ ಕೆಲಸ ಬಂದ್ ಮಾಡದಿದ್ದರೆ ಕರಸತೇನೆ ಪೋಲೀಸರನ್ನ.

**೧ನೆಯವ** : ಇದಕ್ಕೇ ದಡ್ಡ ಅಂದದ್ದು. ಪೋಲೀಸರು ನಮ್ಮ ಪಕ್ಷಕ್ಕೇ ಇದ್ದಾರೆ. ನೆನಪಿಡು, ನಾವು ಸರಕಾರದವರು!

**೨ನೆಯವ** : ನೆಲ ಗುಡಿಸುವುದು ಮಾತ್ರ ಅಲ್ಲಪೊ, ರತ್ನಗಂಬಳಿ ಹಾಸತೇವೆ.

**೩ನೆಯವ** : ಅಷ್ಟೇ ಅಲ್ಲ, ಸುಮಂಗಲಿಯರಿಂದ ಪೂರ್ಣಕುಂಭ ಸ್ವಾಗತ.

**೪ನೆಯವ** : ಪುರೋಹಿತರಿಂದ ವೇದಮಂತ್ರ ಸ್ವಾಗತ. ನೀ ಬದಿಗೆ ನಡೆಯಪ್ಪ, ನಮಗೆ ಗುಡಿಸೂದ ಬೇಗ ಆಗಬೇಕು.

**ಸೂತ್ರಧಾರ** : ಅಲ್ಲರೋ ಗೆಣೆಕಾರರ, ನನಗೆ ಇದು ತುದಿ ಬುಡ ತಿಳೀಲಿಲ್ಲ. ಇಷ್ಟೆಲ್ಲಾ ಯಾರ ಸ್ವಾಗತಕ್ಕಾಗೀ.

**೧ನೆಯವ** : ವಿದೇಶಿ ಕಂಪನಿಗಳಿಗೆ.

**೨ನೆಯವ**: ವಿದೇಶಿ ಕಂಪನಿಗಳು ಬರುವ ದಾರಿಯನ್ನು ಗುಡಿಸಿ...

**೩ನೆಯವ** : ಸಗಣಿ ಹಾಕಿ ಸಾರಿಸಿ...

**೪ನೆಯವ** : ಪಂಚಗೋಮಯ ಹಾಕಿ ಶುದ್ಧಮಾಡಿ...

**೧ನೆಯವ** : ಸೇಡಿಯಿಂದ ರಂಗೋಲಿ ಬರೆದು...

**೨ನೆಯವ** : ಮುಂದುಗಡೆ ರತ್ನಗಂಬಳಿ ಹಾಸಿ...

**೪ನೆಯವ** : ಸ್ವಾಗತಿಸುತ್ತೇವೆ.

**ಸೂತ್ರಧಾರ** : ಯಾರು ?

**೧ನೆಯವ** : ಯಾರು ಎಂದರೆ, ನಾವು, ನಾವೇ ನಮ್ಮ ಸರಕಾರ.

**೨ನೆಯವ** : ಅದರಿಂದ ನಮ್ಮ ದೇಶದಲ್ಲಿ ಉದ್ಯೋಗ ಹೆಚ್ಚಿ, ಉತ್ಪತ್ತಿ ಹೆಚ್ಚಿ, ಹಣಾ, ಆಹಾ ! ಹಣ, ಹಣ

**ಹಾಡು**

*ಝಣ್ ಝಣ್ ಝಣ್*
*ಝಣ್ ಝಣ್ ಝಣ್*
*ಕಾಂಚನಲಕ್ಷ್ಮಿ ಹಣ*
*ಹೆಜ್ಜೆಯ ಮೇಲೆ ಹೆಜ್ಜೆಯನಿಡುತ*
*ಬರುವಳು ನಿಲ್ಲದೆ ಕ್ಷಣ*

**ಸೂತ್ರಧಾರ** : ಬೀಳಲು ರೈತರ ಹೆಣ.

**ಗುಂಪು** : ಏನು ?

*(ಒಂದು ಚಿಕ್ಕ ಗುಂಪು ರೈತನೋರ್ವನ ಹೆಣ ಹೊತ್ತು ದಾರಿ ಬಿಡಿ ದಾರಿ ಬಿಡಿ ಎನ್ನುತ್ತ ಬರುವರು)*

**ಹೆಂಡತಿ** : ಅಯ್ಯಯ್ಯೋ ಹೆದರ್ಸಬೇಡಪ್ಪ ಸತ್ತು ಹೋದರಲ್ಲಪ್ಪಾ. ಇನ್ನು ನಮ್ಮ ಗತಿಯೇನು ? ಹಸಿ ಹಸಿ ಜೀವ ತಕೊಂಡಬಿಟ್ರಲ್ಲಪ್ಪಾ !

**ತಾಯಿ** : ನನ್ಮಗಾ ಮುದುಕಿ ಬಿಟ್ಟು ತಾನು ಸತ್ತಕಂಡ ಬಿಟ್ನಲ್ಲಪ್ಪಾ !

**ಮಗ** : ಅಯ್ಯೋ ಅಪ್ಪಾ , ಅಪ್ಪಾ !

**ಸೂತ್ರಧಾರ** : ಅಮ್ಮ, ಅವ್ವ, ಯಾಕೆ ಅಳುತ್ತೀರಿ, ಅಳಬೇಡಿ, ಏನು ಕತೆ; ಇದೇನು ಮಸಣಾಂತ ತಿಳಿದಿರಾ ?

**ಹೆಂಡತಿ** : ಅಣ್ಣ, ಸಿಟ್ಟು ಮಾಡಬೇಡ, ಹೀಂಗ ಆಗೋಯ್ತು ನೋಡು. ನಮ್ಮ ಹಣೇಲಿ ಬರದದು. ನಮಗೆ ದಾರಿ ಬಿಡಿ, ಅಷ್ಟಾದರೂ ಉಪ್ಕಾರ ಮಾಡಿ.

**ಸೂತ್ರಧಾರ** : ಅವ್ವಾ ಎಷ್ಟು ಕಣ್ಣೀರು ಹಾಕಿದರೂ ಸತ್ತವರೇನು ತಿರುಗಿ ಬರುವುದಿಲ್ಲ. ಸಮಾಧಾನ ಮಾಡಕಳ್ಳಿ. ಏನಾಗಿತ್ತು ? ಯಾಕೆ ಸತ್ರ ? ಯಾರು

ಆರ್. ವಿ. ಭಂಡಾರಿ

ಹೊಡೆದು ಹಾಕಿದರು?

*(ಗುಂಪಿನವರ ಮಾತುಕತೆ)*

**೧ನೆಯವ** : ಇಲ್ಲಿ ರಂಗೋಲಿ ಬರಿಬೇಕು.

**೨ನೆಯವ** : ರತ್ನಗಂಬಳಿ ಹಾಕಬೇಕು.

**೩ನೆಯವ** : ತೋರಣ ಕಟ್ಟಬೇಕು.

**೪ನೆಯವ** : ಏನಾಯ್ತು ಅಂತ ಹೇಳಿ ಮುಗಿಸಿ, ಜಾಗ ಖಾಲಿ ಮಾಡಿ ಜಲ್ದಿ.

**ಹೆಂಡತಿ** : ವಿಷ ತಿಂದು, ಕ್ರಿಮಿನಾಶಕ ತಿಂದು ಸತ್ ಬಿಟ್ಟವರೆ.

**ಸೂತ್ರಧಾರ** : ಯಾಕೆ ಜಗಳ ಮಾಡಿ ಕೊಂಡಿರಾ ?

**ತಾಯಿ** : ಅಲ್ಲಪ್ಪಾ ಅಲ್ಲ. ಸಾಲ.. ಸಾಲ ತೀರಿಸಲಾರದೆ..

**ಸೂತ್ರಧಾರ** : ಸಾಲ ? ಅಷ್ಟೊಂದು ದೊಡ್ಡ ಸಾಲ ಯಾಕೆ?

**ಹೆಂಡತಿ** : ಬೇಸಾಯ ಮಾಡಲಿಕ್ಕೆ ಹೊಸ ತಳಿ ಬೀಜ ಹಾಕಬೇಕು, ಹೆಚ್ಚು ಬೆಳೆ ತೆಗೀಬೇಕು; ಎಂದೆಲ್ಲ ಆಲೋಚನೆ ಮಾಡಿ, ಹೊಸದಾಗಿ ಎರಡು ಎತ್ತು, ಹೆಚ್ಚು ಹೆಚ್ಚು ರಸಗೊಬ್ಬರ... ಅಮೇರಿಕದ ಬೀಜ, ಬ್ಯಾಂಕಿನ ಸಾಲ, ಸಾವ್ಕಾರರ ಸಾಲ...

**ಸೂತ್ರಧಾರ** : ಸಾಲ ಆದರೇನು ? ನಮ್ಮ ರೈತರು ಹೆಚ್ಚು ಬೆಳೀಬೇಕು. ಬೆಳೆ ಪುಷ್ಕಳ ತೆಗೀಬೇಕು. ಹೆಚ್ಚು ಫಸಲು ಬಂದರೆ ಹೆಚ್ಚುಹಣ. ಝಣಕ್ ಝಣಕ್ ಅಂತ ಬರತದೆ.

**ಹೆಂಡತಿ** : ಬೇಸಾಯ ಮಾಡಿದ್ರು, ಚಲೋದಾಗೇ ಮಾಡಿದ್ರು. ಆದರೆ ಮಳೆ ಬರಲಿಲ್ಲ.

**ಸೂತ್ರಧಾರ** : ಮರಳಿ ಯತ್ನವ ಮಾಡು.

**ಹೆಂಡತಿ** : ಮಾರನೇ ವರ್ಸವೂ ಚಲೋ ಬೇಸಾಯ ಮಾಡಿದ್ರು. ಅದೇನೋ ಹೊಸ ತಳಿಯಂತೆ ಅಮ್ರೇಕಾದಿಂದ ಬರತದಂತೆ. ಅದಕ್ಕೆ ರೋಗ ಬಂದ್ರೆ, ಅಮ್ರೇಕದ್ದೇ ಔಸುದ್ಯ ತಕಾಬೇಕಂತೆ, ತುಟ್ಟಿ, ಬಲುತುಟ್ಟಿ. ಆದರೂ ಸಾಲ ಮಾಡಿ ತಕಂಡ್ರು. ಆದರೆ ಧಾನ್ಯದ ದರ ಜರ್ರಽಽಂತ ಇಳಿದ್ಹೋಯ್ತು. ಹಾಕಿದ ಕಾಸು ಕೈಗೆ ಹತ್ತಲಿಲ್ಲ. ಸಾವುಕಾರರು, ಬ್ಯಾಂಕಿನವರು ಯಮ ಬೆನ್ನಿಗೆ ಹತ್ತಿದಾಂಗೆ ಬೆನ್ನಿಗೆ ಬಿದ್ದರು. ಅಪ್ಮಾನ ಆಗಿ ಇಸಾ ತಕಂಡ್ರು.

**ಹೆಣಹೊತ್ತವರಲ್ಲೊಬ್ಬ**: ಸಾಕು ಈಗ ಅದೆಲ್ಲಾ ಹೇಳಿದರೇನು ಬಿಟ್ಟರೇನು ! ರೈತರ ಬಾಳೇ ಹಾಂಗೆ, ಇಸಾ ತಿಂದು ಸಾಯೂದೆ. ಏಳಿ, ಏಳಿ *(ಹೆಣ ಹೊತ್ತು ಹೋಗುವರು)*

**ಸೂತ್ರಧಾರ** : *(ಹೋದಕಡೆ ನೋಡುತ್ತ)* ಇದನ್ನ ನಾವು ಬಯಸಿದ್ದು. ಇದಕ್ಕೇನೇ ನೀವು ಇಷ್ಟೆಲ್ಲ ತಯಾರಿ ನಡೆಸುತ್ತಿದ್ದುದು. ಕಂಪನಿಯಂತೆ, ವಿದೇಶಿ ಕಂಪನಿಯಂತೆ. ಭಾಳ ಸಂಭ್ರಮದಿಂದ ವಿದೇಶಿ ಕಂಪನಿಗೆ ರತ್ನಗಂಬಳಿ ಹಾಸುತ್ತಿದ್ದೀರಾ ? ನಿಮಗೆ ಈ ವಿದೇಶಿ ಕಂಪನಿಗಳ ಕತೆ ಗೊತ್ತಾ ?

**೧ನೆಯವ** : ಮತ್ತೆ ನಿನಗೆ ಗೊತ್ತಾ ?

**ಸೂತ್ರಧಾರ** : ಹೌದು ಗೊತ್ತು. ಮೊದಲೂ ಇಲ್ಲಿ ವಿದೇಶಿ ಕಂಪನಿಗಳು ವ್ಯಾಪಾರಕ್ಕೆ ಬಂದಿದ್ದು. ಆಮೇಲೆ ವ್ಯಾಪಾರ ಹೋಗಿ ಸರಕಾರ ಆಯ್ತು. ಆಮೇಲೆ ಇಡೀ ದೇಶದ ಚುಕ್ಕಾಣಿ ಅವರ ಕೈಗೆ ಹೋಯ್ತು. ಭಾರತೀಯರ ಕೈಗೆ ಗರಟೆ ಬಂತು. ಆದರೆ ನಮ್ಮ ಹಿರಿಯ ವೀರರು ಅದನ್ನು ಬಯಸಿರಲಿಲ್ಲ.

**೨ನೆಯವ** : ಹಾಗಾದರೆ ?

**ಸೂತ್ರಧಾರ** : ಸುಮಾರು ಹದಿನಾರನೇ ಶತಮಾನ ಮಧ್ಯಕಾಲ. ಹೊನ್ನಾವರದ ಗೇರುಸೊಪ್ಪೆಯಲ್ಲಿ ಚೆನ್ನಭೈರಾದೇವಿ ಎಂಬ ರಾಣಿಯಿದ್ದಳು. ಅಲ್ಲಿ ಮೆಣಸಿನಕಾಳಿನ ಉತ್ಪತ್ತಿ ಜಾಸ್ತಿಯಾಗಿತ್ತು. ಚೆನ್ನಭೈರಾದೇವಿಗೆ 'ಮೆಣಸಿನಕಾಳಿನ ರಾಣಿ' ಎಂದೇ ಕರೆಯುತ್ತಿದ್ದರು. ಅಷ್ಟು ಪ್ರಸಿದ್ಧಿ.

ಆ ಮೆಣಸಿನಕಾಳಿನ ಮೇಲೆ ಪೋರ್ಚುಗೀಸರ ಕಣ್ಣು ಬಿತ್ತು. ಅದಕ್ಕೆ ಅಪಾರ ಬೇಡಿಕೆಯಿತ್ತು. ಕಾಳುಮೆಣಸಿನ ವ್ಯಾಪಾರದ ಪೂರ್ಣ ಸ್ವಾಮ್ಯವನ್ನು ತಾವು ಪಡೆಯಬೇಕೆಂದು ಅವರು ಬಯಸಿದರು. ಆದರೆ ಚೆನ್ನಭೈರಾದೇವಿ ಅವರನ್ನು ಸ್ವಾಗತಿಸಲಿಲ್ಲ.

*(ಚೆನ್ನ ಭೈರಾದೇವಿ ಯಕ್ಷಗಾನದ ಮೀನಾಕ್ಷಿ ಪಾತ್ರದಂತೆ ತಲೆಗೂದಲು ಹರಡಿ, ಕಿರೀಟ ಧರಿಸಿ ಯಕ್ಷಗಾನದ ಚಂಡೆಯ ಗತ್ತಿಗೆ ಕುಣಿಯುತ್ತ ವೀರಾವೇಷದಿಂದ ಬರುತ್ತಾಳೆ)*

**ಚೆನ್ನಭೈರಾದೇವಿ** : ಮಂತ್ರಿಗಳೇ ಏನು ಸಮಾಚಾರ ?

**ಮಂತ್ರಿ** : ಮಹಾರಾಣಿ, ಪೋರ್ಚುಗೀಸರು ಕಾಲುಕೆದರಿ ಮುಂದೆ ಬರುತ್ತಿದ್ದಾರೆ.

**ರಾಣಿ** : ಅವರಿಗೆ ಬೇಕಾದುದೇನಾದರೂ ಏನು ?

**ಮಂತ್ರಿ** : ಕಾಳುಮೆಣಸಿನ ಬಂದರು. ಕಾಳುಮೆಣಸಿನ ವ್ಯಾಪಾರದ ಪೂರ್ಣ ಸ್ವಾಮ್ಯ.

**ರಾಣಿ** : ಅದನ್ನು ಬಿಟ್ಟುಕೊಡಲು ಹೇಗೆ ಸಾಧ್ಯ ? ಮೊದಲು ಮೆತ್ತಗೆ ಮಾತಾಡುತ್ತಾ ಬಂದರು. ಈಗ ಹೆದರಿಸಿ ನೋಡುತ್ತಿದ್ದಾರೆ. ನಾವೇನು ಹೇಡಿಗಳಲ್ಲ. ನಮ್ಮ ಬಂದರು ವ್ಯಾಪಾರ ನಮ್ಮ ಜೀವನಾಡಿ. ಹೊನ್ನಾವರ, ಗೇರುಸೊಪ್ಪೆ ಬಂದರು ನಮ್ಮ ಒಡೆತನಕ್ಕೆ ಸೇರಿದ್ದು.

**ಮಂತ್ರಿ** : ಅದನ್ನವರು ಒಪ್ಪುತ್ತಾರೆ.

**ರಾಣಿ** : ಮೊದ ಮೊದಲು ಒಪ್ಪಿದಂತಿರುತ್ತಾರೆ. ಅನಂತರ ನಾವು ಬಗ್ಗಿದ ಹಾಗೆ ನಮ್ಮನ್ನು ಬಗ್ಗಿಸುತ್ತಾ ಹೋಗುತ್ತಾರೆ. ಅವರ ತಾಳಕ್ಕೆ ನಾವು ಕುಣಿಯುವ ಅವಸ್ಥೆಗೆ ನೂಕುತ್ತಾರೆ.

**ಮಂತ್ರಿ** : ನಮಗೆ ಉಪಕಾರ ಮಾಡುತ್ತಾರಂತೆ.

**ರಾಣಿ** : ಅವಶ್ಯವಿಲ್ಲ. ಇದು ನಮ್ಮ ಅಳಿವುಳಿವಿನ ಪ್ರಶ್ನೆ.

**ಮಂತ್ರಿ** : ಅವರು ಉಂಬಳಿಯಾಗಿ ಬೊಕ್ಕಸಕ್ಕೆ ಸಾಲ ಕೊಡುತ್ತಾರಂತೆ.

**ರಾಣಿ** : ಛಿ ! ಉಂಬಳಿ, ಸಾಲ, ನಾಚಿಕೆಗೇಡು. ನಾವು ಅಷ್ಟು ಕ್ಷುಲ್ಲಕರಲ್ಲ. ನಮ್ಮ ರಾಜ್ಯವನ್ನು ನಾವು ಬೆಳೆಸುತ್ತೇವೆ. ಒಂದು ವೇಳೆ ಅವರ ಯಾವ ಷರತ್ತು ಇಲ್ಲದೆ ನ್ಯಾಯವಾದ ಒಪ್ಪಂದದ ಮೇಲೆ ಸಹಾಯ ಮಾಡುತ್ತಾರಾ ? ಇಲ್ಲ. ಅದಿಲ್ಲದ ಮೇಲೆ...

**ಮಂತ್ರಿ** : ಯುದ್ಧಕ್ಕೆ ಆಹ್ವಾನಿಸುತ್ತಾರೆ.

**ರಾಣಿ** : *(ವೀರಾವೇಶ)* ಯುದ್ಧಕ್ಕೆ ಆಹ್ವಾನ. ಆಗಬಹುದು. ನಮ್ಮ ರಾಜ್ಯದಲ್ಲಿ ಅವರ ಪವಿತ್ರ ಪಾದಧೂಳಿ ಬೀಳುವ ಅವಶ್ಯಕತೆಯಿಲ್ಲ. ನಮ್ಮ ಸ್ವಾತಂತ್ಯವನ್ನು ನಾವು ಒತ್ತೆ ಇಡಲಾರೆವು. ಸೈನ್ಯ ಸಿದ್ಧವಿರಲಿ. *(ಬಂದ ರೀತಿಯಲ್ಲೇ ಹೋಗುವಳು)*

**ಒಂದನೆಯವ** : ಶಹಬಾಸ್, ಸರಿಯಾಯಿತು ಕಂಪನಿಗೆ.

**ಸೂತ್ರಧಾರ** : ಆದರೆ, ಪೋರ್ಚುಗೀಸರದೊಂದೇ ಕಂಪನಿ ಇದ್ದಿರಲಿಲ್ಲ, ಡಚ್ಚರು, ಫ್ರೆಂಚರು, ಇಂಗ್ಲಿಷರದ್ದೂ ವ್ಯಾಪಾರಿ ಕಂಪನಿಗಳಿದ್ದವು. ಅವರು ತಮ್ಮ ತಮ್ಮಲ್ಲೇ ಪೈಪೋಟಿ ನಡೆಸುತ್ತಿದ್ದರು. ಆಗ ಅವರು ಈಗಿನವರಷ್ಟು ಬುದ್ಧಿವಂತರಾಗಿರಲಿಲ್ಲ. ಈಗ ಹಾಗಲ್ಲ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಅಮೆರಿಕಾ ಇವರೆಲ್ಲ ಕೂಡಿಯೇ ಒಪ್ಪಂದ ಮಾಡಿಕೊಂಡಿದ್ದಾರೆ. ಅಂಥ ವ್ಯಾಪಾರಿ ಸಂಘಟನೆಯ ಹೆಸರೇ ಗ್ಯಾಟ್. ಶ್ರೀಮಂತ ರಾಷ್ಟ್ರಗಳೆಂಬ ಬೆಕ್ಕುಗಳು ನಮ್ಮಂಥ ಬಡದೇಶಗಳೆಂಬ ಇಲಿಗಳ ಉದ್ಧಾರ ಮಾಡುತ್ತೇವೆನ್ನುತ್ತವೆ. ಆಗಿನ ಪೈಪೋಟಿಯಲ್ಲಿ ಇಂಗ್ಲಿಷರದ್ದೇ ಕೈಮೇಲಾಯಿತು.

**೩ನೆಯವ** : ಯಾಕೆ ಇಲ್ಲಿ ಅನೇಕ ರಾಜರಿದ್ದರಲ್ಲ ? ಅವರು ತಡೆಯಲಿಲ್ಲವೇ ?

**ಸೂತ್ರಧಾರ** : ಇದ್ದರು. ಅನೇಕ ರಾಜರಿದ್ದರು. ತಮ್ಮ ತಮ್ಮ ಸುಖ-ಭೋಗವನ್ನು ಅನುಭೋಗಿಸುವುದಕ್ಕಾಗಿ. ಈಗ ನೀವು ರತ್ನಗಂಬಳಿ ಹಾಕುತ್ತಿದ್ದಂತೆ ಅವರೂ ವಿದೇಶಿ ಕಂಪನಿಗೆ ರತ್ನಗಂಬಳಿ ಹಾಕಿದರು. ಆದರೂ ಅವರಿಗೆ ಈಗಿನಷ್ಟು ಸುಲಭವಾಗಲಿಲ್ಲ.

**೪ನೆಯವ** : ಯಾಕೆ ? ಯಾರಾದರೂ ತಡೆದರಾ ?

**ಸೂತ್ರಧಾರ** : ಟಿಪ್ಪು... ಟಿಪ್ಪುಸುಲ್ತಾನ ಹದಿನೆಂಟನೇ ಶತಮಾನದ ಅಂತ್ಯದಲ್ಲಿ ಆತ ಮೈಸೂರನ್ನು ಆಳುತ್ತಿದ್ದ. *(ಖಡ್ಗ ತಿರುಗಿಸುತ್ತ ಕತ್ತಿ ತಿರುಗಿಸುತ್ತ ವೀರಾವೇಶದಿಂದ ಪ್ರವೇಶಿಸುತ್ತಾನೆ)*

**ಟಿಪ್ಪು** : ಪೂರ್ಣಯ್ಯನವರೇ ಇಂಗ್ಲಿಷರ ಗೆಲುವಿನ ಗುಟ್ಟು ತಿಳಿಯಿತೇ?

**ಪೂರ್ಣಯ್ಯ** : ಅವರ ನೌಕಾಬಲ.

**ಟಿಪ್ಪು** : ಸರಿಯಾಗಿ ಹೇಳಿದಿರಿ. ಪೂರ್ಣಯ್ಯನವರೇ, ನಮ್ಮ ರಾಜ್ಯದ ಕರಾವಳಿ ಬಂದರುಗಳನ್ನು ಹೊಸದಾಗಿ ಕಟ್ಟಬೇಕು. ನೌಕಾಬಲವನ್ನು ಬೆಳೆಸಬೇಕು. ಹಾಗೇ ಕಟ್ಟೆಚ್ಚರ ವಹಿಸಬೇಕು.

**ಪೂರ್ಣಯ್ಯ** : ದಿನದಿನಕ್ಕೆ ಇಂಗ್ಲಿಷರ ಶಕ್ತಿ ಹೆಚ್ಚಾಗುತ್ತಿದೆ. ಈಗ ಅದನ್ನು ತಡೆಯುವುದೇ ಕಷ್ಟ. ಮರಾಠರು, ಹೈದರಾಬಾದಿನ ನಿಜಾಮ ಸಹ....

**ಟಿಪ್ಪು** : ಸ್ವಾರ್ಥಿಗಳು, ಕ್ಷುಲ್ಲಕರು, ಅಧಿಕಾರ ದಾಹಿಗಳು, ಸುಖಲೋಲುಪರು. ಆದ್ದರಿಂದಲೇ ಅವರು ಇಂಗ್ಲಿಷರ ಆಶ್ರಯ ಒಪ್ಪಿಕೊಂಡು ರತ್ನಕಂಬಳಿ ಹಾಕಿ ಸ್ವಾಗತಿಸುವ ತಯಾರಿ ನಡೆಸಿದ್ದಾರೆ.

ಅದಿರಲಿ ಪೂರ್ಣಯ್ಯನವರೇ ಅವರಿಗೆ ಕಣ್ಣಿಗೆ ಹುಣ್ಣಾಗಿರುವವನೆಂದರೆ ಟಿಪ್ಪು ಮಾತ್ರ. ನಾವು ಮುತ್ಸದ್ದಿತನ ತೋರಬೇಕು. ಏಕಕಾಲಕ್ಕೆ ಮರಾಠರೊಡನೆಯೂ, ನಿಜಾಮರೊಡನೆಯೂ ಒಪ್ಪಂದ ಮಾಡಿಕೊಳ್ಳಬೇಕು. ನಾವು, ಮರಾಠರು, ನಿಜಾಮ ಒಟ್ಟಾದರೆ ಇಂಗ್ಲಿಷರು ಹಿಂದುಸ್ಥಾನದಿಂದಲೇ ಕಾಲ್ತೆಗೆಯಬೇಕಾಗುತ್ತದೆ. ಅದಕ್ಕೆ ತಕ್ಕ ಏರ್ಪಾಡು ಮಾಡಿ.

**ಪೂರ್ಣಯ್ಯ** : ಹಾಗೇ ಆಗಲಿ.

**ಟಿಪ್ಪು** : ಅದೇ ಹೊತ್ತಿಗೆ ನಮ್ಮ ರಾಜ್ಯವನ್ನು ಸಂಪದ್ಭರಿತವನ್ನಾಗಿ ಮಾಡಬೇಕು. ಮುಖ್ಯವಾಗಿ ಯಂತ್ರಗಾರಿಕೆ ಬೆಳೆಸಬೇಕು. ಅದಕ್ಕೆ ನಮಗೆ ಸಹಾಯ ಸಿಕ್ಕುವಂತಿದ್ದರೆ...

**ದೂತ** : ಖಾವಂದವರು ಮನ್ನಿಸಬೇಕು. ಇಂಗ್ಲಿಷ್ ಕಂಪನಿಯ ಅಧಿಕಾರಿ ಬಂದಿದ್ದಾನೆ.

**ಟಿಪ್ಪು** : ಕರೆತನ್ನಿ.

## ಕಥೆಗಾಲದವರು

ಕಥೆ ಹೇಳುವವರು ಕೂಡುತ್ತಾರೆ
ಕಥೆ ಕೇಳುವವರ್‍ಯಾರೂ ಕೂಡುವುದಿಲ್ಲ

ಕಥೆಯನ್ನು ಪೋಣಿಸಿ, ಗುಣಿಸಿ
ಮಸಾಲೆ ಹಾಕಿ ಮುಖಕ್ಕೆ ಹಿಡಿಯುತ್ತಾರೆ
ಸನ್ನೆ ಮಾಡಿ ಹೇಳುತ್ತಾರೆ, ಕ್ಲಿಷ್ಟವಾದರೂ ಕೇಳುತ್ತೇನೆ
ಕಥೆ ಹೇಳಿದವರು ನನ್ನ ಕಥೆಯನ್ನು ಕೇಳಬಹುದೆಂದು

ಚಿತ್ತಾರದ ಚೆಲುವಿನಲ್ಲಿ ಭಾವದ ನವರಂಗಿನಲ್ಲಿ
ಕೊಟ್ಟಷ್ಟು ಬಿಟ್ಟಷ್ಟು ಬರೀ ಬಿಟ್ಟಿ ಲೆಕ್ಕ
ಸುಖಕ್ಕಿಂತ ಕಷ್ಟವೇ ಹೆಚ್ಚೆಂದು ಹೇಳುತ್ತಾರೆ
ಹಳೆಯ ನೆನಪು ತೋಡಿಕೊಳ್ಳುತ್ತಾರೆ
ಅತ್ತವರೊಂದಿಗೆ ನಾನು ಅಳುತ್ತೇನೆ
ಏಕೆಂದರೆ ನನ್ನದೂ ಕಥೆ ಕೇಳಿ ಹನಿ ಕಣ್ಣೀರು
ಹಾಕಬಲ್ಲರೆಂದು

ಭೂತ, ವರ್ತಮಾನದಾಚೆಗಿನ ಭವಿಷ್ಯ ಹೇಳುವಲ್ಲಿ
ಹೂಂಗುಡುತ್ತಲೇ ಇದ್ದರೂ ಅವರದು ಮುಗಿಯದ ಕಥೆ
ಕೊನೆಗೊಮ್ಮೆ ಕೇಳುತ್ತೇನೆ
ನಿನ್ನೆ ಇಂದುಗಳ ಅಂಗಳದಲ್ಲಿ

ಮೋಸ, ವಂಚನೆ, ಬಲತ್ಕಾರ ತೀರೀತೆ ?
ನೋವು ಹರಿಯುವ ಹಾದಿ ತಪ್ಪೀತೆ ?

ಮಂದಿರ ಮಸೀದಿಯಲ್ಲಿ ಕೆಂಪಾದ ಚೂರಿಗಳು
ಅರಳಬಲ್ಲವೇ ಗುಲಾಬಿಗಳಾಗಿ ?
ಹುಡಿಯಾದವರು ಹುಟ್ಟಬಲ್ಲರೇ ಮತ್ತೆ ?
ನನ್ನ ಕಥೆಯ ಪ್ರಶ್ನೆಗಳಿಗುತ್ತರ ಕೇಳಿದೆ
ಅವರು ನಾಜೂಕಾಗಿ ಜಾಗ ಖಾಲಿ ಮಾಡಿದರು

**ಎಂ. ಮಂಜುನಾಥ ಬಮ್ಮನಕಟ್ಟಿ**
ಪತ್ರಕರ್ತ, ಲಕ್ಷ್ಮೇಶ್ವರ– ೫೮೨ ೧೧೬, ಗದಗ ಜಿಲ್ಲೆ



**ಅಧಿಕಾರಿ :** ಗುಡ್ ಮಾರ್ನಿಂಗ್, ಗುಡ್ ಮಾರ್ನಿಂಗ್ ಟಿಪ್ಪು, ದ ಟೈಗರ್ ಆಫ್ ಮೈಸೂರ್, ತಮಗೆ ಇಂಗ್ಲಿಷ್ ಗವರ್ನರ್ ವಂದನೆ ಹೇಳಿದಾರೆ. ತಮಗೆ ಸಂದೇಶ ಕಳಿಸಿದ್ದಾರೆ.

**ಟಿಪ್ಪು :** ಏನು ಸಂದೇಶ ?

**ಅಧಿಕಾರಿ :** ನಾವು ನಿಮಗೆಲ್ಲ ಸಮಾ ಮಾಡುತ್ತೇವೆ. ನೀವು ನಮ್ಮ ಸಹಾಯಕ ಸೈನ್ಯ ಯೋಜನೆ ಸ್ವೀಕರಿಸಿದರಾಯಿತು. ನಮ್ಮ ಸೈನ್ಯ ನಿಮಗೆ ನಿಮ್ಮ ವೈರಿಗಳಿಂದ ರಕ್ಷಣೆ ಕೊಡುತ್ತದೆ. ನೀವೇ ರಾಜರಾಗಿರುತ್ತೀರಿ. ಆದರೆ ನಿಮ್ಮ ಆಡಳಿತದಲ್ಲಿ ಇಂಗ್ಲಿಷ್ ಕಂಪನಿ ಸಲಹೆ ಮಾಡುತ್ತದೆ. ಅದನ್ನು ಕೇಳಿಕೊಂಡಿದ್ದರಾಯಿತು. ಕಂಪನಿ ನಿಮಗೆ ಎಲ್ಲಾ ಸಮಾ ಮಾಡುತ್ತದೆ.

**ಟಿಪ್ಪು :** *(ಉಗ್ರಸಿಟ್ಟಿನಿಂದ)* ಏನು ? ನಿಮ್ಮ ಸಹಾಯಕ ಸೈನ್ಯ ಯೋಜನೆಯನ್ನು ಸ್ವೀಕರಿಸಿದರಾಯಿತು. ನೀವು ನಮಗೆ ಎಲ್ಲಾ ಸಮಾ ಮಾಡುತ್ತೀರಾ ! ನಿಮಗೆ ನಮ್ಮ ರಾಜ್ಯದಲ್ಲಿ ಸುಂಕವಿಲ್ಲದ ಮುಕ್ತ ಮಾರುಕಟ್ಟೆ ಕೊಟ್ಟರಾಯಿತು. ಹಹಹ ! ನಿಮ್ಮ ಗವರ್ನರನಿಗೆ ಹೇಳಿ, ನೀವು ನಮ್ಮನ್ನು ಸಮಾ ಮಾಡುವುದು ಬೇಡ. ನಾವೇ ನಿಮ್ಮನ್ನು ಸಮಾ ಮಾಡುವ ಆಲೋಚನೆಯಲ್ಲಿದ್ದೇವೆ. ಈಗಾಗಲೇ ನಿಮ್ಮ ಸಹಾಯಕ ಸೈನ್ಯಯೋಜನೆಯನ್ನು ಸ್ವೀಕರಿಸಿದವರು ನರಪೇತಲುಗಳಾಗಿ ಹೋಗುತ್ತಿರುವುದು ನಮ್ಮ ಕಣ್ಮುಂದೆ ಇದೆ. ಹಾಗಿರುವಾಗ ಇರುಳು ಕಂಡ ಬಾವಿಯಲ್ಲಿ ಹಗಲು ಬೀಳಲು ನಾವು ಸಿದ್ಧರಿಲ್ಲ. ನಿಮ್ಮ ಸಹಾಯ ನಮಗೆ ಬೇಡ. ನಿಮ್ಮ ಕಂಪನಿ ಇಲ್ಲಿ ತನ್ನ ಸರಕನ್ನು ಮಾರಾಟ ಮಾಡಕೂಡದು. ಈಗಲೇ ನೀವು ಈ ನೆಲದಿಂದ ಕಾಲ್ತೆಗೆಯಬೇಕು. ಇಲ್ಲದಿದ್ದರೆ ಇದೋ *(ಕತ್ತಿ ತಿರುಗಿಸುತ್ತಾ ಹೋಗುವನು)*.

**೧ನೆಯವ :** ಆಹಾ ! ಆಹಾ ! ಅದಾದರೆ ವೀರತನ. ಇಂಗ್ಲಿಷರು ಓಡಿಹೋದರಾ ?

**ಸೂತ್ರಧಾರ :** ಇಲ್ಲ. ಇಂಗ್ಲಿಷ್ ಕಂಪನಿ ಮತ್ತು ಟಿಪ್ಪು ಮಧ್ಯೆ ಘನಘೋರವಾದ ಯುದ್ಧವಾಯಿತು. ಇಂಗ್ಲಿಷರನ್ನು ತಡೆಯುವುದಕ್ಕಾಗಿ ರಣರಂಗದಲ್ಲಿ ಮೈಸೂರು ಹುಲಿ ಪ್ರಾಣ ಬಿಟ್ಟಿತು. ಇಂಗ್ಲಿಷರು ದೇಶವನ್ನು ಕೊಳ್ಳೆ ಹೊಡೆದರು. ನಮ್ಮ ರೈತರು ಸಾಲದಲ್ಲೇ ಹುಟ್ಟಿ, ಸಾಲದಲ್ಲೇ ಸತ್ತರು. ಈಗ ಇತಿಹಾಸ ಮರುಕಳಿಸುವಂತೆ ತೋರುತ್ತದೆ.

**೨ನೆಯವ :** ನೀನು ಹೇಳಿದ್ದೇನೊ ವಿಚಿತ್ರ ಇದೆಯಪ್ಪ. ಸ್ವಲ್ಪ ಬಿಡಿಸಿ ಹೇಳು, ಅದಕ್ಕೂ ಇದಕ್ಕೂ ಸಂಬಂಧ ಏನೂಂತ.

**ಸೂತ್ರಧಾರ :** ಈಗ ಮೊದಲಿನಂತೆ ಅಲ್ಲ. ಈಗ ಜಗತ್ತಿನ ಶ್ರೀಮಂತ ರಾಷ್ಟ್ರಗಳು ಒಟ್ಟಾಗಿ 'ಜಾಗತಿಕ ಮುಕ್ತ ಮಾರುಕಟ್ಟೆ' ಎಂಬ ನೀತಿ ನಿರೂಪಿಸಿಕೊಂಡಿದ್ದಾರೆ. ಬನ್ನಿ, ನೀವೂ ಬನ್ನಿ. ನೀವು ನಮ್ಮಷ್ಟೇ ಸ್ವತಂತ್ರರು. ನಮ್ಮಲ್ಲೂ ನೀವು ಬಂದು ವ್ಯಾಪಾರ ಮಾಡಬಹುದು. ನಾವೂ ನಿಮ್ಮ ದೇಶದಲ್ಲಿ ವ್ಯವಹಾರ ನಡೆಸುತ್ತೇವೆ. ನಿಮ್ಮದು ಬಡದೇಶ. ಆದ್ದರಿಂದ ನಾವು ನಿಮ್ಮಲ್ಲಿ ನಮ್ಮ ಕಂಪನಿ ಬೆಳೆಸುತ್ತೇವೆ. ಇದರಿಂದ ನಿಮ್ಮಲ್ಲಿ ಉದ್ಯೋಗದ ಅವಕಾಶ ಹೆಚ್ಚುತ್ತದೆ. ಉತ್ಪನ್ನವೂ ಹೆಚ್ಚುತ್ತದೆ ಅನ್ನುತ್ತಾರೆ.

**೩ನೆಯವ :** ಅದು ಸರಿಯಾಗೆ ಇದೆಯಲ್ಲಾ ? ನಮ್ಮಲ್ಲಿ ಹಣವಿಲ್ಲವೊ ? ಆದ್ದರಿಂದ ಅವರು ದೊಡ್ಡ ಕಾರಖಾನೆ ಮಾಡಿದರೆ ನಮ್ಮ ಜನಕ್ಕೇ ಉದ್ಯೋಗ.

**ಸೂತ್ರಧಾರ :** ಮತ್ತೂ ಅವರು ಹೇಳುತ್ತಾರೆ. ನೀವು ತರುವ ಸರಕಿನ ಮೇಲೆ ಆಮದು ಸುಂಕ ಹೇರಬೇಡಿ. ನಿಮ್ಮ ಜನಕ್ಕೆ ಅಗ್ಗದಲ್ಲಿ ಮಾಲು ಮಾರುತ್ತೇವೆ.

**೪ನೆಯವ :** ಅದು ಬಲು ಚಲೋದು. ಅಗ್ಗದಲ್ಲಿ ಮಾಲು ಯಾರಿಗೆ ಬೇಡ ?

**ಸೂತ್ರಧಾರ :** ಅದು ಕೇಳಲು ಬಲುಚೆಂದ. ಅವರು ತಮ್ಮ ಲಾಭಕ್ಕೇ ಆ ರೀತಿ ಮುಖವಾಡ ಹಾಕುತ್ತಾರೆ. ತಮ್ಮ ದೇಶದಲ್ಲಿ ಉತ್ಪನ್ನವಾದ ಸರಕನ್ನು ಇಲ್ಲಿಗೆ ತಂದು ಮಾರುತ್ತಾರೆ. ಆದರೆ ಅದರ ಪರಿಣಾಮವೇನು ? ನೋಡಿದಿರಲ್ಲ, ರೈತರ ಹೆಣ !

**೧ನೆಯವ :** ಇದು ಗೋಟಾಳಿ ಆಯ್ತಪ್ಪ. ಅದಕ್ಕೂ ಇದಕ್ಕೂ ಸಂಬಂಧವೇನು ? ಗೋಕುಲಾಷ್ಟಮಿಗೂ ಖಾಜಿಸಾಹೇಬರಿಗೂ ಏನು ಸಂಬಂಧ ಅಂದಂಗೆ.

**ಸೂತ್ರಧಾರ :** ಅದು ತಿಳಿಯದಂತಹದೇನಲ್ಲ. ಇಲ್ಲಿ ಆ ರೈತ ಸತ್ತನಲ್ಲ; ಅವ ಏನು ಮಾಡಿದ. ಸಾಲ ಮಾಡಿ, ಹೋರಿ ತಗೊಂಡ, ಬೀಜ, ರಸಗೊಬ್ಬರ, ಕ್ರಿಮಿನಾಶಕ ಎಲ್ಲವೂ ದರ ತುಟ್ಟಿ. ಸಾಲ ಮಾಡಿದ – ಸಾವ್ಕಾರರಲ್ಲಿ ಮತ್ತು ಬ್ಯಾಂಕಿನಲ್ಲಿ. ಬೆಳೆಯೇನೋ ಬಂತು. ಮಾರುಕಟ್ಟೆಯಲ್ಲಿ ಧಾನ್ಯಕ್ಕೆ ಬೆಲೆಯೇ ಬರಲಿಲ್ಲ.

**೨ನೆಯವ :** ಯಾಕೆ ಹಾಗಾಯಿತು ?

**ಸೂತ್ರಧಾರ :** ಯಾಕೆಂದರೆ 'ಮುಕ್ತಮಾರುಕಟ್ಟೆಯ' ನಿಯಮದ ಪ್ರಕಾರ ವಿದೇಶಿ ಕಂಪನಿಗಳು ಸರಕನ್ನು ಅಗ್ಗದ ಬೆಲೆಗೆ ಮಾರಿದವು. ನಮ್ಮ ರೈತನ ಧಾನ್ಯಕ್ಕೆ ಬೆಲೆ ಬರಲಿಲ್ಲ. ಆದದ್ದು ಕಡಿಮೆ ಬೆಲೆ ಬಂತು. ಹಾಗಂತ ಸಾಲ ಕೊಟ್ಟವರು ಕೇಳುತ್ತಾರೆಯೇ ? ಸಾಲ ಮರುಪಾವತಿ ಮಾಡಲು ಒತ್ತಾಯಿಸುತ್ತ ಹೋದರು. ಮನೆ ಹರಾಜು ಹಾಕುವ ಹೆದರಿಕೆ ಹಾಕಿದರು. ಸರಕಾರ ಸಹಾಯಕ್ಕೆ ಬರಲಿಲ್ಲ. ವಿಷ ತರಲೂ ಕಾಸು ಇಲ್ಲದ ರೈತ ಶಿಲ್ಕು ಇದ್ದ ಕ್ರಿಮಿನಾಶಕವನ್ನೇ ತಿಂದು ಜೀವಕೊಟ್ಟ.

**೩ನೆಯವ :** ಇದರಲ್ಲಿ ಸರಕಾರ ಏನು ಮಾಡಲು ಬರುತ್ತದಪ್ಪ. ಗಿರಾಕಿಗಳಿಗಂತೂ ಅಗ್ಗಕ್ಕೆ ಸರಕು ಸಿಕ್ಕಿತು.

**ಸೂತ್ರಧಾರ :** ಯಾಕೆ ಆಗುವುದಿಲ್ಲ ? ದೇಶದ ಮಾರುಕಟ್ಟೆಯನ್ನು ರಕ್ಷಿಸುವುದು ಸರಕಾರದ ಹೊಣೆ. ಬೇರೆ ಕಡೆಯಿಂದ ನಮ್ಮ ದೇಶಕ್ಕೆ ಬರುವ ಸರಕುಗಳ ಮೇಲೆ ಭಾರಿ ಸುಂಕವನ್ನು ಹೇರಬೇಕು. ಆಗ ವಿದೇಶಿ ಕಂಪನಿಗಳಿಗೆ ಇಲ್ಲಿ ಸುಲಭ ಬೆಲೆಗೆ ಸರಕು ಮಾರಲು ಆಗುವುದಿಲ್ಲ. ಆದ್ದರಿಂದ ಅವು ಸ್ಪರ್ಧೆಗೆ ಬರುವುದಿಲ್ಲ. ಬಂದರೂ ಸ್ಪರ್ಧೆ ಸಮತೂಕದ್ದಾಗುತ್ತದೆ. ಆಗ ನಮ್ಮ ಬೆಳೆಗಾರರ ಫಸಲಿಗೆ ರಕ್ಷಣೆ ಸಿಕ್ಕುತ್ತದೆ. ಇಷ್ಟು ವರ್ಷ ಹೀಗೆ ನಡೆದು ಬರಲಿಲ್ಲವೇನು ? ಈಗ ಕೇವಲ ರೈತರದ್ದೇ ಮಾತ್ರ ಅಲ್ಲ, ಉಳ್ಳಾಗಡ್ಡೆ, ತೊಗರಿ, ಟೊಮೆಟೊ, ತೆಂಗು, ಅಡಿಕೆ – ಎಲ್ಲದರಲ್ಲೂ ಹೀಗೆ ಆಗಿದೆ, ಇದು ನಿಮಗೆ ತಿಳಿಯದ್ದೇನು?

**೪ನೆಯವ :** ಅರರೆರೇ ಇದು ಮುಕ್ತ ಮಾರುಕಟ್ಟೆಯ ಪರಿಣಾಮವಾ ? ಡಬ್ಲ್ಯುಟಿಓ ಅಂದರೆ ಇದಾ ?

**ಸೂತ್ರಧಾರ :** ಹೌದೌದು. ವರ್ಲ್ಡ್ ಟ್ರೇಡ್ ಆರ್ಗನೈಝೇಶನ್ ಎಂದು ನಮ್ಮ ಸರಕಾರ ಸಾವಿರಾರು ಸರಕುಗಳ ಮೇಲಿನ ಆಮದು ಸುಂಕ ರದ್ದು ಮಾಡಿದೆ.

**೧ನೆಯವ :** ಅದಕ್ಕೆ ಒಂದು ಉಪಾಯ ಉಂಟಲ್ಲ, ಇವರೂ ಅಗ್ಗದಲ್ಲಿ ಮಾರಿದರಾಯಿತು.

**ಸೂತ್ರಧಾರ :** ಆಗೋದಿಲ್ಲಣ್ಣ. ವಿದೇಶದಲ್ಲಿ ಬೇರೆ ಬೇರೆ ಹೆಸರಿನಲ್ಲಿ ರೈತರಿಗೆ ದೊಡ್ಡ ಮೊತ್ತದ ಸಹಾಯಧನ ಸಿಕ್ಕುತ್ತದೆ. ನಮ್ಮ ದೇಶದಲ್ಲಿ ಮಾತ್ರ ರೈತರಿಗೆ ಕಡಿಮೆ ದರದಲ್ಲಿ ಬೀಜ, ಗೊಬ್ಬರ, ನೀರಾವರಿ ಎಲ್ಲಾ ಕೊಡುತ್ತಿತ್ತು. ಆದರೆ ಈಗ ಮುಕ್ತ ಮಾರುಕಟ್ಟೆಯ ಯಜಮಾನರು ರೈತರಿಗೆ ಸಹಾಯಧನ ಕಡಿಮೆ ಮಾಡಿ. ಸರಕಾರಿ ನೌಕರಿಯಲ್ಲಿ ನೌಕರರನ್ನು ಕಡಿಮೆ ಮಾಡಿ, ಎನ್ನುತ್ತಾರೆ ಅವರು. ಮುಖ್ಯವಾಗಿ ಈ ಯಜಮಾನರಲ್ಲಿ ಅಮೆರಿಕ ಅಂದರೆ ಎಲ್ಲರಿಗೆ ದೊಡ್ಡಣ್ಣ ಇದ್ದಹಾಗೆ.

**೨ನೆಯವ :** ಆಹಾ, ಅಂದರೆ ನಮ್ಮ ರೈತರಿಗೆ ಸಹಾಯಧನ ಕೊಡಬಾರದು, ಅವರು ತರುವ ಸರಕುಗಳಿಗೆ ಸುಂಕ ಹೇರಬಾರದು. ಪೆಲಾನು ಅಂದ್ರೇ ಪೆಲಾನು.

**ಸೂತ್ರಧಾರ :** ಹೀಗಾಗಿ ನಮ್ಮಲ್ಲಿಯ ಜನ ಉದ್ಯೋಗ ಕಳಕೊಳ್ಳುತ್ತಾರೆ. ಹಿಂದೆ ಇಂಗ್ಲಿಷ್ ಕಂಪನಿಯು ನಮ್ಮಲ್ಲಿ ಅತ್ಯಂತ ನಯವಾಗಿ ನೇಯುವ ನಮ್ಮ ರೇಷ್ಮೆ ನೇಕಾರರ ಬೆರಳನ್ನೇ ಕತ್ತರಿಸಿದ್ದರಂತೆ. ಈಗ ಇವರು ಕೊರಳನ್ನೇ ಕತ್ತರಿಸುತ್ತಾರೆ.

**೩ನೆಯವ :** ಹೌದಲ್ಲ ! ಇದಾ ತಪ್ಪು ಏನೆಂದು ನಮಗೆ ತಿಳಿಯಿತು. ಆದರೆ ನಾವೇನ ಮಾಡಬಲ್ಲೆವು ?

**ಸೂತ್ರಧಾರ :** ಏನಿಲ್ಲವೆಂದರೂ ಅಸಹಕಾರವನ್ನಾದರೂ ಮಾಡಬಹುದು.

**೪ನೆಯವ :** ನಾವು ಸರಕಾರದೊಡನೆ ಸಹಕರಿಸುವುದಿಲ್ಲ. ಕಸಬರಿಗೆಯನ್ನು ಇಲ್ಲಿಯೇ ಒಗೆದು ಹೋಗುತ್ತೇವೆ.

**ಸೂತ್ರಧಾರ :** ಬೇಡ ಬೇಡ, ಕಸಬರಿಗೆ ಒಗೆಯಬೇಡಿ, ಗುಡಿಸಬೇಕು ನೀವು. ಏನನ್ನು? ಆದರೆ ನೆಲವನ್ನಲ್ಲ ಗುಡಿಸೋದು, ಸರಕಾರವನ್ನು. ಹಿಂದೆ ದೇಶದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸರಕಾರದ ಕೆಪ್ಪು ಕಿವಿಗೆ ನಮ್ಮ ವಿರೋಧದ ಕೂಗು ಕೇಳಿಸಬೇಕಾದರೆ ದೊಡ್ಡ ಸದ್ದು ಆಗಬೇಕೆಂದು ಸರಕಾರಿ ಭವನದಲ್ಲೇ ಬಾಂಬು ಸಿಡಿಸಿದರಂತೆ, ಭಗತ್‌ಸಿಂಗ್. ಈಗ ನಾವು ನಮ್ಮ ವಿರೋಧವು ಸರಕಾರದ ಕೆಪ್ಪು ಕಿವಿಗೆ ಕೇಳಿಸುವ ಹಾಗೆ ಧಿಕ್ಕಾರ ಕೂಗುವ ಕಸಬರಿಗೆ ಮೆರವಣಿಗೆ ಮಾಡುವ.

*(ಮೆರವಣಿಗೆ)*

**ಸೂತ್ರಧಾರ :** ಮುಕ್ತ ಮಾರುಕಟ್ಟೆ ನೀತಿಗೆ

**ಗುಂಪು :** ಧಿಕ್ಕಾರ !

**ಸೂತ್ರಧಾರ :** ವಿದೇಶಿ ಕಂಪನಿಗಳಿಗೆ

**ಗುಂಪು :** ಧಿಕ್ಕಾರ !

**ಸೂತ್ರಧಾರ :** ಮುಕ್ತ ಆಮದು ನೀತಿ ಅನುಸರಿಸುವ ಸರಕಾರಕ್ಕೆ

**ಗುಂಪು :** ಧಿಕ್ಕಾರ !

**ಸೂತ್ರಧಾರ :** ರೈತರನ್ನು ಕೊಲ್ಲುವ ಸರಕಾರಕ್ಕೆ

**ಗುಂಪು :** ಧಿಕ್ಕಾರ ! ಧಿಕ್ಕಾರ !! ಧಿಕ್ಕಾರ !!!

- ಮುಕ್ತಾಯ -

ಆರ್. ವಿ. ಭಂಡಾರಿ
ಕೆರೆಕೋಣ, ಅರೆ ಅಂಗಡಿ-೫೮೧ ೪೩೦, ಹೊನ್ನಾವರ ತಾಲ್ಲೂಕು. ಉತ್ತರ ಕನ್ನಡ ಜಿಲ್ಲೆ

# ಮಾನವರಲ್ಲಿ ಮೂಳೆ ಕಸಿ

ಅತಿಥಿಗಳು ಬಡಿಸಿದ ಊಟ ಮಾಡಿ ಹೊಗಳಿ ಬರುವುದು ಸಾಮಾನ್ಯ. ಊಟ ಮಾಡುವಾಗ ಇದು ಏನು ? ಇದು ಯಾಕೆ ಹೀಗೆ ? ಇದು ಹೆಚ್ಚಾಯಿತಲ್ಲವೆ ? ಹೀಗಾಗಬೇಕಿತ್ತು ? ಮುಂತಾದ ಪ್ರಶ್ನೆಗಳನ್ನು ಕೇಳಿದರೆ ಇವನದೇನಪ್ಪ ಕಿತಾಪತಿ, ಸುಮ್ಮನೆ ತಿಂದು ಹೋಗಬಾರದೆ ಎನ್ನಿಸುತ್ತದಲ್ಲವೆ ? ಆದರೆ, ಅತಿಥಿಗಳಿಗೆ ಕಿರಿಕಿರಿಯೆನಿಸಿದರೂ ಅದು ಒಮ್ಮೊಮ್ಮೆ ಅತ್ಯಂತ ಆಶ್ಚರ್ಯಕರ ಸಂಶೋಧನೆಗೆ ಹಾದಿ ತೆರೆಯುತ್ತದೆ. ೧೭೩೮ರಲ್ಲಿ ಲಂಡನ್ನಿನ 'ಗೈ' ಆಸ್ಪತ್ರೆಯ ತರುಣ ಶಸ್ತ್ರಜ್ಞ 'ಜಾನ್ ಬೆಲ್ಸಿಯರ್' ತನ್ನ ಗೆಳೆಯನ ಮನೆಗೆ ಊಟಕ್ಕೆ ಹೋಗಿದ್ದ. ಗೆಳೆಯ ಮುದ್ರಣಾಲಯದ ಮಾಲೀಕ. ಊಟ ಹಂದಿಯ ಮಾಂಸ. ಅದರೊಳಗಿನ ಮೂಳೆ ಅಲ್ಲಲ್ಲಿ ಕೆಂಪು ಕೆಂಪಾಗಿತ್ತು! ಆ ಕೆಂಪು ಯಾಕೆ ? ಬೆಲ್ಸಿಯರ್‌ನ ಪ್ರಶ್ನೆ. ಮುದ್ರಣ ಸಾಮಗ್ರಿಯ ಕಸ ಹಂದಿಯ ಆಹಾರದಲ್ಲಿ ಬೆರೆಸುತ್ತಿರುವುದರಿಂದ ಮೂಳೆಗಳು ಕೆಂಪು ವರ್ಣ ಪಡೆದಿವೆಯೆಂದು ತಿಳಿಯಿತು. ಬೆಲ್ಸಿಯರ್‌ನಿಗೆ ಕುತೂಹಲ; ಸರಿ. ಪ್ರಯೋಗ ಪ್ರಾರಂಭಿಸಿದ. ಅಂತಹದೇ ಆಹಾರವನ್ನು ತನ್ನ ಕೋಳಿಗಳಿಗೆ ತಿನ್ನಿಸಿದ. ಕೊಯ್ದು ಪರೀಕ್ಷಿಸಿದ. ಕೋಳಿಯ ಮೂಳೆಗಳು ಬಣ್ಣ ಪಡೆದಿದ್ದವು. ಅದನ್ನು ಆತ ಪ್ರಕಟಿಸಿದ.

*ವೈದ್ಯಕೀಯ ವಿಜ್ಞಾನದಲ್ಲಿ ಜರುಗುತ್ತಿರುವ ಸಂಶೋಧನೆಗಳು ಅನೇಕ ಕ್ರಾಂತಿಕಾರಿ ಕಲ್ಪನೆಗಳು, ನಿರೂಪಣೆಗಳು ಮತ್ತು ಆವಿಷ್ಕಾರಗಳು ಹೊಸ ಬಗೆಯ ಚಿಕಿತ್ಸೆಗಳಿಗೆ ಅನುವು ಮಾಡಿಕೊಟ್ಟಿವೆ. ಆದರಿಂದಾಗಿ ಎಷ್ಟೋ ರೋಗ ರುಜಿನಗಳನ್ನು ವೈದ್ಯರು ಆತ್ಮವಿಶ್ವಾಸದಿಂದ ಎದುರಿಸಲು, ಗುಣಪಡಿಸಲು ಸಾಧ್ಯವಾಗುವಂತಾಗಿದೆ. ನರಳುವ ರೋಗಿಗಳಿಗೆ ಹೊಸ ಜನ್ಮ ಪಡೆಯುವಂತಾಗಿದೆ. ಎಲುಬಿಗೆ ಸಂಬಂಧಪಟ್ಟ ಸಮಸ್ಯೆಗಳು, ಖಾಯಿಲೆಗಳ ಚಿಕಿತ್ಸೆ ಹಲವಾರು ಹೆಸರಾಂತ ವೈದ್ಯರ, ಸಂಶೋಧಕರ ಸತತ ಪ್ರಯತ್ನಗಳ ಹಿನ್ನೆಲೆಯನ್ನು ಪಡೆದಿದೆ. ಅಂತಹ ಪ್ರಯತ್ನಗಳ ಪರಿಚಯ ಇಲ್ಲಿದೆ.*



*ತೊಡೆಲುವಿನ ಮಧ್ಯ ಉದ್ಭವಿಸಿದ ಸಂದು ಕಸಿ ಎಲುವುಗಳನ್ನು ಜೋಡಿಸಿ ತುಂಬಿದ್ದು*

ವೈದ್ಯನಲ್ಲದ ಫ್ರಾನ್ಸಿನ ವಕೀಲನಾದ 'ಡುಹಾಮೆಲ್' ಬೆಲ್ಸಿಯರ್‌ನ ಲೇಖನದಿಂದ ಪ್ರಭಾವಿತನಾಗಿ ತಾನೂ ಪ್ರಯೋಗ ಪ್ರಾರಂಭಿಸಿದ. ಕೋಳಿಗೆ ಬಣ್ಣಯುಕ್ತ ಆಹಾರವನ್ನು ಆಗಾಗ ತಿನ್ನಿಸಿದ; ಕೊಯ್ದು ಪರೀಕ್ಷಿಸಿದ. ಬೆಳೆಯುವ ಮೂಳೆ ಬಣ್ಣ ಪಡೆಯುತ್ತದೆ, ಬೆಳೆದ ಮೂಳೆ ಬಣ್ಣ ಪಡೆಯುವುದಿಲ್ಲವೆನ್ನುವುದನ್ನು ಕಂಡುಹಿಡಿದ. ಬಣ್ಣದ ತಿಂಡಿ ತಿಂದಾಗ ಕೆಂಪು ಬಣ್ಣ, ಅದಿಲ್ಲದಾಗ ಸಹಜ ಬಣ್ಣ ಮೂಳೆಗಳಲ್ಲಿ ಮೂಡಿದ್ದು ಡುಹಾಮೆಲ್ ಗುರುತಿಸಿದ.

ಮೂಳೆ ಉದ್ದ ಬೆಳೆಯುತ್ತದೆ ಎನ್ನುವುದನ್ನು ಜಾನ್ ಹಂಟರ್ (೧೭೨೮-೧೭೯೩) ದೃಢೀಕರಿಸಿದ. ಮೂಳೆಯ ಒಂದು ತುದಿಯಲ್ಲಿ ಸ್ವಲ್ಪ ಅಂತರದೊಂದಿಗೆ ಎರಡು ಸೀಸದ ಗುಂಡುಗಳನ್ನಿರಿಸಿದ. ಮೂಳೆ ಬೆಳೆಯುವುದನ್ನು ಗಮನಿಸಿದ. ಸೀಸದ ಗುಂಡುಗಳ ಮಧ್ಯ ಯಾವ ವ್ಯತ್ಯಾಸವೂ ಕಾಣಲಿಲ್ಲ. ಆದರೆ ಗುಂಡುಗಳು ತುದಿಯಿಂದ ಅನತಿ ದೂರ ಸರಿದಿದ್ದವು. ಹೀಗೆ ಮೂಳೆಗಳು ತುದಿಯಲ್ಲಿ ಬೆಳೆಯುತ್ತವೆಯೆಂದು ಗೊತ್ತಾಯಿತು. ಜಾನ್‌ಹಂಟರ್‌ನ ಅನ್ವೇಷಣೆ ಇಷ್ಟಕ್ಕೇ ನಿಲ್ಲಲಿಲ್ಲ. ಮುರಿತಕ್ಕೆ ಒಳಗಾದ ಮೂಳೆ ತುಂಡು ಮೂಳೆಯಿಂದ ಬೇರ್ಪಟ್ಟರೂ ಬದುಕುತ್ತದೆ; ಮುರಿದ ಮೂಳೆಯ ತುಂಡಿಗೆ ಸ್ನಾಯು, ಕಂಡರ, ಊತಕ ಅಂಟಿಕೊಂಡಿರಲಿ ಅಥವಾ ಪೂರ್ತಿಯಾಗಿ ಅವುಗಳಿಂದ ವಂಚಿತಗೊಂಡಿರಲಿ, ಆದಾಗ್ಯೂ ಆ ತುಂಡು ಬದುಕಿ ಬೆಳೆಯುವ ಸಾಮರ್ಥ್ಯ ಹೊಂದಿರುತ್ತದೆಯೆಂದು ತೋರಿಸಿಕೊಟ್ಟ. ಮೂಳೆಗಳಿಗೆ ಮರು ಆಕೃತಿ ಪಡೆಯುವ ನೈಸರ್ಗಿಕ ಶಕ್ತಿಯಿರುವುದರಿಂದ ಅವುಗಳು ತಕ್ಕ ಆಕಾರ ಹೊಂದುತ್ತವೆ; ಮೂಳೆ ಕಣಗಳು ಸತತವಾಗಿ ಜನಿಸುತ್ತವೆ, ಬೆಳೆಯುತ್ತವೆ, ಸವೆಯುತ್ತವೆ ಮತ್ತು ಕರಗುತ್ತವೆಯೆಂದು ಸೂಕ್ಷ್ಮದರ್ಶಕವಿರದಿದ್ದ ಸಮಯದಲ್ಲೇ ತಿಳಿಸಿದ ಹಂಟರ್‌ನ ಹೇಳಿಕೆ ಇಂದಿಗೂ ಪ್ರಸ್ತುತ. ''ಮೂಳೆಯು ನಿರ್ಜೀವವಾಗಿ ಕಾಣುತ್ತದೆ. ನಿಜವಾಗಿಯೂ ಅದರಲ್ಲಿ ಜೀವವಿಲ್ಲವೆನಿಸುತ್ತದೆ. ಅದು ಕಲಾತ್ಮಕವಾಗಿ ರಚಿಸಿದ ಅಮೃತ ಶಿಲೆಯ ತುಂಡಿನಂತಿದ್ದು ಆಕಾರ ಕೊಡುವ ಸಾಧನವೆನಿಸುತ್ತದೆ. ಆದರೆ ಅದು ಸತತವಾಗಿ ಶರೀರದ ಅಗತ್ಯಕ್ಕೆ ತಕ್ಕಂತೆ ತನ್ನ ರೂಪ ಸರಿ ಹೊಂದಿಸಿಕೊಳ್ಳುತ್ತ ಸಜೀವವಾಗಿದೆ'' ಎನ್ನುವ ಆತನ ನುಡಿ ಎರಡೂವರೆ ನೂರು ವರ್ಷಗಳ ನಂತರವೂ ಅಕ್ಷರಶಃ ಸತ್ಯವಾಗಿದೆ.

ಮೂಳೆಯ ಹೊರಮೈಗೆ ತೆಳ್ಳನೆಯ ಪರೆ ಅಂಟಿಕೊಂಡಿರುತ್ತದೆ. ಅದಕ್ಕೆ ಎಲುಸುತ್ತರೆ ಯೆನ್ನುತ್ತಾರೆ. ಎಲುಸುತ್ತರೆಗೆ ಎಲುಜನಕ ಸಾಮರ್ಥ್ಯವಿದೆಯೆಂದು ೧೮೪೧ರಲ್ಲಿ 'ಜೇಮ್ಸ್ ಸೈಮ್ಸ್' ತಿಳಿಸಿದ. ಆತ ನಾಯಿಗಳ ಮುಂಗಾಲುಗಳ ಮೇಲೆ ಪ್ರಯೋಗ ಕೈಗೊಂಡ. ಒಂದು ಮುಂಗಾಲಿನೆಲುವಿನ ತುಣುಕನ್ನು ಎಲುಸುತ್ತರೆ ಸಹಿತ ಕೊಯ್ತೆಗೆದ; ಇನ್ನೊಂದು ಮುಂಗಾಲುವಿನ ತುಣುಕನ್ನು ಎಲುಸುತ್ತರೆ ಅಡಿಯಲ್ಲಿ ಅಂದರೆ ಸುತ್ತರೆ ಉಳಿಸಿ ಒಳಗಿನ ಎಲುವನ್ನು ಮಾತ್ರ ಕೊಯ್ತೆಗೆದ. ಎಲುಸುತ್ತರೆಯೊಂದಿಗೆ ತೆಗೆದಲ್ಲಿ ಎಲುವು ಬೆಳೆಯಲಿಲ್ಲ. ಅಲ್ಲಿ ಸಂದು ಉಳಿಯಿತು. ಆದರೆ ಸುತ್ತರೆ ಉಳಿಸಿ ಎಲುವು ಮಾತ್ರ ತೆಗೆದ ಭಾಗದಲ್ಲಿ ಹೊಸ ಎಲುವು ಬೆಳೆಯಿತು. ಎಲುಸುತ್ತರೆಗೆ ಎಲುವು ರಚಿಸುವ ಸಾಮರ್ಥ್ಯವಿದೆಯೆಂದು ತಿಳಿಯಿತು. ಪ್ಯಾರಿಸಿನ ಫ್ಲುರೆನ್ಸ್ ಹಾಗೂ ಲುಯಿಸ್ ಒಲಿಯರ್ ಅನೇಕ ಪ್ರಯೋಗಗಳನ್ನು ಕೈಗೊಂಡು ಎಲುಸುತ್ತರೆ ಎಲುವಿನ ತಾಯಿಯೆಂದು ಘೋಷಿಸಿದರು. ಆದರೆ ೧೮೬೮ರಲ್ಲಿ ಸೈಮ್ಸ್‌ರ ವಿದ್ಯಾರ್ಥಿ ಔನ್‌ಗುಡ್‌ಸರ್‌ನ ಪ್ರಯೋಗದ ಫಲಿತಾಂಶ ಭಿನ್ನವಾಗಿತ್ತು. ಎಲುಸುತ್ತರೆ ಕೀಳುವಾಗ ಅದರೊಂದಿಗೆ ಎಲುನನೆಕಣ (osteoblast) ಮತ್ತು ಎಲುಕಣ (ostocyte)ಗಳಿರುತ್ತವೆ. ಈ ಕಣಗಳಿಂದಾಗಿ ಎಲುವು ಬೆಳೆಯುತ್ತದೆಯೆಂದು ಗುಡಸರ್ ಸೂಕ್ಷ್ಮದರ್ಶಕದಡಿಯಲ್ಲಿ ಅಭ್ಯಸಿಸಿ ತಿಳಿಸಿದ.

ಮೂಳೆಯ ತುದಿಯ ಭಾಗದಲ್ಲಿ ಮೆಲ್ಲೆಲು (cartilage)ವಿನ ಒಂದು ತಟ್ಟೆ ಇರುತ್ತದೆ. ಅದಕ್ಕೆ ಬೆಳೆವ ತಟ್ಟೆ ಎನ್ನುತ್ತಾರೆ. ಮೂಳೆ ಉದ್ದ ಬೆಳೆಯುವುದು ಬೆಳೆವ ತಟ್ಟೆಯಿಂದ; ಅದರ ದಪ್ಪ ನಿಯಂತ್ರಣ ಎಲುಸುತ್ತರೆಯಿಂದ. ಮಾನವನಲ್ಲಿ ಮೂಳೆ ಬೆಳೆಯುವುದು ೨೦ ವರ್ಷ ವಯಸ್ಸಿನವರೆಗೆ, ಆನಂತರ ವ್ಯಕ್ತಿ ಎತ್ತರ ಬೆಳೆಯುವುದಿಲ್ಲ. ದಪ್ಪ ಗಾತ್ರ, ಧಡೂತಿ ದೇಹ, ಮಾಂಸ ಪಿಷ್ಟಗಳನ್ನವಲಂಬಿಸಿರುತ್ತದೆ. ಜೀವನ ಪರ್ಯಂತ ಮೂಳೆಗಳಲ್ಲಿ ಹೊಸ ಕಣಗಳ ಉತ್ಪತ್ತಿ, ಬೆಳವಣಿಗೆ ಬಲಹೀನತೆ ಮತ್ತು ನಿರ್ಜೀವಗೊಳ್ಳುವಿಕೆ ನಿರಂತರವಾಗಿ



*ಗಂತಿ ಕೊಯ್ತೆಗೆದು ಮುಂಗಾಲಿನ ಸೂಚಿಲುಕೆಲು (fibula) ವಿನ ಮೇಲ್ಭಾಗ ಕಸಿಯಾಗಿ ಬಳಸಿ ಜೋಡಿಸಿದೆ*

ನಡೆಯುತ್ತದೆ. ಹೀಗಾಗಿ ಮೂಳೆಯ ಕಸಿ ಯಶಸ್ವಿಯಾಗಿ ಕೈಗೊಳ್ಳಲು ಸಾಧ್ಯ.

ಕ್ರಿ. ಶ. ೧೮೮೦ರ ಸುಮಾರಿಗೆ ಗ್ಲಾಸ್ಗೋ ಪಟ್ಟಣದಲ್ಲಿ ಮಾಸಿವನ್‌ನೆಂಬ ಶಸ್ತ್ರಜ್ಞ ತನ್ನ ಮೂರು ವರ್ಷದ ರೋಗಿಯ ತೋಳಿನೆಲುವಿನ ಬಹುಭಾಗವನ್ನು ಕೊಯ್ತೆಗೆದ. ಎಲು ಮಜ್ಜೆ ಸೋಂಕಿನಿಂದಾಗಿ ಮಗುವಿನ ತೋಳಿನೆಲುವು ಕೀವು ತುಂಬಿ ಹಾಳಾಗಿತ್ತು; ಕೀವು ಸತತ ಸೋರುತ್ತ ಜೀವಕ್ಕಪಾಯವಾಗುವ ಸಂಭವವಿತ್ತು. ರೋಗಕ್ಕೆ ತುತ್ತಾದ ಆ ಎಲುವಿನ ಭಾಗ ಕೊಯ್ತೆಗೆಯದೆ ಅನ್ಯಮಾರ್ಗವಿರಲಿಲ್ಲ. ಶಸ್ತ್ರಕ್ರಿಯೆಯಾದ ಮೂರು ವರ್ಷಗಳ ನಂತರ ಮಗುವಿನ ತಂದೆ ತಾಯಿಗಳು ಮಗುವನ್ನು ಕರೆತಂದು ಅದರ ತೋಳನ್ನು ಕಡಿದು ತೆಗೆಯಬೇಕೆಂದು ದೀನರಾಗಿ ಬೇಡಿಕೊಂಡರು. ಆದರೆ ಮಾಸಿವನ್‌ರಿಗೆ ಮಗುವಿನ ತೋಳು ಕಡಿಯಲು ಮನಸ್ಸಾಗಲಿಲ್ಲ. ಅವರು ಬೇರೆ ಬೇರೆ ಸಂದರ್ಭಗಳಲ್ಲಿ ಶಸ್ತ್ರಕ್ರಿಯೆ ಮಾಡುವಾಗ ಮೂಳೆಗಳ ತುಂಡುಗಳನ್ನು ತೆಗೆದು ಶೇಖರಿಸಿಟ್ಟಿದ್ದರು. ಆರು ವಿವಿಧ ರೋಗಿಗಳಿಂದ ಪಡೆದ ಮೂಳೆಗಳ ತುಂಡುಗಳನ್ನು ಬಳಸಿ ಮಗುವಿನ ಉಳಿದ ತೋಳಿನೆಲುವಿನ ಮಧ್ಯ ಜೋಡಿಸಿದರು. ಫಲಿತಾಂಶ ಆಶ್ಚರ್ಯಕರ, ಅದ್ಭುತ ಹಾಗೂ ಆನಂದಮಯವಾಗಿತ್ತು. ಕಸಿ ಯಶಸ್ವಿಯಾಯಿತು. ತೋಳಿನೆಲುವಿನ ಮಧ್ಯದಲ್ಲಿ ಹೊಸ ಎಲುವು ರಚನೆಗೊಂಡಿತು. ಸುಮಾರು ಆರು ಅಂಗುಲ ಉದ್ದದ ಕಸಿ ಎಲುವು ಬದುಕಿ ತೋಳಿಗೆ ಆಕೃತಿ ಮತ್ತು ಸ್ಥಿರತೆ ನೀಡಿತು. ಇಪ್ಪತ್ತು ವರ್ಷಗಳ ನಂತರ ಆ ತರುಣನ ತೋಳೆಲುವು ಇನ್ನೊಂದು ತೋಳೆಲುವಿಗಿಂತ ಮೂರು ಅಂಗುಲ ಮಾತ್ರ ಚಿಕ್ಕದಾಗಿತ್ತು. ಆತ ಸ್ವತಃ ದುಡಿದು, ಸಂಪಾದಿಸಿ, ಸ್ವತಂತ್ರವಾಗಿ ಸುಖಕರ ಜೀವನ ಸಾಗಿಸಿದ. ಇದು ವಿಶ್ವದಲ್ಲಿ ಮೊಟ್ಟ ಮೊದಲನೆಯ ಯಶಸ್ವಿ ಮೂಳೆ ಕಸಿಯ ವರದಿ.

ಶರೀರದೊಳಗಿನ ಮೂಳೆಯ ಒಂದು ಭಾಗ ಯಾವುದೇ ಕಾರಣದಿಂದಾಗಿ ನ್ಯೂನತೆಗೊಂಡಾಗ ಅದನ್ನು ಸರಿಪಡಿಸಲು ಅನ್ಯ ಮೂಳೆ ಬಳಸುವುದಕ್ಕೆ ಮೂಳೆ ಕಸಿ ಎನ್ನುತ್ತಾರೆ. ಕಸಿಗಾಗಿ ಮೂಳೆ ಬೇಕು. ಅದನ್ನು ಎಲ್ಲಿಂದ ಪಡೆಯಬೇಕು ? ಮನುಷ್ಯರ ಮೂಳೆ ಬಳಸಬಹುದೋ, ಪ್ರಾಣಿಗಳ ಮೂಳೆ ಪಡೆಯಬಹುದೋ ಇಲ್ಲ ತನ್ನ ಅಂಗದೊಳಗಿನ ಮೂಳೆಯನ್ನೇ ಉಪಯೋಗಿಸಬೇಕೋ ? ತನ್ನ ಮೂಳೆಯನ್ನು ಕಸಿಗಾಗಿ ಬಳಸುವುದಕ್ಕೆ 'ಸ್ವಕಸಿ' ಎನ್ನುತ್ತಾರೆ. ಒಂದೇ ಹೋಲಿಕೆಯ ವರ್ಣದಂಡದ ಅವಳಿಯಿಂದ ಪಡೆಯುವುದಕ್ಕೆ 'ಅವಳಿ ಕಸಿ' ಎನ್ನುತ್ತಾರೆ. ಅನ್ಯಮಾನವರಿಂದ ಪಡೆದುದಕ್ಕೆ 'ಸಜಾತಿ ಕಸಿ' ಮತ್ತು ಪ್ರಾಣಿಗಳಿಂದ ಮೂಳೆ ಪಡೆದರೆ 'ವಿಜಾತಿ ಕಸಿ' ಎನ್ನುತ್ತಾರೆ. 'ಸಜಾತಿ' ಮತ್ತು 'ವಿಜಾತಿ ಕಸಿ'ಯಿಂದ ಒಗ್ಗದಿಕೆ (Allergy) ಮತ್ತು ಮರೆವಣೆ ಪ್ರತಿಕ್ರಿಯೆ (immune reaction) ಉಂಟಾಗುವ ಸಾಧ್ಯತೆಗಳಿರುತ್ತವೆ. ಇಂತಹ ಪ್ರತಿಕೂಲ ಪ್ರತಿಕ್ರಿಯೆ 'ಸ್ವಕಸಿ'ಯಲ್ಲಿ ಕಾಣಸುವುದಿಲ್ಲ.

**ಡಾ|| [illegible]**

ಕಸಿಗಾಗಿ ಬಳಸಿದ ಎಲುವು ಬದುಕಿ ಉಳಿಯುತ್ತದೆಯೇ ಇಲ್ಲವೇ ಅದನ್ನು ಆಧಾರವಾಗಿಟ್ಟುಕೊಂಡು ಹೊಸ ಎಲುವು ರಚನೆಗೊಳ್ಳುತ್ತದೆಯೇ ಎನ್ನುವ ಜಿಜ್ಞಾಸೆ ವಿಜ್ಞಾನಿಗಳಿಗೆ ಬಹುಕಾಲ ಬಾಧಿಸಿದ ಸಮಸ್ಯೆ. ಕಸಿ ಎಲುವನ್ನು ಆಧಾರವಾಗಿಸಿಕೊಂಡು ಅಲ್ಲಿ ಎಲುನನೆ ಕಣಗಳು ನುಸುಳಿ ಬೆಳೆದು, ಬೆಳೆದಂತೆ ಕಸಿ ಎಲುವನ್ನು ಕರಗಿಸಿ ಸರಿಸಿ ಹೊಸ ಎಲುವು ಉದ್ಭವಿಸುತ್ತದೆಯೆಂದು ಈಗೀಗ ನಿರ್ವಿವಾದವಾಗಿ ಒಪ್ಪಿಕೊಳ್ಳಲಾಗಿದೆ. ಎಲುಕಸಿಯಿಂದ ಎಲುಬೆಳೆಯಲು ಚೋದನೆ ಸಿಗುತ್ತದೆ ಎನ್ನುವಲ್ಲಿ ಅನುಮಾನ ಇಲ್ಲ.

ಮೂಳೆಯಲ್ಲಿ ಎರಡು ಭಾಗ. ಒಂದು ಗಟ್ಟಿಯಾದ ಹೊದಿಕೆಯಾಗಿರುವ ಹೊರಗಿನ 'ರಗಟೆಲು'ವು; ಇನ್ನೊಂದು ಹಿಂಜಿದ ಅರಳೆಯಂತಿರುವ, ಒತ್ತಿದರೆ ಕುಸಿಯುವ ಒಳಭಾಗದ ಹಂದರೆಲುವು. ಹಾಗಾದರೆ ಕಸಿಗಾಗಿ ಯಾವ ತರಹದ ಎಲುವು ಬಳಸಬೇಕು ? ಸ್ಥಿರತೆಯ ಉದ್ದೇಶಕ್ಕಾಗಿ ಕಸಿ ಮಾಡುವಾಗ ರಗಟೆಲುವನ್ನು; ಎಲುವು ಬೆಳೆಯಲು ಉತ್ತೇಜನ ಬೇಕಾದಾಗ ಹಂದರೆಲುವನ್ನು ಅಲ್ಲದೆ ಬಹಳಷ್ಟು ಸಮಯ ಎರಡೂ ತರಹದ ಎಲುವನ್ನು ಕಸಿಗಾಗಿ ಬಳಸುತ್ತಾರೆ.




ಒಮ್ಮೆ ಶಸ್ತ್ರಜ್ಞರೊಬ್ಬರು ಮೂಳೆ ಕಸಿ ಮಾಡುತ್ತಿರುವಾಗ ಕೈತಪ್ಪಿ ಕಸಿ ಎಲುವು ಕೆಳಗೆ ಬಿತ್ತು. ಕೆಳಗೆ ಬಿದ್ದುದನ್ನು ಹಾಗೆಯೇ ಎತ್ತಿ ಬಳಸುವ ಧೈರ್ಯವಾಗಲಿಲ್ಲ. ಹಾಗೆಯೇ ಬಳಸಿದರೆ ಸೋಂಕು ತಗಲುವ ಸಾಧ್ಯತೆಗಳಿರುತ್ತವೆ. ಕೀವು ಉಂಟಾದರೆ ಶಸ್ತ್ರಕ್ರಿಯೆ ಮಾಡಿದ್ದು ವ್ಯರ್ಥವಾಗುತ್ತದೆ. ಅನಿವಾರ್ಯವಾಗಿ ಕೆಳಗೆ ಬಿದ್ದ ಕಸಿ ಎಲುವನ್ನು ನೀರಿನಲ್ಲಿ ಕುದಿಸಿ ಬಳಸಿದರು. ಕಸಿ ಬದುಕಿ ಉಳಿಯಿತು. ಅಲ್ಲಿ ಹೊಸ ಎಲುವು ಬೆಳೆಯಿತು. ಕತಕತ ಕುದಿಯುವ ನೀರಿನಲ್ಲಿ ರೋಗಾಣುಗಳು ಸಾಯುತ್ತವೆ ಅದರೊಂದಿಗೆ ಜೀವಂತವಿರುವ ಎಲುಕಣಗಳೂ ಸಾಯುತ್ತವೆ. ನಿರ್ಜೀವಗೊಂಡ ಕಸಿ ಎಲುವು ಬಳಸಿದರೂ ಅದು ಯಶಸ್ವಿಯಾಗಿ ಹೊಸ ಎಲುವು ರಚಿಸಿದ್ದು ಕಂಡು ಮೂಳೆ ಶೇಖರಿಸಿಟ್ಟು ತದನಂತರದಲ್ಲಿ ಅದನ್ನು ಬಳಸಬಹುದೆಂಬ ದಾರಿ ಕಾಣಿಸಿತು. ೧೯೩೪- ೧೯೩೭ರಲ್ಲಿ ಒರೆಲ್ ಶವಗಳಿಂದ ಮೂಳೆ ಪಡೆಯಲು ಪ್ರಾರಂಭಿಸಿದ. ಆತನ ಉದ್ದೇಶ ಕಸಿಗಾಗಿ ಎಲುವು ಪಡೆಯುವುದಾಗಿತ್ತು. ಆದರೆ ಇನ್‌ಕ್ಲಾಸ್ ೧೯೪೨ರಲ್ಲಿ ಮಂಡಿಸಿದ ವಿಚಾರವೇ ಬೇರೆ. ಯಾವುದೋ ಶಸ್ತ್ರಕ್ರಿಯೆ ಮಾಡುವಾಗ ಮೂಳೆ ಕೊಯ್ತೆಗೆಯಬೇಕಾಗಬಹುದು. ಆಗ ಕೊಯ್ತೆಗೆದ ಮೂಳೆಗಳನ್ನು ಬಳಸದೆ ಬಿಸಾಡುತ್ತಾರೆ. ಅವುಗಳನ್ನು ಕಸಿಗಾಗಿ ಬಳಸಬಹುದು. ಅದು ಸಜಾತಿ ಕಸಿಯಾಗುತ್ತದೆ. ಒಗ್ಗದಿಕೆ ಮತ್ತು ಮರುವಣೆ ಪ್ರತಿಕ್ರಿಯೆ ಉಂಟಾಗದಂತೆ ಎಲುವುಗಳನ್ನು ಸಂಸ್ಕರಿಸಿ ಕೆಡದಂತೆ ಸೂಕ್ತವಾಗಿ ಶೇಖರಿಸಿಡಬಹುದು. ಕ್ರಮೇಣ, ಎಲುವುಗಳೊಳಗಿನ ಸಸಾರ (protein) ಇಲ್ಲದಂತೆ ಮಾಡಿ, ವಿಕಿರಣಕ್ಕೆ ಅಳವಡಿಸಿ, ರೋಗಾಣುರಹಿತ ಸ್ಥಿತಿಗೆ ತಂದು ಶೀತ ವಾತಾವರಣದಲ್ಲಿ ಶೇಖರಿಸಿಡುವ ಪದ್ಧತಿ ಪ್ರಾರಂಭವಾಯಿತು. ಹೀಗೆ 'ಮೂಳೆನಿಧಿ' ಕಲ್ಪನೆ ಸಾಕಾರಗೊಂಡಿತು. ಸ್ವಕಸಿಯ ಎಲುವನ್ನು ರಿಂಗರದ್ರವದೊಳಗೆ ಅಥವಾ ಸಿಟ್ರೇಟ್ ಬೆರೆತ ರಕ್ತದಲ್ಲಿಟ್ಟು ಕೆಲವೇ ಗಂಟೆಗಳೊಳಗೆ ಬಳಸುತ್ತಾರೆ. ನಂಜುರಹಿತ ಶೀಶೆಗಳಲ್ಲಿ ಶೀತದಲ್ಲಿ ಅಥವಾ ಆಳ ಶೀತದಲ್ಲಿ ಶೇಖರಿಸಿದ ಕಸಿ ಎಲುವನ್ನು ಸುಮಾರು ಸಮಯದ ನಂತರ ಬಳಸಬಹುದು. ಕಡಿಮೆ ಶೀತದೊಳಗೆ ರಕ್ಷಿಸಿದ ಕಸಿ ಎಲುವನ್ನು ಮೂರು ವಾರಗಳವರೆಗೆ ಭಯವಿಲ್ಲದೆ ಬಳಸಬಹುದು. ಆಳ ಶೀತ (–೨೫° ಸೆ.)ದಲ್ಲಿ ಶೇಖರಿಸಿದ ಎಲುವನ್ನು ಅನಿರ್ದಿಷ್ಟ ಸಮಯದ ನಂತರವೂ ಯಶಸ್ವಿಯಾಗಿ ಬಳಸಬಹುದು. ಮೂಳೆನಿಧಿಯಿಂದಾಗಿ ವಿವಿಧ ಆಕಾರದ, ವಿವಿಧ ಗಾತ್ರದ ಕಸಿ ಎಲುವು ಸಿಗುವಂತಾಗಿದೆ. ಸ್ವಕಸಿಯಲ್ಲಿ ವ್ಯಕ್ತಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಎಲುವು ಪಡೆಯುವುದು ಸಾಧ್ಯವಾಗುವುದಿಲ್ಲ. ಕೆಲವೊಮ್ಮೆ [illegible]

ನೀಡುವ ಸಾಧ್ಯತೆಯಿದೆ. 'ವಿಜಾತಿ ಕಸಿ'ಯು ಹೆಚ್ಚಾಗಿ ನಿರಾಕರಣೆಗೊಳ್ಳುವುದರಿಂದ ಅದರ ಬಳಕೆ ಬಹಳ ಅಪರೂಪ. ಮೂಳೆನಿಧಿಯಿಂದ ಪಡೆಯುವ ಕಸಿ ಎಲುವಿಗಿಂತ ರೋಗಿಯ ಆರೋಗ್ಯಕರ ಎಲುವನ್ನು ಬಳಸುವ 'ಸ್ವಕಸಿ'ಯ ಫಲಿತಾಂಶ ಉತ್ಕೃಷ್ಟ. 'ಮೂಳೆನಿಧಿ' ರಕ್ತನಿಧಿ, ನೇತ್ರನಿಧಿಗಳಂತೆ ಎಲ್ಲ ಕಡೆಗಳಲ್ಲಿ ಲಭ್ಯವಿಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಮೂಳೆ ಶಸ್ತ್ರಚಿಕಿತ್ಸೆ ಯಾವಾಗಲೂ ಹೆಚ್ಚಿನ ಪ್ರಮಾಣದಲ್ಲಿ ನಡೆಯುವ ಕೇಂದ್ರಗಳಲ್ಲಿ ಮಾತ್ರ ಕಾರ್ಯ ನಿರ್ವಹಿಸುತ್ತಿವೆ. ಭಾರತದಲ್ಲಿ ಮುಂಬೈ, ಕೋಲಕತ್ತಾ ಮತ್ತು ಚೆನ್ನೈಗಳಲ್ಲಿ ಮೂಳೆನಿಧಿಗಳಿವೆ.

ಸಜಾತಿ ಕಸಿಯಲ್ಲಿ ಕಸಿಯೊಂದಿಗೆ ರಕ್ತನಾಳವನ್ನುಳಿಸಿಕೊಂಡು ಬಳಸಿದರೆ ಅದು ಇನ್ನೂ ಉತ್ತಮ. ಕಸಿ ಎಲುವು ಬದುಕುಳಿಯುವುದು ಖಾತ್ರಿ. ಕೆಲವೊಮ್ಮೆ ಕಸಿ ಎಲುವನ್ನು ಅದರ ಸ್ನಾಯುಸಹಿತ ಪಡೆದು ಬಳಸುತ್ತಾರೆ. ಇದು ಬಹಳ ಅತ್ಯುತ್ತಮವಾದ ಕಸಿ. ಆದರೆ ಎಲ್ಲ ಪ್ರಸಂಗಗಳಲ್ಲಿ ಇಂತಹ ಕಸಿ ಬೇಕಾಗುವುದಿಲ್ಲ.

ಮೂಳೆ ಕಸಿ ಯಾಕೆ ಬೇಕಾಗುತ್ತದೆ ? ಅದರಿಂದ ಏನು ಪ್ರಯೋಜನ ? ಎನ್ನುವ ಪ್ರಶ್ನೆ ಸಹಜ. ಕಸಿ ಮಾಡುವ ಸಂದರ್ಭಗಳನ್ನು ಹೀಗೆ ವಿವರಿಸಬಹುದು. ೧) ಮೂಳೆಯಲ್ಲಿ ಗಂತಿ ಬೆಳೆದಾಗ ಆ ಭಾಗವನ್ನು ಕೊಯ್ತೆಗೆಯ ಬೇಕಾಗುತ್ತದೆ. ಆಗ ಅಲ್ಲಿ ಸಂದು ಉಂಟಾಗುತ್ತದೆ. ಈ ಸಂದು ತುಂಬದಿದ್ದರೆ ಅಂಗಭಾಗ ಕುಸಿಯುತ್ತದೆ; ಯಾವ ಕೆಲಸಕ್ಕೂ ಬರುವುದಿಲ್ಲ; ಆಕಾರವೂ ಕೆಡುತ್ತದೆ. ಆ ಅಂಗಭಾಗ ಕಡಿಯುವ ಸಂದರ್ಭ ಒದಗಬಹುದು. ಇದನ್ನು ತಪ್ಪಿಸಲು ರೋಗಗ್ರಸ್ತ ಎಲುವಿನ ಭಾಗವನ್ನು ಕೊಯ್ತೆಗೆದು ಅಲ್ಲಿ ಕಸಿ ಎಲುವನ್ನು ಜೋಡಿಸಿದರೆ ನ್ಯೂನತೆ ತುಂಬಿಕೊಳ್ಳುತ್ತದೆ. ಭಾಗದ ಆಕೃತಿ ಉಳಿಯುತ್ತದೆ; ಕೆಲಸ



*ಮುಂಗೈಯ ಹೆಬ್ಬೆರಳಿನ ಭಾಗದ ಅರೆಲು (Radias) ಎನ ಕೆಳತುದಿಯಲ್ಲಿ ಗಂತಿ*

ಮೊದಲಿನಂತೆ ನಿರ್ವಹಿಸಲು ಸಾಧ್ಯವಾಗುತ್ತದೆ. ೨) ಅಪಘಾತದಲ್ಲಿ ಮೂಳೆ ಮುರಿದು ಗಾಯವಾಗಿ ಮೂಳೆಯ ಒಂದು ಭಾಗ ಇಲ್ಲವಾದಾಗ ಅದನ್ನು ಕಸಿ ಎಲುವಿನಿಂದ ತುಂಬಬಹುದು. ೩) ಮೂಳೆಯಲ್ಲಿ ಸೀಮಿತವಾಗಿ ಬೆಳೆವ ಗಡ್ಡೆಗಳಿದ್ದರೆ, ಕೋಶಗಳು ಬೆಳೆದರೆ ಅವುಗಳನ್ನು ಶಸ್ತ್ರಕ್ರಿಯೆಯಿಂದ ಕೆದರಿ ಕೆದರಿ ರೋಗಕಾರಕ ಭಾಗವನ್ನು ಸ್ವಚ್ಛಗೊಳಿಸಿ, ಪೊಳ್ಳನ್ನು ಕಸಿ ಎಲುವಿನ ಚೂರುಗಳಿಂದ ತುಂಬುತ್ತಾರೆ. ೪) ಕೀಲು, ರೋಗಕ್ಕೆ ತುತ್ತಾಗಿ ಗಟ್ಟಿಗೊಂಡು ನೋವಿನ ಕೇಂದ್ರವಾಗಿ ಹಿಂಸೆ ನೀಡಬಹುದು. ಕೀಲಿನ ಚಲನೆ ಉಳಿಸಿಕೊಳ್ಳುವುದು ತೊಂದರೆ ಉಳಿಸಿಕೊಂಡಂತಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಕೀಲಿನೆಲುವುಗಳ ತುದಿ ಕೊಯ್ತೆಗೆದು ಒಂದಕ್ಕೊಂದು ಜೋಡಿಸಿ ಮಧ್ಯದಲ್ಲಿ ಕಸಿ ಎಲುವನ್ನಿರಿಸಿ ಕೀಲನ್ನು ಗಟ್ಟಿಗೊಳಿಸುತ್ತಾರೆ. ಆಗ ಚಲನೆ ರಹಿತತೆಯಿಂದ ನೋವು ಇಲ್ಲವಾಗುತ್ತದೆ. ೫) ಚಿಕಿತ್ಸೆಯಿಂದ ವಂಚನೆಗೊಂಡ ಮೂಳೆ ಮುರಿತ, ನಿರ್ಲಕ್ಷ್ಯಕ್ಕೆ ಒಳಗಾದ ಮುರಿತ, ಚಿಕಿತ್ಸೆಗೆ ಮಣಿಯದ ಮುರಿತ, ಕೆಡುಕೂಡಿದ ಮುರಿತ ಹಾಗೂ ಕೂಡಿಕೊಳ್ಳದ ಮುರಿತಗಳನ್ನು ಉಪಚರಿಸಲು ಶಸ್ತ್ರಕ್ರಿಯೆ ಮಾಡಿ ಮುರಿತದ ಮಧ್ಯದಲ್ಲಿ ಹಂದರೆಲುವಿನ ಕಸಿ ಬಳಸಿದರೆ ಮುರಿತ ಶೀಘ್ರವೇ ಕೂಡಿಕೊಳ್ಳಲು ನೆರವಾಗುತ್ತದೆ.

ಹೃದಯದ ಕಸಿ, ಮೂತ್ರಪಿಂಡದ ಕಸಿ, ಚರ್ಮದ ಕಸಿ, ನೇತ್ರದ ಕಸಿಗಳಂತೆ ಮೂಳೆಯ ಕಸಿ ಇಂದಿನ ವೈಜ್ಞಾನಿಕ ಯುಗದಲ್ಲಿ ಸಾಕಷ್ಟು ಬೆಳವಣಿಗೆಯನ್ನು ಕಂಡಿದೆ. ಕೃತಕ ಮೂಳೆಯನ್ನು ಕಸಿಯಾಗಿ ಬಳಸುವತ್ತ ಶೋಧ ನಡೆದಿದೆ. ಅದು ಯಶಸ್ವಿಯಾದರೆ ಮೂಳೆ ನಿಧಿಯ ಮತ್ತು ಕಸಿಯ ಶೇಖರಣೆಯ ಅನೇಕ ಜಟಿಲ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ.


**ಡಾ|| ಎಸ್. ಎಸ್. ಪಾಟೀಲ**
ಸಿದ್ಧರತ್ನ, ಧನ್ವಂತರಿ ಬಡಾವಣೆ
ಗುಲಬರ್ಗಾ-೫೮೫ ೧೦೫


## ಕೂಸು ಕೇಳುತಿದೆ ?

ಅವಶೇಷಗಳ ನಡುವಿನಿಂದೆದ್ದು ಬಂದ
ಕೂಸು
ಕೇಳುತಿದೆ ನನ್ನ
ಏನು ಹೇಳಲಿ ಅದಕೆ
ಹೇಳಿ ನನ್ನವರೇsss
ನನ್ನವರೇ ಹೇಳಿsss

ಉಟ್ಟ ಹಸಿರ ಬಟ್ಟೆ ಸುಟ್ಟಿದೆ
ಹೊತ್ತ ಹಸಿದ ಹೊಟ್ಟೆ ಉರಿದಿದೆ
ಉರಿಯ ಒಳಗೆ ಲಾಲಸೆ ಕುಣಿದಿದೆ
ಕಾಲಡಿಗೆ ಸಿಕ್ಕಿ ಎಲ್ಲಾ ಧ್ವಂಸವಾಗಿದೆ.

ಅದರ ಅವಶೇಷಗಳ ನಡುವಿನಿಂದೆದ್ದು ಬಂದ
ಕೂಸು
ಕೇಳುತಿದೆ ನನ್ನ

ಕರಕಲಾದ ಮೈಗೆ ಹಚ್ಚಮ್ಮ ಮುಲಾಮು
ಮುರುಟಿದ ಮನಕ್ಕೆ ಕೊಡಮ್ಮ ಜೀವಸೆಲೆ
ಛಿದ್ರ ಬದುಕಿಗೆ ಹಾಕಮ್ಮ ಹೊಲಿಗೆ
ಚದುರಿದ ಚಿತ್ರಗಳ ಮಾಡಮ್ಮ ಒಟ್ಟಿಗೆ



ಕೂಸು
ಕೇಳುತಿದೆ ನನ್ನ
ಏನು ಹೇಳಲಿ ಅದಕೆ
ಕೆಂಪಿನಲ್ಲಿ ಹೂತು ಹೋದ ತಂಪಾ – ಎಲ್ಲಿ ಹುಡುಕಲಿ
ಬಿರುಕು ಬಿಟ್ಟ ತಳದಲ್ಲಿ ನೀರಾ – ಎಲ್ಲಿ ತುಂಬಲಿ
ಚಿಂದಿಯಾದ ಬದುಕಿಗೆ ತೇಪೆ – ಎಲ್ಲಿ ಹಾಕಲಿ
ಹೊತ್ತಿ ಬೂದಿಯಾದ ಚಿತ್ರಕ್ಕೆ ಬಣ್ಣ – ಎಲ್ಲಿ ಹಚ್ಚಲಿ

ನರಳಾಟದ ಕೂಗು ಕೇಳುತ್ತಿದೆ
ಹೊಕ್ಕಳೊಳಗೆ ಸಂಕಟ ಸುತ್ತಿಕೊಳ್ಳುತ್ತಿದೆ.
ಬಿಡುಗಣ್ಣಾಗಿ ನಿಂತಿದ್ದೇನೆ
ಬದುಕಿಯೂ ಶವವಾಗಿದ್ದೇನೆ

ಕೊಡುತ್ತಿರಾ ನನ್ನ ಕೂಸಿಗೆ ಹಸಿರ ಬಟ್ಟೆ ?
ಕೊಡುತ್ತಿರಾ ನನ್ನ ಕೂಸಿಗೆ ಜೀವರಸ ?
ಕೊಡುತ್ತಿರಾ ನನ್ನ ಕೂಸಿಗೆ
ಇರಲೊಂದು ನೆಲೆ!?


ನಂದಾ ಕುಮಾರಸ್ವಾಮಿ
'ನೇಪಥ್ಯ', III ೨೪೮, ಸರ್ಕಾರಿ ಪದವಿ ಪೂರ್ವ ಕಾಲೇಜು ಬಳಿ
ಸುಳ್ಯ, ದಕ್ಷಿಣ ಕನ್ನಡ ಜಿಲ್ಲೆ

# ಭಾರತ – ಜರ್ಮನಿ
## ಹವಾಮಾನ ವೈಪರೀತ್ಯದ ವಿರುದ್ಧ ಪ್ರತಿಕ್ರಿಯೆ

೨೦೦೭ನೇ ವರ್ಷದಲ್ಲಿ ಭಾರತದ ಅನೇಕ ರಾಜ್ಯಗಳು ಬರ ಎದುರಿಸುತ್ತಿವೆ. ಅವುಗಳಲ್ಲಿ ಕರ್ನಾಟಕವೂ ಒಂದು. ಕರ್ನಾಟಕ ಸರ್ಕಾರ ಮಳೆಗಾಗಿ ಕೈಗೊಂಡ ಕ್ರಮಗಳಲ್ಲಿ ಮುಜರಾಯಿ ಇಲಾಖೆ ಹೊರಡಿಸಿರುವ ಆದೇಶವೂ ಒಂದು. ಅದರ ಪ್ರಕಾರ ಎಲ್ಲ ಗುಡಿ, ಚರ್ಚು, ಮಸೀದಿ, ಮಂದಿರಗಳಲ್ಲಿ ವಿಶೇಷ ಪೂಜೆ ಮಾಡಿ ವರುಣನಿಗೆ ಪ್ರಾರ್ಥನೆ ಸಲ್ಲಿಸುವುದಾಗಿದೆ. ಅದಕ್ಕಾಗಿ ಪ್ರತಿಯೊಂದು ಪೂಜೆಗೂ ಕನಿಷ್ಠ ರೂ. ೨.೦೦೦/- ಹಾಗೂ ಗರಿಷ್ಠ ರೂ. ೫,೦೦೦/-ಗಳನ್ನು ಬಿಡುಗಡೆ ಮಾಡಿದೆ ಎಂದು ಪತ್ರಿಕೆಗಳು ವರದಿ ಮಾಡಿವೆ.

ಪ್ರಾಕೃತಿಕ ವೈಪರೀತ್ಯಗಳನ್ನು ಕುರಿತು ಭಾರತದಂತಹ ಒಂದು ವಿಕಾಸಶೀಲ ರಾಷ್ಟ್ರ ಚಿಂತಿಸುವುದಕ್ಕೂ ಹಾಗೂ ಮುಂದುವರಿದ ರಾಷ್ಟ್ರ ಜರ್ಮನಿ ಚಿಂತಿಸುವುದಕ್ಕೂ ಭೂಮಿ ಆಕಾಶಗಳ ಅಂತರವಿದೆ. ಹವಾಮಾನ ವೈಪರೀತ್ಯದಿಂದ ಉಂಟಾಗುವ ಪರಿಣಾಮಗಳು ಅವುಗಳಿಗೆ ಪರ್ಯಾಯವಾಗಿ ಕೈಗೊಳ್ಳಬಹುದಾದ ಕಾರ್ಯಸೂಚಿಗಳನ್ನು ಕುರಿತು ಜರ್ಮನಿ ಅನೇಕ ಯೋಜನೆಗಳನ್ನು ೨೦೦೭ನೇ ವರ್ಷದಲ್ಲಿ ಹಮ್ಮಿಕೊಂಡಿದೆ.

ಕರ್ನಾಟಕವೂ ಸೇರಿದಂತೆ ಭಾರತದ ಅನೇಕ ರಾಜ್ಯಗಳಲ್ಲಿ ಮಳೆಗಾಗಿ ಬಲಿ ಕೊಡುವುದು, ಕಪ್ಪೆಗಳ, ಕತ್ತೆಗಳ ಮೆರವಣಿಗೆ ಮಾಡುವುದು, ಹರಕೆ ಹೊರುವುದು, ಹೂತ ಹೆಣಗಳನ್ನು ಹೊರ ತೆಗೆದು ಸುಡುವುದು, ಶಾಂತಿ, ಹೋಮ, ಪರ್ಜನ್ಯ ಜಪ ಮಾಡುವುದು, ಹಾಲು, ಮೊಸರು, ಬೆಣ್ಣೆ, ತುಪ್ಪ ಮುಂತಾದವುಗಳನ್ನು ನದಿಗೆ ಸುರಿಯುವುದು, ಬೆಂಕಿಗೆ ಹಾಕುವುದು ಮುಂತಾದ ಕ್ರಿಯೆಗಳು ಪ್ರಾಧಾನ್ಯತೆ ಪಡೆಯುತ್ತವೆ. ಆದರೆ ಭೂಸವೆತ, ಭೂಕುಸಿತಕ್ಕೆ ಕಾರಣವೇನು ? ಪ್ರಪಂಚದ ಭೂಸವೆತ, ಕುಸಿತದಲ್ಲಿ ಭಾರತದ ಪಾಲು ೨೫%. ಏನಿದು ? ಹವಾಮಾನ ವೈಪರೀತ್ಯ ಏಕೆ ಉಂಟಾಗುತ್ತದೆ. ಇವುಗಳನ್ನು ಕುರಿತು ವೈಜ್ಞಾನಿಕವಾಗಿ ವಿಶ್ಲೇಷಿಸುವ ಗೋಜಿಗೇ ಹೋಗುವುದಿಲ್ಲ. ಜ್ಯೋತಿಷ್ಯದ ಮೊರೆ ಹೋಗುವುದು ಜಾಸ್ತಿ. ಕೇಂದ್ರ ಸರ್ಕಾರ ಜ್ಯೋತಿಷ್ಯವೂ ವಿಜ್ಞಾನ ಎಂದು ವಿಶ್ವವಿದ್ಯಾಲಯಗಳಲ್ಲಿ ವಿಷಯವಾಗಿ ಜಾರಿಗೆ ತರುತ್ತಿದೆ. ಡಾ॥ ರಾಮಮನೋಹರ ಲೋಹಿಯಾ ಅವರು, ''ಇಡೀ ವಿಶ್ವ ಅದರಲ್ಲೂ ಯೂರೋಪಿನ ರಾಷ್ಟ್ರಗಳು ಖಗೋಳ ಶಾಸ್ತ್ರವನ್ನು ಬೆನ್ನಟ್ಟಿ ಹೋಗುತ್ತಿದ್ದರೆ ಭಾರತ ಜ್ಯೋತಿಷ್ಯದ ಕೊಳಕಿನಲ್ಲಿ ಕೊಳೆಯುತ್ತಿದೆ. ರಷ್ಯಾ ಮತ್ತು ಅಮೆರಿಕಾದವರು ರಾಕೆಟ್ ಕಳುಹಿಸಲು ನಕ್ಷತ್ರಗಳ ಸ್ಥಾನಗಳನ್ನು ಗುಣಿಸುತ್ತಿದ್ದರೆ, ಭಾರತದವರು ಹುಟ್ಟುವ ಮಗು ಗಂಡೋ ಅಥವಾ ಹೆಣ್ಣೋ, ಕಂಕಣ ಬಲ ಕೂಡುವುದೋ ಇಲ್ಲವೋ ಎಂದು ಲೆಕ್ಕ ಹಾಕುತ್ತಿದ್ದಾರೆ'' ಎಂದು ಬಹು ಹಿಂದೆಯೇ ನೊಂದು ನುಡಿದರು. ಗೌತಮ ಬುದ್ಧನಿಂದ ಹಿಡಿದು ಇಂದಿನವರೆಗೆ ದಾರ್ಶನಿಕರು ಹೇಳಿದ ಎಲ್ಲ ವೈಜ್ಞಾನಿಕ ಸತ್ಯಗಳು ಈ ಮಣ್ಣಿನಲ್ಲಿ ಅರಳಲು ಅವಕಾಶ ಆಗಲೇ ಇಲ್ಲ. ಆದರೆ ಜರ್ಮನಿಯವರು ಚಿಂತಿಸುವ ರೀತಿ, ಕೈಗೊಳ್ಳುವ ಕ್ರಮ, ವೈಜ್ಞಾನಿಕವಾದುವುಗಳಾಗಿದ್ದು ಅನುಕರಣೀಯಾಗಿವೆ.

ಜರ್ಮನಿ ೨೦೦೭ನೇ ವರ್ಷವನ್ನು ಭೂವಿಜ್ಞಾನ ವರ್ಷವೆಂದು ಘೋಷಿಸಿದೆ. ಭೂಮಿಯನ್ನು ಚಲಿಸುವಂತೆ ಮಾಡುವುದು ಯಾವುದು ? ಕೊಲ್ಲಿಯಲ್ಲಿ ಪ್ರವಾಹಗಳು ಹರಿಯುವಂತೆ ಮಾಡುವುದು ಯಾವುದು ? ಲಾವಾರಸದ ಬದಿಯಲ್ಲಿ ಒಬ್ಬ ಹೇಗೆ ಬದುಕುತ್ತಾನೆ ? ಭೂವಿಜ್ಞಾನ ವರ್ಷದಲ್ಲಿ ಇಂಥ ನೂರಾರು ಪ್ರಶ್ನೆಗಳು ನಮ್ಮ ಮುಂದೆ ಸವಾಲಾಗಿ ನಿಂತಿವೆ. ಅತ್ಯಂತ ಮನೋಹರವಾದ, ವೈವಿಧ್ಯತೆಯನ್ನೊಳಗೊಂಡ ನಮ್ಮ ಈ ಭೂಗ್ರಹದ-ನೆಲದ ಮೇಲೆ, ನೀರಿನಲ್ಲಿ, ಗಾಳಿಯಲ್ಲಿ ಹಾಗೂ ಹೊರವಲಯದಲ್ಲಿ ಆಗುತ್ತಿರುವ ಪರಿಣಾಮಗಳ ಕುರಿತು ಜರ್ಮನಿಯ ಭೂವಿಜ್ಞಾನಿಗಳು ಕಾರ್ಯನಿರತರಾಗಿದ್ದಾರೆ. ಭೂವಿಜ್ಞಾನಿಗಳನ್ನು ಒಂದೆಡೆ ಸೇರಿಸಿ ಅನೇಕ ಯೋಜನೆಗಳನ್ನು ಜರ್ಮನಿಯಾದ್ಯಂತ ಯೋಜಿಸಲಾಗಿದೆ.

ವಿಜ್ಞಾನ ಎನ್ನುವುದು ದಂತಗೋಪುರದಲ್ಲಿ ಉಳಿಯಬಾರದು. ಅದು ನಮ್ಮ ಸಮಾಜದ ಎಲ್ಲ ರಂಗಗಳಲ್ಲೂ ಚರ್ಚೆಗೆ ಒಳಗಾಗಬೇಕು. ವಿಜ್ಞಾನಿಗಳು, ಕಲಾವಿದರು, ಮಾಧ್ಯಮಗಳು, ರಾಜಕಾರಣಿಗಳು, ವ್ಯಾಪಾರಿಗಳು, ಉದ್ಯಮಿಗಳು, ಸಂಘ ಸಂಸ್ಥೆಗಳು ಹಾಗೂ ಉಳಿದವರೆಲ್ಲರೂ ವಸ್ತು ಪ್ರದರ್ಶನದಲ್ಲಿ, ಕಾರ್ಯಾಗಾರಗಳಲ್ಲಿ, ವಿಜ್ಞಾನ ಉತ್ಸವಗಳಲ್ಲಿ ಹಾಗೂ ೨೦೦೭ರಲ್ಲಿ ಆಯೋಜಿಸಿರುವ ತತ್ಸಂಬಂಧವಾದ ಯೋಜನೆಗಳಲ್ಲಿ ಪಾಲ್ಗೊಳ್ಳಬೇಕು. ಎರಡು ವರ್ಷಗಳ ಹಿಂದೆ ಭೌತಶಾಸ್ತ್ರ ಪ್ರಮುಖ ವಿಷಯವಾಗಿತ್ತು. ೨೦೦೧ರಲ್ಲಿ ಜೀವ ವಿಜ್ಞಾನಗಳು ಆದ್ಯತೆ ಪಡೆದುವು. ಆದರೆ ೨೦೦೭ನೆ ವರ್ಷ 'ನಮ್ಮ ಭೂಗ್ರಹ' ಮುಖ್ಯ ವಿಷಯವಾಗಿದೆ.

ಜರ್ಮನಿಯ ಅನೇಕ ಕಡೆಗಳಲ್ಲಿ ಹೆಚ್ಚಿನ ಚಟುವಟಿಕೆಗಳು ಭೂವಿಜ್ಞಾನದ ವಿಷಯಗಳನ್ನು ಕುರಿತು ಜರುಗುತ್ತಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಭೂಮಿ, ಬೆಂಕಿ, ಗಾಳಿ ಮತ್ತು ನೀರು ಇವುಗಳನ್ನು ಕುರಿತದ್ದು. ಪ್ರತಿನಿತ್ಯದ ಚರ್ಚೆಯಲ್ಲಿ ಈ ಅಂಶಗಳನ್ನು ತರುವುದು ಜರ್ಮನಿಯ ಮುಖ್ಯ ಗುರಿಯಾಗಿದೆ. ಭೂಮಿಯ ಸಂಪನ್ಮೂಲಗಳ ಸದ್ಬಳಕೆಯನ್ನು ಕುರಿತು ಹಾಗೂ ಅವುಗಳಿಂದ ಉಂಟಾಗಬಹುದಾದ ಗೊಂದಲ ಮತ್ತು ಪರಿಣಾಮಗಳನ್ನು ಕುರಿತು ಜರ್ಮನರಿಗೆ ಸ್ಫಟಿಕದಷ್ಟು ಸ್ಪಷ್ಟವಾಗಿ ಅರಿವುಂಟು ಮಾಡುವ ಉದ್ದೇಶ ಅವರದು.

ವಿಪತ್ತುಗಳು ತರುವ ವ್ಯವಸ್ಥೆಗಳ ಕುರಿತು ಕಾರ್ಲ್‌ಶ್ರೂ ವಿಶ್ವವಿದ್ಯಾಲಯ ಮುಂದಾಗಿದೆ. ಪ್ರಾಕೃತಿಕ ವಿಪತ್ತುಗಳಿಂದ ಆಗುವ ಅನಾಹುತಗಳು ಅರವತ್ತರ ದಶಕದಲ್ಲಿ ೭೦ ಸಾವಿರ ಬಿಲಿಯನ್ ಡಾಲರ್‌ಗಳಾಗಿದ್ದರೆ ೯೦ರ ದಶಕದಲ್ಲಿ ೬೦೦ ಸಾವಿರ ಬಿಲಿಯನ್ ಡಾಲರ್‌ಗಳಾಗಿವೆ. ಪ್ರವಾಹಗಳು, ಭೂಕಂಪಗಳು, ಅಗ್ನಿ ಪರ್ವತಗಳು, ಸ್ಫೋಟಗಳು, ಚಂಡಮಾರುತಗಳು ಮುಂತಾದವುಗಳು ಹೆಚ್ಚಾಗುವ ಸಂಭವವಿದೆ ಎಂಬುದನ್ನು ಅನೇಕ ವಿಜ್ಞಾನಿಗಳು ಒಪ್ಪಿರುತ್ತಾರೆ. ಈ ಹವಾಮಾನ ವೈಪರೀತ್ಯಗಳಿಂದಾಗಿ ಸಸ್ಯ ವರ್ಗಗಳ ಮೇಲಾಗುವ ಹಾನಿಯಿಂದ ಆರ್ಥಿಕ ಹಾಗೂ ರಾಜಕೀಯ ವಲಯಗಳಲ್ಲಿ ಸಮಸ್ಯೆಯುಂಟಾಗುತ್ತದೆ. ಈ ಎಲ್ಲ ಕಾರಣಗಳಿಂದ ಕಾರ್ಲ್‌ಶ್ರೂ ವಿಶ್ವವಿದ್ಯಾಲಯ ಅಕ್ಟೋಬರ್ ೨೦೦೭ರಲ್ಲಿ ಮುಂದಿನ ವರ್ಷಕ್ಕೆ ಸ್ನಾತಕೋತ್ತರ ಪದವಿಗೆ 'ವಿಪತ್ತು ನಿವಾರಣೆ' ವಿಷಯವನ್ನು ಅಳವಡಿಸುತ್ತಿದೆ.

೨೦೦೭ರ ನವಂಬರ್‌ನಲ್ಲಿ 'ಜೀವ ಮತ್ತು ಭೂಮಿ' ಕುರಿತ ಬೃಹತ್ ಯೋಜನೆ ಡ್ರೆಸ್‌ಡನ್‌ನಲ್ಲಿ ನಡೆಯಲಿದೆ. ನಮ್ಮ ಭೂಮಿಯ ಉಗಮ, ಅದರ ಆಯುಷ್ಯ, ಅದು ಜೀವ ವೈವಿಧ್ಯಗಳನ್ನೊಳಗೊಳ್ಳಲು ತೆಗೆದುಕೊಂಡ ಅವಧಿ, ಅದರ ಮುಂದಿನ ಅಭಿವೃದ್ಧಿಗೆ ಮಾನವನ ಕೊಡುಗೆ ಏನು ಮುಂತಾದ ವಿಷಯಗಳನ್ನು ಕುರಿತು ಉಪನ್ಯಾಸಗಳು, ವಸ್ತುಪ್ರದರ್ಶನಗಳು, ಚಲನಚಿತ್ರಗಳು, ಯಾನಗಳು, ಪ್ರಯೋಗಗಳು ಹಾಗೂ ಸಂವಾದ, ಸಂಭಾಷಣೆಗಳು ನಡೆಯುತ್ತವೆ.

ಮುನಿಚ್‌ನಲ್ಲಿರುವ ವಸ್ತುಸಂಗ್ರಹಾಲಯ ಹವಾಮಾನ ಕುರಿತ ವಿಶೇಷ ಯೋಜನೆಯನ್ನು ತಯಾರಿಸಲಿದೆ. ಹವಾಮಾನ ಅನ್ವೇಷಣೆ ಕುರಿತು ಯಾವ ಮಾರ್ಗಗಳಲ್ಲಿ ಕ್ರಮಿಸಬೇಕೆಂದು ಉಪಗ್ರಹ, ಹಡಗು ಹಾಗೂ ವೈಮಾನಿಕ ಸಮೀಕ್ಷೆಗಳು ಜೂನ್ ೨೦೦೮ರವರೆಗೆ ನಡೆಯಲಿವೆ. ಹವಾಮಾನ ದಾಖಲಾತಿಗಳನ್ನು ಕುರಿತು ಹಳೆಯ ಚಿತ್ರಕಲಾ ಪ್ರದರ್ಶನ ಜೊತೆ ಜೊತೆಯಲ್ಲಿ ಮನುಷ್ಯ ಹವಾಮಾನ ವೈಪರೀತ್ಯಕ್ಕೆ ನೀಡಿರುವ ಕೊಡುಗೆ ಎಂತಹುದು ಎಂಬುದನ್ನು ಆಧುನಿಕ ಉಪಕರಣಗಳು ಪ್ರದರ್ಶಿಸುತ್ತವೆ. ಈ ನಿಟ್ಟಿನಲ್ಲಿ ಆಗಬೇಕಾಗಿರುವ ರಾಜಕೀಯ ಹಾಗೂ ತಾಂತ್ರಿಕ ಬದಲಾವಣೆಯ ಅಗತ್ಯ ಕುರಿತು ವಿಶ್ಲೇಷಿಸಲಾಗುತ್ತದೆ.

ಬಹುಮುಖ್ಯವಾದುದೆಂದರೆ ನಾಟಕಗಳ ಮೂಲಕ, ದೃಶ್ಯ ಮಾಧ್ಯಮಗಳ ಮೂಲಕ, ೧೦೫ ಮೀಟರ್ ಉದ್ದ ಇರುವ ಭೂಹಡಗಿನ ಮೂಲಕ 'ಒಂದು ಭಾಗ' ಶೀರ್ಷಿಕೆಯ ಅಡಿಯಲ್ಲಿ ಜನತೆಗೆ ಬೋಧಿಸಲಾಗುತ್ತದೆ.

**ಒಂದು ಭಾಗ :** ಒಂದು ಭಾಗ ವ್ಯತ್ಯಾಸವಾಗುವುದರಿಂದ ಭೂಮಿಯ ಆಯಸ್ಸು ಒಂದು ದಿನ ಅಥವಾ ಒಂದು ವರ್ಷ ಹೆಚ್ಚಾಗುತ್ತದೆ. ಗುರುತ್ವಾಕರ್ಷಣೆ ಇರುವು

**ಜ. ಹೊ. ನಾರಾಯಣಸ್ವಾಮಿ**

ದಕ್ಕಿಂತ ಹೆಚ್ಚು ಅಥವಾ ಕಡಿಮೆಯಾಗುತ್ತದೆ. ಸಮುದ್ರದ ಉಪ್ಪು ಒಂದು ಭಾಗ ಹೆಚ್ಚು ಕಮ್ಮಿಯಾಗುತ್ತದೆ. ಧ್ರುವಗಳಲ್ಲಿ ಹಿಮದ ಚಿಪ್ಪು ಒಂದು ಭಾಗ ಹೆಚ್ಚು ಕಮ್ಮಿಯಾಗುತ್ತದೆ. ಚಂದ್ರಗ್ರಹದ ತೂಕ ಒಂದು ಭಾಗ ಹೆಚ್ಚಾಗುತ್ತದೆ. ಹವಾಮಾನದಲ್ಲಿ ಒಂದು ಭಾಗ ಆಮ್ಲಜನಕ ಕಡಿಮೆಯಾಗುತ್ತದೆ. ಭೂಮಿಯ ಶೀತೋಷ್ಣ ಒಂದು ಭಾಗ ಹೆಚ್ಚು ಕಡಿಮೆಯಾಗುತ್ತದೆ. ಅಂತರ್ಜಲ ಒಂದು ಭಾಗ ಕುಗ್ಗುತ್ತದೆ.

ಹೀಗೆ ಜರ್ಮನ್ ದೇಶದವರು ಸವಾಲನ್ನು ಎದುರಿಸಲು ವೈಜ್ಞಾನಿಕ ನೆಲೆಯಲ್ಲಿ ಸನ್ನದ್ಧರಾಗಿದ್ದಾರೆ. ಆದರೆ ಭಾರತೀಯರಾದ ನಾವು ಏನು ಮಾಡುತ್ತಿದ್ದೇವೆ. ಈ ನಿಟ್ಟಿನಲ್ಲಿ ಆತ್ಮವಿಶ್ಲೇಷಣೆ ಮಾಡಿಕೊಳ್ಳಬೇಕಾಗಿದೆ.

ವಿವೇಕಾನಂದರು ''ಭಾರತೀಯರು ಯೂರೋಪಿಯನ್ನರಿಂದ ಬಾಹ್ಯ ಪ್ರಕೃತಿಯನ್ನು ಹೇಗೆ ನಿಗ್ರಹಿಸಬೇಕು ಎಂಬುದನ್ನು ಕಲಿತುಕೊಳ್ಳಬೇಕು. ಯೂರೋಪಿಯನ್ನರು ಭಾರತೀಯರಿಂದ ಆಂತರಿಕ ಪ್ರಕೃತಿಯನ್ನು ಹೇಗೆ ನಿಗ್ರಹಿಸಬೇಕು ಎಂಬುದನ್ನು ಕಲಿತುಕೊಳ್ಳಬೇಕು. ಆಗ ಹಿಂದುವೂ ಇರುವುದಿಲ್ಲ, ಯೂರೋಪಿಯನ್ನರೂ ಇರುವುದಿಲ್ಲ; ಬಾಹ್ಯ ಮತ್ತು ಆಂತರಿಕ ಪ್ರಕೃತಿಯನ್ನು ಗೆದ್ದ ಆದರ್ಶ ಜನಾಂಗ ಒಂದು ಇರುವುದು'' ಎಂದು ಇಡೀ ಮನುಕುಲಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಯೂರೋಪಿಯನ್ನರು ಅವರ ಕಾರ್ಯದಲ್ಲಿ ಯಶಸ್ಸನ್ನು ನಿರಂತರ ಸಾಧಿಸುತ್ತಿದ್ದಾರೆ. ಭಾರತೀಯರು ಅವರ ಸಾಮರ್ಥ್ಯವಾದ 'ಅಧ್ಯಾತ್ಮ'ವನ್ನೂ ಗಾಳಿಗೆ ತೂರಿದ್ದಾರೆ. ವಿಜ್ಞಾನವೂ ಇಲ್ಲದೆ ಇರುವ ಅಧ್ಯಾತ್ಮವನ್ನೂ ಗಾಳಿಗೆ ತೂರಿ ಮೌಢ್ಯಾಂಧಕಾರದಲ್ಲಿ ಮುಳುಗುತ್ತಿದ್ದಾರೆ. ಅಮೆರಿಕೆಯ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾಲಯ ಅರವಿಂದರ 'ಗೀತಾ ಪ್ರಬಂಧಗಳು' ಕೃತಿಯನ್ನು, ಕಾರ್ನೆಲ್ ವಿಶ್ವವಿದ್ಯಾಲಯ 'ದಿವ್ಯ ಜೀವನ' ಕೃತಿಯನ್ನು ಪಠ್ಯವಾಗಿಸುತ್ತಿದ್ದರೆ, ಭಾರತ ತನ್ನ ವಿಶ್ವವಿದ್ಯಾಲಯಗಳಲ್ಲಿ 'ಜ್ಯೋತಿಷ್ಯ'ವನ್ನು ಪಠ್ಯ ಮಾಡಲು ಹವಣಿಸುತ್ತಿದೆ. ನಮ್ಮ ಅವನತಿಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇಕೆ ?

ಭಾರತ ಸರ್ಕಾರವಾಗಲೀ, ರಾಜ್ಯ ಸರ್ಕಾರಗಳಾಗಲಿ ಯಾವ ಯೋಜನೆಗಳನ್ನೂ ತೀವ್ರವಾಗಿ ತೆಗೆದುಕೊಳ್ಳುವುದಿಲ್ಲ. ವಿಶ್ವವಿದ್ಯಾಲಯಗಳಂತೂ ಈ ವಿಷಯಗಳಿಗೆ ಬೆನ್ನು ಮಾಡಿ ಬಹಳ ವರ್ಷಗಳೇ ಸಂದಿವೆ.

ನಮ್ಮ ಶಿಕ್ಷಣದಲ್ಲಿ ಹೆಚ್ಚು ಅಂಕ ಗಳಿಸುವವನೇ ಪ್ರತಿಭಾವಂತ ಎನ್ನುವ ತಪ್ಪು ಕಲ್ಪನೆ ಇದೆ. ಮಕ್ಕಳ ಮನಸ್ಸಿನಲ್ಲಿ ವಿಜ್ಞಾನ ತುಂಬುತ್ತಿದ್ದೇವೆಯೇ ಹೊರತು ವೈಜ್ಞಾನಿಕ ಮನೋಭಾವವನ್ನಲ್ಲ. ಆದಕಾರಣ ಅವರು ಕೇವಲ ಪ್ರತಿಕೃತಿಗಳಾಗುತ್ತಿದ್ದಾರೆ. ಪ್ರತಿಭಾವಂತರಾಗುತ್ತಿಲ್ಲ. ಆದಕಾರಣ ಕೋಟ್ಯಾಂತರ ಹಣ ಸುರಿದೂ, ಉಪಗ್ರಹಗಳನ್ನು ಉಡಾಯಿಸಿಯೂ ಅದರಿಂದ ಹವಾಮಾನ ಕುರಿತ ಯಾವ ಪ್ರಯೋಜನಗಳೂ ಆಗುತ್ತಿಲ್ಲ. ವಿಜ್ಞಾನಿಗಳು ಕೈಕಟ್ಟಿ ಕುಳಿತರೆ ಸರ್ಕಾರಗಳು, ಜನರು ಮೌಢ್ಯ ಆಚರಣೆಗಳಲ್ಲಿ ತೊಡಗಿದ್ದಾರೆ. ಪರಿಸರದ ಕಾಳಜಿ ಶೂನ್ಯವಾಗಿದೆ. ನೀರಿನ ಬಳಕೆಯಲ್ಲಿ ಇರುವ ತಾತ್ಸಾರ ಕುರಿತ, ನೀರನ್ನು ಭೂಮಿಯಲ್ಲಿ ಹಿಂಗಿಸುವ ಕುರಿತ ಒಂದು ಕಾರ್ಯಕ್ರಮವೂ ಇಲ್ಲ. ಬೃಹತ್ ಯೋಜನೆಗಳನ್ನು ಹಮ್ಮಿಕೊಂಡು ಜಲಾಶಯಗಳು ಹೂಳಿನಿಂದ ತುಂಬಿ ನೀರಿನ ಶೇಖರಣೆ ಕಡಿಮೆಯಾಗುತ್ತಿದೆ. ಕೆರೆಗಳನ್ನು ಸರ್ಕಾರದಂತೆ ಜನರೂ ಕಡೆಗಣಿಸಿದ್ದಾರೆ. ಕೆರೆಗಳನ್ನು ಜನರು ಒತ್ತುವರಿ ಮಾಡುತ್ತಿದ್ದರೆ ಸರ್ಕಾರ ಮುಚ್ಚಿಸುತ್ತಿದೆ. ಯಾರೂ ಗೋಡು ತೆಗೆಯುವುದಿಲ್ಲ. ಹೂಳೆತ್ತಿದರೆ ನೀರು ಹೆಚ್ಚು ಶೇಖರಣೆಯಾಗುತ್ತದೆ ಎಂಬುದರ ಬಗ್ಗೆ ಕಾಳಜಿ ಇಲ್ಲ. ಕೆರೆಗಳ ಹೂಳೆತ್ತಲು ವಿದೇಶೀ ಸಾಲದ ಮೇಲೆ ಅವಲಂಬಿತವಾಗುವ, ಅಂತಹ ಸಾಲ ತಂದು ಮಾಡುವ ಕಾರ್ಯದಲ್ಲೂ ಹಣ ಹೊಡೆಯುವ ಪರಿಸ್ಥಿತಿ ಉಂಟಾಗಿದೆ. ಎಲ್ಲರ ಮೈಮನಗಳಲ್ಲಿ ತುಂಬಿ ತುಳುಕುತ್ತಿರುವ ಭ್ರಷ್ಟಾಚಾರ ಎಲ್ಲರ ಕೈಗಳನ್ನೂ ಕಟ್ಟಿಹಾಕಿದೆ. ನಮ್ಮ ಭೂಶಾಸನಗಳು ಜನರು ಪರಸ್ಪರ ಹೊಡೆದಾಡುವ ಪರಿಸ್ಥಿತಿಯನ್ನು ಸೃಷ್ಟಿಸಿವೆ. ಪಾರ್ಲಿಮೆಂಟಿನಿಂದ ಹಿಡಿದು ಪಂಚಾಯಿತ್ತಿಗಳವರೆಗೆ ಹೊಡೆದಾಟಗಳು ಸಾಮಾನ್ಯವಾಗಿವೆ. ಅನೈತಿಕ ಗಳಿಕೆಗಾಗಿ ಅನ್ಯಮಾರ್ಗಗಳನ್ನು ಅನುಸರಿಸಲು ಪರಸ್ಪರ ಪೈಪೋಟಿ ನಡೆಸುತ್ತಿವೆ. ಸ್ವಾತಂತ್ರ್ಯದ ಗುರಿ ಇದಾಗಿತ್ತೆ ?

ಡಾ॥ ಲೋಹಿಯಾ, ''ಸ್ವಾತಂತ್ರ್ಯಾನಂತರ ಕಾಣಿಸಿಕೊಂಡ ಭಾರತ ಒಂದು ವಿಚಿತ್ರ ಭಾರತ. ಗುಲಾಮಗಿರಿಯಲ್ಲಿದ್ದಾಗ ಹೊರಗೆ ಕತ್ತಲು ಕವಿದಿತ್ತು. ಆದರೆ ಒಳಗೆ ಬೆಳಕಿತ್ತು. ಈಗ ಹೊರಗೆ ಸ್ವಾತಂತ್ರ್ಯದ ಬೆಳಕಿದೆ, ಆದರೆ ಒಳಗೆ ಕತ್ತಲೆ ಕವಿದಿದೆ'' ಎಂದಿದ್ದಾರೆ. ನಿಜ. ಈ ಒಳಗಿನ ಕತ್ತಲೆಗೆ ಬೆಳಕಿನ ದಾರಿ ಯಾವುದು ?

ಜ. ಹೊ. ನಾರಾಯಣಸ್ವಾಮಿ
ವಕೀಲರು, 'ಮಾನಸ'
೨೦೬೪/ಎ, ಉತ್ತರ ಬಡಾವಣೆ
ಹಾಸನ-೫೭೩ ೨೦೧

## ಬೆಂಕಿಯ ಗರ್ಭದೊಳಗೆ

ಬೆಳದಿಂಗಳ ಅಂಗಳದಲ್ಲಿ
ಚಂದ್ರನ ನೆನೆಸಿಟ್ಟ ನೀರು
ಹಾಲಾಗಿದೆಯೆಂದು ಹಪಹಪಿಸಿ
ಹಾಡುಹಗಲೇ ಹಾಲಾಹಲ ಎಬ್ಬಿಸಿ
ನೆಲದವ್ವನ ನಾಲಗೆಗೆ
ರಕ್ತದ ರುಚಿಯುಣಿಸುವ
ರಕ್ತ ಪಿಪಾಸುಗಳ
'ಕೋಮು'
ಈಗ ಕೋಮಾ ಸ್ಥಿತಿಯಲ್ಲಿ
ಒಡೆದ ಮಡಕೆಗೆ ನೀರು ಹೊಯ್ದಂತೆ.
ಅಂದು..........
ನಟ್ಟಿರುಳಲಿ ರೈಲು ಸುಟ್ಟ ಬೆಂಕಿ
ನಡುರಾತ್ರಿಯಲಿ ಗುಡಿಸಲು ಸುಟ್ಟ ಬೆಂಕಿ
ಮಟಮಟ ಮಧ್ಯಾಹ್ನ ಅಷ್ಟಾಗಿ
ಮನುಷ್ಯರನ್ನೂ ಸುಟ್ಟ ಬೆಂಕಿ
ಮಕ್ಕಳು ಮುದುಕರ ಆರ್ತನಾದ ನೋಡಿ
ಬದುಕು – ಬೀದಿ ಬೆತ್ತಲಾದದ್ದು ನೋಡಿ
ಮುಸ್ಸಂಜೆ ಮನಸಿನಲಿ ಶಪಿಸಿಕೊಳ್ಳುತ್ತಿದೆ
ನಾನೇಕೆ ಮತೀಯರಿಗೆ ಮತ ಕೊಟ್ಟೆ ಎಂದು.

ಇರಿದ ಚಾಕುಗಳು, ಚುಚ್ಚಿದ ಚೂರಿಗಳು
ಧರ್ಮದ ಅಮಲಿನಲಿ
ನೆಲ ನಡುಗುವಂತೆ ನರ್ತಿಸಿ
ರಕ್ತದೋಕುಳಿಯಾಡಿ
ನೆತ್ತರ ನೀರಾಗಿಸಿದವರ ಕಂಡು
ಮುಮ್ಮಲ ಮರುಗಿ ಪರಿತಪಿಸುತ್ತಿವೆ
ನಾವೇಕೆ ಇರಿತಕ್ಕೆ ಹರಿತವಾದೆವೆಂದು.

ಚಲಿಸುವ ಬದುಕ ಬಂಡಿ
ಅಂದು ಸ್ತಬ್ಧವಾಗಿತ್ತು, ಮೌನವಾಗಿತ್ತು
ಒಂದುಗೂಡದ ಹಳಿಗಳ ಮೇಲೆ



ನಿರ್ದಯಿಗಳ ಉಪದ್ರವಕ್ಕೆ ಶರಣಾಗಿ
ಆದರೂ.......ಬದುಕಿದ್ದವು
ಕರಕಲಾದ ಮನುಷ್ಯರ ಮನಸುಗಳು
ಇದ್ದವರ ನಿಟ್ಟುಸಿರುಗಳನುಂಡು,
ರಾತ್ರಿ ಸತ್ತ ಸಮಯದಲಿ
ಬೆಂಕಿಯ ಗರ್ಭದೊಳಗೆ
ಸತ್ತಿಲ್ಲದಿರುವ ನೆಮ್ಮದಿಯ ನಾಳೆಗಳ ನೆನಪುಗಳಲ್ಲಿ.

ವಿ. ಎಸ್. ಕೋದಂಡರಾಮ
ಗುಲಬರ್ಗ

ಪ್ರತಿಕ್ರಿಯೆ

# ಕುದುರೆಮುಖ ಹೋರಾಟ

## ಪ್ರಶ್ನೆಯಾಗಿಯೇ ಉಳಿದ ಪರ್ಯಾಯ!

**ಕು**ದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆಯು ''ನೋವಿಲ್ಲದೇ ನರಳುತ್ತಿರುವ'' ಬಗ್ಗೆ ನಾನು ಬರೆದ ಲೇಖನಕ್ಕೆ ಶ್ರೀ ಶಿವಸುಂದರ್ ಎಂಬ ಸಹೃದಯಿ ಮಿತ್ರರೊಬ್ಬರು ನನ್ನದು ''ವಿಷಾದನೀಯ ಕುರುಡು'' ಎಂದು ಪ್ರತಿಕ್ರಿಯಿಸಿ ಸೈದ್ಧಾಂತಿಕ ಚರ್ಚೆಗಿಳಿದಿದ್ದಾರೆ. ಹಾಗಾಗಿ ಸ್ಪಷ್ಟನೆ ನೀಡುವ ಅನಿವಾರ್ಯತೆ ಒದಗಿದೆ.

ಸಾಮ್ರಾಜ್ಯಶಾಹಿ-ಜಾಗತೀಕರಣದ ವಿರುದ್ಧ ಸಮಾಜವಾದಿ ಪರ್ಯಾಯವೆಂಬ ಧರ್ಮ ಯುದ್ಧ ಘೋಷಿಸಿ ರಾಷ್ಟ್ರೀಯ ಉದ್ಯಾನವನದೊಳಗೆ ಸಿಲುಕಿರುವ ಗಿರಿಜನರ ಮೂಲಕ ಮಹಾಭಾರತ ಯುದ್ಧವನ್ನಾಗಿ ಬಿಂಬಿಸುವ ಸಿದ್ಧಾಂತದ ವಿಶ್ವರೂಪವನ್ನು ಶ್ರೀಕೃಷ್ಣನಾಗಿ ಗೆಳೆಯ ಶಿವಸುಂದರ್ ಪ್ರದರ್ಶಿಸಲು ಯತ್ನಿಸಿದ್ದಾರೆ! ಆದರಿದು ಚಿತ್ರ ನಿರ್ಮಾಪಕನೊಬ್ಬನ ಕ್ರಾಂತಿಕಾರಿ ಚಲನಚಿತ್ರಕ್ಕೆ ಬುದ್ಧಿವಂತನೊಬ್ಬ ಬರೆದ ಚಿತ್ರಕಥೆ ಸಂಭಾಷಣೆಗಳಾಗಿ ನನಗೆ ಕಾಣುತ್ತಿರುವುದು ಒಂದು ದುರಂತ !

ಏಕೆಂದರೆ ಕುದುರೆಮುಖ ಗಣಿಗಾರಿಕೆ ವಿವಾದವಾಗಲಿ ಅಥವಾ ರಾಷ್ಟ್ರೀಯ ಉದ್ಯಾನವನ ಯೋಜನೆಯಾಗಲಿ 'ಆಪರೇಷನ್ ಅಂತ' ಚಲನಚಿತ್ರದಂತೆ ಮುಕ್ತಾಯವಾಗುವ ೩ ಗಂಟೆಯ ಹೋರಾಟದ ಚಿತ್ರಕಥೆಯಲ್ಲ ! ಇಲ್ಲಿ ನಿಜ ಜೀವನದಲ್ಲಿ ನಿರತನಾದ ಪ್ರತಿಯೊಬ್ಬ ನಟನೂ ನಿರ್ದೇಶಕನೂ ಸಹಾ ಕಟು ವಾಸ್ತವತೆಯನ್ನು ಎದುರಿಸಬೇಕೇ ವಿನಾ ಕ್ರಾಂತಿಕಾರಿ ಸಂಭಾಷಣೆಯನ್ನು ಬಾಯಿಪಾಠ ಮಾಡಿ ಒಪ್ಪಿಸಿದರಾಗದು! ಏಕೆಂದರೆ ಪ್ರೇಕ್ಷಕ ಈ ಹೋರಾಟವನ್ನು ಮನರಂಜನೆಗಾಗಿ ನೋಡದೆ ಕಾರ್ಯಸಾಧು ಪರ್ಯಾಯವೆಂದು ನೋಡುತ್ತಾನೆ. ಹೀಗಿದ್ದರೂ ''ಪ್ರಭುತ್ವದ ವರ್ಗ ಗುಣ, ಸಮಾಜವಾದಿ ನೆಲೆಗಟ್ಟು, ಪರ್ಯಾಯ ಮಾರ್ಗಸೂಚಿ, ಸಾಮ್ರಾಜ್ಯಶಾಹಿ ಜಾಗತೀಕರಣ'' ಇತ್ಯಾದಿ ಶಬ್ದಗಳನ್ನು ಈ ಪರಿಸರದ ಸಮಸ್ಯೆಗೆ ಬೆಸೆಯುವ ಮೂಲಕ, ನನ್ನ ಮಿತ್ರ-ಸಂಗಾತಿಗಳ ಬೆಂಬಲ ಗಿಟ್ಟಿಸುವ ಹಿರಿಯ ಗೆಳೆಯ ಶಿವಸುಂದರ್ ಅವರ ಬುದ್ಧಿವಂತಿಕೆಯನ್ನು ಮೆಚ್ಚಲೇಬೇಕು. ಅವರಷ್ಟೇ ನಾನೂ ಸಾಮ್ರಾಜ್ಯಶಾಹಿ ವಿರೋಧಿ ಎಂಬುದು ನನ್ನ ಭಾವನೆ.

ಇಡೀ ಯೋಜನೆಯ ಬಗೆಗಿನ ಹಿಂದು-ಮುಂದುಗಳನ್ನು ''ಅನಾರೋಗ್ಯಕರ ವ್ಯಂಗ್ಯ''ವೆಂದು ಕರೆದಿರುವುದರಿಂದ ಅವರ ಸಲಹೆಯಂತೆ ಇದನ್ನು ಕೈಬಿಡುತ್ತೇನೆ. ಶಿವಸುಂದರ್ ತಮ್ಮ ಲೇಖನದಲ್ಲಿ ನನ್ನಂತಹವರನ್ನು ''ಈ ವ್ಯವಸ್ಥೆಯ ವಕ್ತಾರರೆಂದೂ, ಅದರ ಪರೋಕ್ಷ ಸಮರ್ಥಕರೆಂದೂ, ಪರ್ಯಾಯದ ಹಾದಿಯಲ್ಲಿ ತೊಡಕಿನವರೆಂದೂ, ಕೊನೆಗೆ ಪರಿಷ್ಕರಣವಾದಿಗಳೆಂದೂ'' ಪರೋಕ್ಷವಾಗಿ ಕರೆದಿದ್ದಾರೆ. ಚಿಂತೆಯಿಲ್ಲ! ಏಕೆಂದರೆ, ಹಿರಿಯರಾದ ಕನು ಸನ್ಯಾಲ್, ಚಾರು ಮಜುಂದಾರ್, ಕುನಿಕ್ಕಲ್ ನಾರಾಯಣನ್, ಅಜಿತಾ, ಕೊಂಡಪಲ್ಲಿ ಸೀತಾರಾಮಯ್ಯ, ವರವರರಾವ್ ಇತ್ಯಾದಿ ನಾಯಕರ ವಿಚಾರಧಾರೆಯ ಪುನರಾವರ್ತನೆಯಿದೆಂದು ನಾನು ಪರಿಗಣಿಸಿದ್ದೇನೆ. ಪರಿಷ್ಕರಣವಾದಿಯೆಂದು ಯಾರನ್ನಾದರೂ ದೂಷಿಸಿಬಿಟ್ಟರೆ ತರ್ಕ ಗಟ್ಟಿಯಾಗುತ್ತದೆಂದು ನಾನು ನಂಬಿಲ್ಲ.

ಮೂಲ ಹಿನ್ನೆಲೆ ಇದಾದರೂ ಚರ್ಚೆಯ ವಸ್ತು ಬೇರೆಯಾದ್ದರಿಂದ ಅತ್ತ ಗಮನ ಹರಿಸೋಣ: ''ವಿಷಾದನೀಯ ಕುರುಡು...!'' ಲೇಖನದಲ್ಲಿ ಒಟ್ಟಾರೆ ತಾತ್ಪರ್ಯ ಎರಡು ಮಾತ್ರ. ಮೊದಲನೆಯದು ''ಜಾಗತೀಕರಣದ ಹಿನ್ನೆಲೆಯಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ರಚಿಸಿರುವುದೇ ಬಹುರಾಷ್ಟ್ರೀಯರಿಗೆ ಅದನ್ನು ಕೊಡುವ ಉದ್ದೇಶದಿಂದ. ಇದನ್ನು ತಡೆಯಬೇಕಾದರೆ ರಾಷ್ಟ್ರೀಯ ಉದ್ಯಾನವನ ಆಗುವುದನ್ನೇ ತಪ್ಪಿಸಬೇಕು.'' ಎರಡನೆಯದಾಗಿ, ''ಕುದುರೆಮುಖ ಗಣಿಗಾರಿಕೆ ಮುಂದುವರಿಕೆಗೆ ಅನುಮತಿ ಕೊಟ್ಟಿರುವುದೇ ಅದನ್ನು ಖಾಸಗಿಯವರಿಗೆ ಮಾರಲು. ಇದನ್ನು ತಡೆಯಬೇಕೆಂದರೆ ಗಣಿಗಾರಿಕೆ ಮುಂದುವರಿಯುವುದನ್ನು ರದ್ದು ಮಾಡಬೇಕು.'' ಇವೆರಡಾದರೆ, ಜಾಗತೀಕರಣದ ವಿರುದ್ಧ ಹೋರಾಟ ಯಶಸ್ವಿಯಾದಂತೆ ಎನ್ನಲಾಗಿದೆ.

ನಿಜ, ಸಾಮ್ರಾಜ್ಯಶಾಹಿ ಪ್ರಣೀತ ಜಾಗತೀಕರಣದ ಉದ್ದೇಶವೇ ಬಡರಾಷ್ಟ್ರಗಳನ್ನು ಎಲ್ಲಾ ರೀತಿಯಿಂದಲೂ ಶೋಷಿಸುವುದಾಗಿದೆ. ಇದು ಇಂದು ನಿನ್ನೆಯ ಹೊಸ ವಿಚಾರವಲ್ಲ. ಒಂದರ್ಥದಲ್ಲಿ ಶತಮಾನಗಳಿಂದಲೂ ಅಸ್ತಿತ್ವದಲ್ಲಿ ಇರುವ ವರ್ಗಗುಣವೂ ಕೂಡ. ಕಳೆದ ಶತಮಾನಗಳಲ್ಲಿ ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯ ನಂತರ ಹಿಂದಿನ ಪಾಳೇಗಾರಿ ಜಮೀನ್ದಾರಿ ವ್ಯವಸ್ಥೆ ಬಂಡವಾಳಶಾಹಿಯಾಗಿ ನಂತರ ತನ್ನ ಶೋಷಣಾ ಜಾಲವನ್ನು ವಿಸ್ತರಿಸಿ ವಸಾಹತುಶಾಹಿಯಾಗಿ, ಮುಂದೆ ಸಾಮ್ರಾಜ್ಯಶಾಹಿಯಾಗಿ ಪರಿವರ್ತಿತ ಸ್ಪಷ್ಟ ಸ್ವರೂಪ ಪಡೆದಿದೆ. ಈ ಹಿನ್ನೆಲೆಯಲ್ಲಿಯೇ ಕಾರ್ಲ್ ಮಾರ್ಕ್ಸ್ ''ವಿಶ್ವಕಾರ್ಮಿಕರೇ ಒಂದಾಗಿ'' ಎಂಬ ಶ್ರಮಜೀವಿ ಜಾಗತೀಕರಣದ ಘೋಷಣೆ ಹೊರಡಿಸಿದ್ದ ! ಹಾಗೆಂದು ಅದಕ್ಕಾಗಿ ಈ ಕೈಗಾರಿಕಾ ಕ್ರಾಂತಿಯನ್ನೇ ಸಾರಾಸಗಟಾಗಿ ತಿರಸ್ಕರಿಸಬೇಕೇ ? ಅಥವಾ ಇಲ್ಲಿರುವ ಶೋಷಣೆಯ ವ್ಯವಸ್ಥೆಯನ್ನು ಮಾತ್ರವೇ ವಿರೋಧಿಸಬೇಕೇ? ಕೈಗಾರಿಕಾ ಕ್ರಾಂತಿಯಿಂದ ಉಂಟಾದ ''ಮಿಗುತಾಯ ಮೌಲ್ಯ''ವನ್ನು ಲಪಟಾಯಿಸುವಂತಹ ಶೋಷಣೆಯ ಜಾಗತೀಕರಣದ ವಿರುದ್ಧ ಕಾರ್ಲ್ ಮಾರ್ಕ್ಸ್ ಹೋರಾಡಿದನೇ ವಿನಾ ಇದೇ ಕೈಗಾರಿಕಾ ಕ್ರಾಂತಿಯ ಜಾಗತೀಕರಣದ ವಿರುದ್ಧವಲ್ಲವೆಂಬುದನ್ನು ನಾವು ಮರೆಯಬಾರದು.

ಇಂತಹ ವೈಜ್ಞಾನಿಕ ಸಮಾಜವಾದದ ತಾತ್ವಿಕ ತಿಳುವಳಿಕೆಯ ಹಿನ್ನೆಲೆಯಲ್ಲಿ ಗಣಿಗಾರಿಕೆ ಮತ್ತು ರಾಷ್ಟ್ರೀಯ ಉದ್ಯಾನವನಗಳ ಸಮಸ್ಯೆಗಳನ್ನು 'ಮೂಲ ನಿವಾಸಿಯಾಗಿ' ನಾನು ವಿಮರ್ಶಿಸಿದ್ದೇನೆಯೇ ಹೊರತು ಲೋಹಿಯಾ ಸಮಾಜವಾದ ಅಥವಾ ಬಿ.ಜೆ.ಪಿಯ ಗಾಂಧೀ ಪ್ರಣೀತ ಸಮಾಜವಾದ ಅಥವಾ ಬಾಕುನಿನ್-ಟ್ರಾಟ್‌ಸ್ಕಿ ಸಮಾಜವಾದ, ಅಥವಾ ಜಾರ್ಜ್ ಫರ್ನಾಂಡಿಸ್ ಸಮಾಜವಾದಗಳ ಹಿನ್ನೆಲೆಯಲ್ಲಿ ಅಲ್ಲ ಎಂಬುದನ್ನು ಟೀಕಾಕಾರರು ತಿಳಿಯಬೇಕು.

ಇಂದಿನ ಜಗತ್ತಿನ ಅಮೆರಿಕನ್ ಏಕಧ್ರುವ ಯಜಮಾನಿಕೆಯ ವ್ಯವಸ್ಥೆಯ ವಿರುದ್ಧ ಜಗತ್ತಿನ ಯಾವುದೋ ಒಂದು ರಾಷ್ಟ್ರ ಏಕಾಂಗಿಯಾಗಿ ಹೋರಾಡುವುದು ಕಷ್ಟ ಸಾಧ್ಯ. ಕ್ಯೂಬಾ-ವಿಯೆಟ್ನಾಂ-ಇರಾಕ್ ಇತ್ಯಾದಿ ದೇಶಗಳ ಬವಣೆ ಇದಕ್ಕೊಂದು ಉದಾಹರಣೆ. ಆದರೂ ನಿರಾಶೆಗೆ ಕಾರಣವಿಲ್ಲ. ಜಾಗತಿಕ ಮಟ್ಟದಲ್ಲಿ ಜಾಗತೀಕರಣದ ವಿರುದ್ಧ ಹಂತಹಂತವಾಗಿ ದೇಶಗಳ ಧ್ರುವೀಕರಣ ಆಗುತ್ತಿದೆ. ಆದರೆ ನೇತೃತ್ವ ಕೊಡಲು ಹಿಂದಿನ ಸೋವಿಯತ್ ಒಕ್ಕೂಟ ಈಗಿಲ್ಲ. ಅಂತಹ ಜಾಗತಿಕ ಪರ್ಯಾಯ ರಾಜಕೀಯ ಧ್ರುವೀಕರಣ ಆಗುವವರೆಗೆ ಪ್ರತಿಯೊಂದು ದೇಶವೂ ಡಬ್ಲ್ಯು.ಟಿ.ಓ., ಪೇಟೆಂಟ್ ಇತ್ಯಾದಿ ಜಾಗತೀಕರಣದೊಳಗಿನ ಕುಯುಕ್ತಿಗಳನ್ನು ನಿರಂತರವಾಗಿ ಪ್ರತಿಭಟಿಸುತ್ತಲೇ ಇರಬೇಕು. ಹೀಗೆಂದ ಮಾತ್ರಕ್ಕೆ ಪರ್ಯಾಯವೇ ಇಲ್ಲವೆಂಬ ಭ್ರಮೆಯಲ್ಲಿ ಇದ್ದೇವೆಂಬ ಅರ್ಥವಲ್ಲ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ಒಳಗಿರುವ ಅಮೂಲ್ಯ ಔಷಧೀಯ ಸಸ್ಯ ಪ್ರಭೇದಗಳು, ಜೀವ ವೈವಿಧ್ಯ ಸಂಕುಲಗಳು ಇತ್ಯಾದಿಗಳನ್ನು ಪಟ್ಟಿಮಾಡಿ ಅದರ ಬಳಕೆಯ ಬಗ್ಗೆ ನಮ್ಮಲ್ಲಿನ ಆಯುರ್ವೇದ ವೈದ್ಯ ಪದ್ಧತಿಯ ಆಧಾರದಲ್ಲಿ ಪೇಟೆಂಟ್ ಮಾಡಿಸಲು ಯತ್ನಿಸುವುದು, ಇಲ್ಲಿನ ಅರಣ್ಯ ಸಂಪತ್ತಿನ ಉಳಿವು, ಅಭಿವೃದ್ಧಿ, ಬಳಕೆಗಳ ಬಗ್ಗೆ ನಮ್ಮ ಸರ್ಕಾರವೇ ಒಂದು ಪ್ರತ್ಯೇಕ ಸಂಶೋಧನಾ ಕೇಂದ್ರ ಸ್ಥಾಪನೆಗೆ ಮುಂದಾಗುವುದು, ಮೋಜಿನ ತಾಣ ನಿರ್ಮಾಣಕ್ಕೆ ತಡೆ, ಇದರ ವ್ಯಾಪ್ತಿಯೊಳಗಿನ ಜನರಿಗೆ ಸೂಕ್ತ ಪರಿಹಾರ – ಬದಲೀ ಜಾಗ ನೀಡಿಕೆ – ಸೌಲಭ್ಯ ನೀಡಿಕೆ ಇತ್ಯಾದಿ ಕಲ್ಪಿಸುವುದು, ಗಿರಿಜನ ಸಹಕಾರಿ ಸಂಘಗಳ ಮೂಲಕ ಕೆಲ ಅರಣ್ಯ ಉತ್ಪನ್ನಗಳ ಬಳಕೆಗೆ ಗುತ್ತಿಗೆ ನೀಡಿಕೆ, ದೇಶೀಯ ಆಯುರ್ವೇದ ಕಾಲೇಜು ಆಸ್ಪತ್ರೆಗಳಿಗೆ ಕೆಲ ಜಾಗಗಳನ್ನು ಗುತ್ತಿಗೆ ನೀಡುವುದು ಇತ್ಯಾದಿ ತಾತ್ಕಾಲಿಕವಾಗಿ ನನಗೆ ತಿಳಿದ ಮಟ್ಟಿಗೆ ಜಾಗತಿಕವಲ್ಲದ ಸ್ಥಳೀಯ ಪರ್ಯಾಯಗಳು.

೧೮೫೬ಕ್ಕೂ ಮುನ್ನ ಶೇ. ೬೦ರಷ್ಟಿದ್ದ ಕಾಡು ಅರಣ್ಯ ಇಲಾಖೆಯ ರಚನೆಯ ನಂತರ ಇಂದು ಶೇ. ೧೦ಕ್ಕೆ ಇಳಿದಿದೆ. ಇದಕ್ಕೆ ಅರಣ್ಯ ಇಲಾಖೆಯ ಮೂಲಕ ಸರ್ಕಾರದ ಉಸ್ತುವಾರಿಯೇ ಕಾರಣ ಎಂಬಂತೆ ವಾದ ಮಂಡಿಸಲಾಗಿದೆ. ಆದರೆ ೧೮೫೬ರಿಂದ ಇದುವರೆಗಿನ ೧೪೬ ವರ್ಷಗಳಲ್ಲಿ ಆದ ಜನಸಂಖ್ಯೆ ವೃದ್ಧಿ, ಕೃಷಿ ಭೂಮಿ ಬಳಕೆ, ಹಳ್ಳಿ-ಗ್ರಾಮಗಳ ವೃದ್ಧಿ, ಅರಣ್ಯಾಧಾರಿತ ಕೈಗಾರಿಕಾ ಬೆಳವಣಿಗೆ, ಅಣೆಕಟ್ಟುಗಳು, ಜಲವಿದ್ಯುದಾಗಾರಗಳ ನಿರ್ಮಾಣ, ಜೊತೆಗೆ ವೀರಪ್ಪನ್ ತರಹದವರ ಕಾಡುಗಳ್ಳ ಮಾಫಿಯಾ ಇತ್ಯಾದಿಗಳೂ ಈ ಅರಣ್ಯಗಳ ಕ್ಷೀಣತೆಗೆ ಕಾರಣವೆಂಬ ಸತ್ಯ ಮರೆಮಾಚುವ ಯತ್ನಕ್ಕೆ ಏನೆನ್ನಬೇಕೋ ಗೊತ್ತಿಲ್ಲ.

ಪ್ರಕೃತಿಯ ವಿಕಾಸವೆಂದರೆ ಮನುಕುಲವನ್ನೊಳಗೊಂಡಂತೆ ಜೀವ ವೈವಿಧ್ಯತೆಯ ವಿಕಾಸ ವೆಂದೇ ಅರ್ಥ. ಮಾನವ ಕುಲದ ವಿಕಾಸವಾಗಿರುವುದೇ ಪ್ರಕೃತಿಯ ವೈರುಧ್ಯಗಳ ಜೊತೆಯಲ್ಲಿನ ನಿರಂತರ ಹೋರಾಟದಿಂದ. ತನ್ನ ಇರುವಿಕೆಗೆ ಧಕ್ಕೆ ಬಂದಾಗಲೆಲ್ಲಾ ಮಾನವಕುಲ ಹೊಸ ಮಾರ್ಗಗಳನ್ನು ಕಂಡುಕೊಂಡಿದೆ. ಇದನ್ನೇ ಹಿಂದೆ ಫ್ರೆಡರಿಕ್ ಏಂಗೆಲ್ಸ್ ವಿಕಾಸವಾದದಲ್ಲಿ ಹೇಳಿರುವುದು. ಡಾರ್ವಿನ್ ವಿಕಾಸ ವಾದದ ವೈಜ್ಞಾನಿಕ ವಿಶ್ಲೇಷಣೆ ಇನ್ನೂ ಬದಲಾಗಿಲ್ಲವಾದ್ದರಿಂದ ಬದಲಾವಣೆಯ ಮೂಲನಿಯಮ ಪ್ರಕೃತಿಯಲ್ಲೇ ಇದೆ.

**ರಾಷ್ಟ್ರೀಯ ಉದ್ಯಾನವೇ ಬೇಡ. ಏಕೆಂದರೆ ಅಮೆರಿಕದ ಬಹುರಾಷ್ಟ್ರೀಯ ಕಂಪನಿಗಳಿಗೆ ಅದು ಹೋಗುತ್ತದೆ. ಗಣಿಗಾರಿಕೆ ಕಂಪನಿಯನ್ನು ಮುಂದೆ 'ಬಾಲ್ಕೊ'ದಂತೆ ಜಪಾನ್‌ನ ಖಾಸಗಿ ಕಂಪನಿಗೆ ಮಾರಬಹುದಾದ್ದರಿಂದ ಈ ಗಣಿಗಾರಿಕೆಯನ್ನೇ ಮುಚ್ಚಬೇಕು ಎಂಬಂತಹ ಬೇಡಿಕೆಗಳೇ ಜಾಗತೀಕರಣದ ವಿರುದ್ಧದ ಪರ್ಯಾಯ ಮಾರ್ಗವೆಂದು ಬಿಂಬಿಸುವುದೆಂದು ನಂಬುವುದು ಕೇವಲ ಅರಾಜಕತೆಯ ಸಂಕೇತವಾಗುತ್ತದೆ.**

ಮುಂದಿನ ಪುಟಕ್ಕೆ

# ಒಳಗೆ - ಹೊರಗೆ

ಚಿಕ್ಕಂದಿನಲ್ಲಿ ಹಿರಿಯರು ಹೇಳುತ್ತಿದ್ದ ಕತೆಯೊಂದು ಇಂದಿಗೂ ನನ್ನಲ್ಲಿ ಸ್ವಾರಸ್ಯವನ್ನು ಉಳಿಸಿಕೊಂಡಿದೆ.

ಮಾಬಲಯ್ಯನವರ ಮಗ ಶೇಷಗಿರಿ ಬಹಳೇ ಚುರುಕಾದ ಹುಡುಗ. ಒಮ್ಮೆ ಇವನಿಗೆ ಜೋರು ಜ್ವರ ಬಂತು. ಹುಡುಗ ಉಳಿಯಲಾರ ಎಂಬ ಅನುಮಾನ ಕಾಡಿತು. ಆಗ ಮಾಬಲಯ್ಯ ಅವರ ನಂಬಿಗಸ್ಥ ಜೋತಿಷಿಯಲ್ಲಿ ಜಾತಕ ತೋರಿಸಿದ. ಹುಡುಗನ ಜೀವನದಲ್ಲಿ ಎರಡು ಕಂಟಕಗಳು ಬಲವಾಗಿವೆ. ಈಗ ಹುಡುಗನಿಗೆ ಪ್ರಾಣ ಭಯವೇನೂ ಇಲ್ಲ. ಒಳ್ಳೆಯ ಚಿಕಿತ್ಸೆ ಮಾಡಿ. ಶಾಂತಿಗಾಗಿ ಒಂದು ಗಣಪತಿ ಹೋಮ ಮಾಡಿಸಿ ಅಂದರು. ಮಾಬಲಯ್ಯನಿಗೆ ಒಂದು ರೀತಿಯಲ್ಲಿ ಸಮಾಧಾನ ಆಯಿತು. ಆದರೆ ಎರಡು ಕಂಟಕಗಳು ಅಂದರಲ್ಲಾ, ಎರಡನೇ ಕಂಟಕ ಯಾವ ವರ್ಷದಲ್ಲಿ ಇದ್ದೀತು ? ಆ ಕಂಟಕ ಯಾವ ರೀತಿಯದು ? ಆಗೇನಾದರೂ ಪ್ರಾಣಭಯವಿರಬಹುದೇ ? ಅದಕ್ಕೇನು ಪರಿಹಾರಗಳು ? ಮನದಲ್ಲಿದ್ದ ಎಲ್ಲ ಪ್ರಶ್ನೆಗಳನ್ನೂ ಜೋತಿಷಿಯಲ್ಲಿ ಕೇಳಿದ. ಜೋತಿಷಿಗೆ ಹೇಳಲು ಭಯ. ಹೇಳದೇ ಇದ್ದರೆ ವ್ಯಕ್ತಿಗೆ ಸಮಾಧಾನ ನೀಡಿದಂತಾಗದು. ಮನದಲ್ಲಿ ಹೊಯ್ದಾಟಗಳು ಪ್ರಾರಂಭವಾದರೂ ತಕ್ಷಣ ಹೊಳೆದ ಉಪಾಯವೊಂದನ್ನು ಬಳಸಿ ಸತ್ಯ ಹೇಳಿದ. ಜಾತಕದ ಪ್ರಕಾರ ಶೇಷಗಿರಿ ೩೫ ವರ್ಷ ದಾಟುವುದಿಲ್ಲ. ಹಲಸಿನ ಮರವೊಂದರಿಂದ ನೀರಿಗೆ ಬಿದ್ದು ಸಾಯುತ್ತಾನೆಂದು ಜಾತಕದಿಂದ ತಿಳಿಯುತ್ತದೆ ! – ಹೀಗೆ ಹೇಳಿದರೆ ಹೆತ್ತ ಕರುಳಿಗೆ ಏನಾದೀತು ? ಹೇಳದೇ ಉಳಿದರೆ ತನ್ನ ಕರುಳಲ್ಲೂ ಏನೋ ಕಿವುಚಿದಂತೇ ಅಲ್ಲವೇ ?

''ಜಾತಕ ಹೀಗೆ ಹೇಳುತ್ತದೆ. ನೀವು ತುಂಬಾ ಹುಷಾರಾಗಿರಿ. ೩೫ನೇ ವರ್ಷಕ್ಕೆ ಮೃತ್ಯುಂಜಯ ಜಪ ಮಾಡಿಸಿ. ೩೫ಕ್ಕೆ ಈ ಕಂಟಕ ಕಳೆದನೋ ನಿಮ್ಮ ಮಗ ಶತಾಯುಷಿ. ನೂರು ವರ್ಷ ಬದುಕುತ್ತಾನೆ !'' – ಜೋತಿಷಿ ಹೇಳಿದ ಮಾತಿನಿಂದ ಮಾಬಲಯ್ಯ ಚಿಂತಾಕ್ರಾಂತನಾದರೂ ಹಲಸಿನ ಮರದಿಂದ ನೀರಿಗೆ ಬಿದ್ದು ಸಾಯುವುದು ಕಂಟಕವಲ್ಲವೇ ? ಮಗನನ್ನು ಮನೆಯಿಂದ ಹೊರಗೇ ಕಳಿಸುವುದಿಲ್ಲ. ಅವನು ಮರ ಹತ್ತುವುದೆಲ್ಲಿ ? ನೀರಿಗೆ ಬೀಳುವುದೆಲ್ಲಿ ? ಈ ಕಂಟಕ ಕಳೆದರೆ ಅಥವಾ ದಾಟಿದರೆ ಮಗ ನೂರುಕಾಲ ಬದುಕುತ್ತಾನೆ ಎಂದು ಸಮಾಧಾನಗೊಳ್ಳುತ್ತ ಮಾಬಲಯ್ಯ ಮನೆಯ ಕಡೆ ನಡೆದ. ಕೆರೆ ಏರಿ ದಾಟಿ ಹೋಗುವಾಗ ಗಮನಿಸಿದ. ಏರಿಯಲ್ಲೊಂದು ಹಲಸಿನ ಮರವಿದೆ. ಅದರ ಕೊಂಬೆಗಳು ನೀರಿನ ಮೇಲಿವೆ. ಈ ಊರಿನಲ್ಲಿ ೪೫ ವರ್ಷ ಕಳೆದರೂ ಗಮನಕ್ಕೇ ಬರದ ಈ ಮರ ಇಂದು ತನ್ನ ಗಮನಕ್ಕೆ ಬರಬೇಕೇ ? ಮಾಬಲಯ್ಯ ಯೋಚಿಸುತ್ತಲೇ ಮನೆ ಸೇರಿದ. ಹೆಂಡತಿಗೆ ವಿಷಯ ತಿಳಿಸಿದ. ಅಂದಿನಿಂದಲೇ ಮಗನಿಗೆ ಗೃಹಬಂಧನ ಶುರುವಾಯಿತು. ಮನೆಯೆಂಬ ಭದ್ರಕೋಟೆಯ 'ಒಳಗೇ' ವಾಸ ಮಾಡಬೇಕಾಯಿತು.

ಶೇಷಗಿರಿಗೆ ಬ್ರಹ್ಮೋಪದೇಶವಾಯಿತು. ಬೆಳೆದ. ೩೫ನೇ ವರ್ಷವೂ ಬಂತು. ಮೃತ್ಯುಂಜಯ ಜಪ ಮಾಡಿಸಿದರು. ಮನಸ್ಸು ನಿರಾಳವಾಯಿತು.

ಒಂದು ದಿನ ಶೇಷಗಿರಿ ಸಂಧ್ಯಾವಂದನೆಗೆ ಕೂತಿದ್ದಾನೆ. ಅಲ್ಲೇ ಎಚ್ಚರ ತಪ್ಪಿದಂತಾಯಿತು. ಎದುರಿಗೆ ಹಿತ್ತಾಳೆ ಹರಿವಾಣ (ತಟ್ಟೆ)ದಲ್ಲಿ ನೀರಿತ್ತು. ಅದಕ್ಕೆ ತಲೆ ತಾಗಿತು. ಏನೋ ಸದ್ದಾಯಿತಲ್ಲಾ ಎಂದು ತಾಯಿ ಬಂದು ನೋಡಿದಳು. ಶೇಷಗಿರಿ ಬಿದ್ದಿದ್ದಾನೆ. ಎತ್ತಬೇಕೆಂಬಷ್ಟರಲ್ಲಿ ಪ್ರಾಣಪಕ್ಷಿ ಹಾರಿಹೋಗಿತ್ತು.

ಜೋತಿಷಿ ಹೇಳಿದ್ದು ಹಾಗೆ. ಆದರೆ ಆದದ್ದು ಹೀಗೆ. ಜೋತಿಷ್ಯವೇ ಸುಳ್ಳಾಯಿತೇ ? – ಚರ್ಚೆ ಆರಂಭವಾಯಿತು. ಸುದ್ದಿ ತಿಳಿದ ಜೋತಿಷಿಯೂ ಅಲ್ಲಿಗೆ ಬಂದ. ನಡೆದ ಘಟನೆಯನ್ನು ಸೂಕ್ಷ್ಮವಾಗಿ ಗಮನಿಸಿದ. ''ನೋಡಿ, ಹಲಸಿನ ಮರದಿಂದ ಮಾಡಿದ ಮಣೆಯ ಮೇಲೆ ಶೇಷಗಿರಿ ಕೂತಿದ್ದಾನೆ. ಎದುರಿನ ನೀರಿಗೆ ಅವನ ಹಣೆ ತಾಗಿದೆ. ಹಲಸಿನ ಮರದಿಂದ ನೀರಿಗೆ ಬಿದ್ದು ಸಾಯುವ ಕಂಟಕ ಎಂದು ಹೇಳಿರಲಿಲ್ಲವೇ ? ನೀವು ಮನೆಯಿಂದ 'ಹೊರಗೆ' ಹೋಗದಂತೆ ಎಚ್ಚರವಹಿಸಿದರೂ ಮನೆಯ 'ಒಳಗೇ' ಹೀಗಾಗಿದೆ'' – ಎಂದು ಜೋತಿಷಿ ಹೇಳಿದ.

ಈ ಕತೆ ಸುಳ್ಳು, ನಿಜ ಎಂಬುದಾಗಲೀ, ಜೋತಿಷ್ಯ ಶಾಸ್ತ್ರವನ್ನು ಸಮರ್ಥಿಸುತ್ತದೆ ಎಂಬುದಾಗಲೀ ನನಗಿಲ್ಲಿ ಮುಖ್ಯವಲ್ಲ. ಅಪಘಾತದಿಂದಲೇ ಸಾಯಬೇಕೆಂದು ಹಣೆಬರೆಹ – ವಿಧಿಲಿಖಿತ – ಇದೆ ಅಂದುಕೊಳ್ಳಿ. ವಾಹನವನ್ನೇ ಹತ್ತದೆ, ಮನೆಯೊಳಗೇ ಮಲಗಿದ್ದರೂ ಲಾರಿ ಮನೆಗೆ ತಾಗಿ, ಗೋಡೆ ಬಿದ್ದು ಸಾಯುವುದಿಲ್ಲವೇ ? ಹೆದ್ದಾರಿ ಪಕ್ಕ ಹೀಗಾಗಿದ್ದು ಕೇಳಿದ್ದೇನೆ.

ಹಣೆಬರೆಹ – ವಿಧಿ ಲಿಖಿತ – ಏನಾದರೂ ಕರೆಯೋಣ. ಕೆಲವೊಮ್ಮೆ ಅಂದುಕೊಂಡಂತೆ ಆಗುವುದಿಲ್ಲ. ಮತ್ತೇನೋ ಆಗುತ್ತದೆ. ಯಾವುದೋ ಮನೆಯಲ್ಲಿ ಊಟ ಮಾಡುವಂತಹ ಪ್ರಸಂಗ ಬರುತ್ತದೆ. ಅಲ್ಲಿ ಊಟ ಮಾಡುತ್ತೇವೆ ಎಂದು ಕನಸಲ್ಲೂ ಎಣಿಸಿರುವುದಿಲ್ಲ! ಅನ್ನ ನೀರಿನ ಋಣ ಅಂದುಕೊಳ್ಳುತ್ತೇವೆ. ಹೀಗೆ ಭೇಟಿಯಾಗುವ ಜನಗಳು, ಆಗುವ ಕೆಲಸಗಳು ಏನೇನೋ ಆಕಸ್ಮಿಕಗಳು ಬದುಕಲ್ಲಿ ನಡೆಯುತ್ತವೆ. ಇವನ್ನೆಲ್ಲ ಆಕಸ್ಮಿಕಗಳು ಅನ್ನೋಣವೇ ? ಯೋಗಾಯೋಗ ಅಥವಾ ವಿಧಿಬರಹ ಅನ್ನೋಣವೇ ?

ಸರ್ಪ ಕಚ್ಚಿ ಸಾಯಬಾರದೆಂದು ಭದ್ರಕೋಟೆಯ 'ಒಳಗೆ' ಪರೀಕ್ಷಿತರಾಜ ಹೇಗೆ ಸತ್ತನೆಂಬ ಕತೆಯಿಲ್ಲವೇ ? ಸತ್ತವನು 'ಭದ್ರಕೋಟೆ'ಯ 'ಒಳಗೆ' ಇರಲು ಸಾಧ್ಯವೇ ?

**ಬಂದಗದ್ದೆ ರಾಧಾಕೃಷ್ಣ**
ಕೆಳದಿ ಪೋಸ್ಟ್, ಶಿವಮೊಗ್ಗ - ೫೭೭೪೦೧

---

*ಹಿಂದಿನ ಪುಟದಿಂದ*

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದಾದರೆ ಮಾನವ ಕೋಟಿಯ ಉಳಿವಿಗಾಗಿ ಮನುಷ್ಯ ಪ್ರಕೃತಿಯನ್ನು 'ಉಳಿಸಿಕೊಳ್ಳುವುದು' ಮತ್ತು 'ಬಳಸಿಕೊಳ್ಳುವುದು' ಎರಡೂ ಅನಿವಾರ್ಯ. ಈ ಹಂತದಲ್ಲಿ ಮಾನವನಿಂದ ಪ್ರಕೃತಿಯ ಮೇಲಾಗುವ ಶೋಷಣೆಯಲ್ಲಿ ದುರಾಸೆಯ ಹಿಡಿಮಾನವರಿಂದ ಪ್ರಕೃತಿ ಮತ್ತು ಮಾನವಕುಲದ ಮೇಲಾಗುವ ಶೋಷಣೆ ಹೆಚ್ಚು ಮುಖ್ಯವಾಗುತ್ತದೆ. ಇದನ್ನು ತಪ್ಪಿಸುವಂತಹ ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸಿ ಅದನ್ನು ಕಾಯ್ದುಕೊಳ್ಳಲು ಬೇಕಾದ ಪ್ರಭುತ್ವ ರಚಿಸುವುದು ಅತಿ ಮುಖ್ಯವೆಂಬ ತಿಳುವಳಿಕೆಯೇ ನನ್ನ ಲೇಖನದ ಸೈದ್ಧಾಂತಿಕ ನೆಲೆಗಟ್ಟು.

ಆದರೆ ಈ ದೂರದೃಷ್ಟಿಯ ನಿರ್ಣಾಯಕ ಹೋರಾಟಕ್ಕೆ ''ಕುದುರೆಮುಖ ಗಣಿ - ಉದ್ಯಾನವನ''ಗಳೆರಡರ ಅಧಿಸೂಚನೆ ರದ್ದುಪಡಿಸುವುದು, ಮತ್ತು ಕಬ್ಬಿಣಕ್ಕಾಗಿ ನಾವು ಪರಾವಲಂಬಿಗಳಾಗದಂತಹ ಪರ್ಯಾಯ ಹೇಳದೆ, ಗಣಿ ಮುಚ್ಚುವುದು ಪರಿಹಾರವೆನ್ನುವುದು ಹೇಗೆ ಪ್ರಸ್ತುತವೆನಿಸುತ್ತದೆ? ರಾಷ್ಟ್ರೀಯ ಉದ್ಯಾನವನದ ಅಧಿಸೂಚನೆ ರದ್ದುಪಡಿಸಿದಾಗಲೂ ಸಹ ಬಹುರಾಷ್ಟ್ರೀಯರಿಗೆ ಪರವಾನಗಿ ತಡೆಹಿಡಿಯಲು ಈಗಿನ ಸರ್ಕಾರಗಳು ಸಿದ್ಧವಿವೆಯೆ ?

ಪಶ್ಚಿಮಘಟ್ಟದ ಅಮೂಲ್ಯವಾದ ಈ ಪ್ರದೇಶವನ್ನು ಸೂಕ್ಷ್ಮವಲ್ಲದ ಆದಿವಾಸಿಗಳ ವಾಸಕ್ಕೆ ನೀಡಿರುವ ನಿರುಪಯೋಗಿ ಜಾಗವೆಂದು ನಮ್ಮ ಸರ್ಕಾರ ವಿಶ್ವಸಮುದಾಯಕ್ಕೆ ಹೇಳಿ ಜಾಗತೀಕರಣದಿಂದ ರಕ್ಷಿಸಬಹುದೆಂದು ಪರೋಕ್ಷವಾಗಿ ವಾದಿಸುವುದು ಎಷ್ಟು ಸೂಕ್ತ? ಇದೆಲ್ಲದಕ್ಕೂ ಬದಲಾಗಿ ಇಲ್ಲಿನ ವೈವಿಧ್ಯತೆಗಳನ್ನೆಲ್ಲಾ ನಾವೇ ನಮ್ಮ ಅಭಿವೃದ್ಧಿಗೆ ಬಳಸಿಕೊಳ್ಳಲು ಮುಂದಾಗಬೇಕೆಂದು ಹೋರಾಟ ರೂಪಿಸುವುದು ಹೆಚ್ಚು ವಾಸ್ತವವೆನಿಸುತ್ತದೆ.

ಯಾರೋ ಪರಕೀಯನೊಬ್ಬ ನಿತ್ಯ ತನ್ನ ಮನೆಯಲ್ಲಿ ಬಿಟ್ಟಿ ಕೂಳು ತಿನ್ನುತ್ತಿರುವುದನ್ನು ತಪ್ಪಿಸಲು ಪ್ರತಿಭಟಿಸಿ ಹೋರಾಡುವ ಬದಲು ತನ್ನ ಮನೆಯಲ್ಲಿ ಅಡುಗೆ ಮಾಡುವುದನ್ನೇ ನಿಲ್ಲಿಸಬೇಕೆಂದು ಮುಗ್ಧರಿಗೆ ಬೋಧಿಸುವುದು ಲೆನಿನ್ ಹೇಳಿದಂತೆ ನಮ್ಮನ್ನು ''ವಂಚನೆ ಹಾಗೂ ಆತ್ಮವಂಚನೆಗಳ ಬಲಿಪಶುಗಳನ್ನಾಗಿಸುತ್ತದೆ.''

**ಪಿ. ವಿ. ಲೋಕೇಶ್**
೨ನೇ ತಿರುವು, ಪೆನ್ಷನ್ ಮೊಹಲ್ಲಾ, ಚಿಕ್ಕಮಗಳೂರು-೫೭೭ ೧೦೧

# ಇರುವ–ಇಲ್ಲದ ದೇವರ ಕುರಿತು

ವಿಶ್ವಾರಾಧ್ಯ ಸತ್ಯಂಪೇಟೆ

**ಮ**ನುಷ್ಯನಿಗೆ ಎಂದು ಆಲೋಚನಾ ಶಕ್ತಿ ಬಂದಿತೋ ಅಂದಿನಿಂದ ಇಂದಿನವರೆಗೆ 'ದೇವರ' ಅಸ್ತಿತ್ವವನ್ನು ಕುರಿತು ಚಿಂತಿಸುತ್ತಲೇ ಬಂದಿದ್ದಾನೆ. ಆದರೆ ಈವರೆಗೂ ಇದನ್ನೇ 'ದೇವರ'ೆಂದು ಕರೆಯಬೇಕೆಂದು ಯಾರೂ ಖಚಿತವಾಗಿ ಹೇಳಿಲ್ಲ. ಗುಡಿ - ಗುಂಡಾರ, ಮಸೀದಿ, ಚರ್ಚುಗಳಲ್ಲಿ ಸ್ಥಾಪಿತವಾಗಿರುವ ವಿಗ್ರಹಗಳೇ ದೇವರೆಂದು ವಾದಿಸುವವರ ಗುಂಪು ಹಲವರದಾದರೆ, ಅವೆಲ್ಲವೂ ದೇವರಲ್ಲವೇ ಅಲ್ಲ ಎಂದು ತಿರಸ್ಕರಿಸುವವರದೂ ಒಂದು ಗುಂಪಿದೆ.

ಇದೇನೆ ಇರಲಿ, ಈ ದೇವರು ಹಾಗೂ ಅವನ್ನು ಪೋಷಿಸಿ ಬೆಳೆಸಿಕೊಂಡು ಬರುತ್ತಿರುವ, ಧರ್ಮಗಳನ್ನು ಮುಂದಿಟ್ಟುಕೊಂಡು ಹೊಡೆದಾಡಿ ಸಾಯುವ ಜನಗಳ ಸಂಖ್ಯೆಯಂತೂ ದಿನೇ ದಿನೇ ಬೆಳೆಯುತ್ತಲೇ ಇದೆ. ಈ ರೀತಿಯ ಬೆಳವಣಿಗೆ ನಿಜಕ್ಕೂ ಅಪಾಯಕಾರಕ. ಇದು ಮನುಷ್ಯತ್ವವನ್ನೇ ನುಂಗಿ ನೊಣೆಯಬಲ್ಲ ಪ್ರವಾಹ. ರಾಮಮಂದಿರಕ್ಕಾಗಿ ಎದ್ದಿರುವ ಗಲಾಟೆಯನ್ನೇ ಒಂದು ಉದಾಹರಣೆಯಾಗಿ ತೆಗೆದುಕೊಳ್ಳೋಣ. ಅಯೋಧ್ಯೆಯಲ್ಲಿಯೇ ರಾಮ ಜನಿಸಿದ ಎಂಬುದೊಂದು ಧಾರ್ಮಿಕ ನಂಬಿಕೆ. ಈ ನಂಬಿಕೆಯೊಂದೇ ಐತಿಹಾಸಿಕ ಸತ್ಯವಾಗಿರಲಾರದು. ಆದರೆ ಇದನ್ನೇ ನೆಚ್ಚಿಕೊಂಡ ಅಂಥ ಜನಗಳ ಗುಂಪೊಂದು ಈಗ ದೇಶದ ಉದ್ದಗಲಕ್ಕೂ ಎಬ್ಬಿಸಿರುವ ದಾಂಧಲೆ ಸಣ್ಣದೇನಲ್ಲ. ಈ ಕಾರಣಕ್ಕಾಗಿಯೇ ಅಯೋಧ್ಯೆಯಲ್ಲಿ ಬಾಬರಿ ಮಸೀದಿಯನ್ನು ಧ್ವಂಸಮಾಡಿ ಆ ಜಾಗದಲ್ಲಿ ರಾಮ ಮಂದಿರ ಕಟ್ಟಲು ಮುಂದಾಗಿದ್ದಾರೆ. ಇದಕ್ಕಾಗಿ ಇಟ್ಟಂಗಿಗಳನ್ನು ದೇಶದ ಉದ್ದಗಲಕ್ಕೂ ಮೆರೆಸುತ್ತ ತಂದು ಕೋಮು ದಳ್ಳುರಿಯನ್ನು ವಿಧ್ಯುಕ್ತವಾಗಿ ಉದ್ಘಾಟಿಸಿದ್ದಾರೆ. ವಿವಾದಿತ ಜಾಗದಲ್ಲಿ ರಾಮ ಮಂದಿರಕ್ಕೆ ಶಿಲಾನ್ಯಾಸ ಮಾಡುವ ನೆಪದಲ್ಲಿ ಮತ್ತೆ ಮತ್ತೆ ಜಾತ್ಯಂಧತೆಯ ಬೆಂಕಿಗೆ ಗಾಳಿ ಹಾಕಿದ್ದಾರೆ. ಹಾಗಾಗಿಯೆ ಗುಜರಾತ್ ಇಂದಿಗೂ ನಿಗಿ ನಿಗಿ ಕೆಂಡವಾಗಿದೆ. ನಿಜವಾಗಿ ಹೇಳ ಬೇಕೆಂದರೆ ಹಿಂದೂ-ಮುಸ್ಲಿಂ ಎಂಬ ಧರ್ಮಾಂಧರ ಮನಸ್ಸುಗಳು ಈಗ ಅಕ್ಷರಶಃ ಬೂದಿ ಮುಚ್ಚಿದ ಕೆಂಡವಾಗಿವೆ. ಇವು ಎಂದು ಎಲ್ಲಿ ಹೇಗೆ ಹೊತ್ತಿ ಉರಿಯುತ್ತವೋ ಹೇಳಲಾಗದು.

ಆದರೆ ಪುರೋಹಿತಶಾಹಿಯ ಈ ಜನಗಳೇ ಹೇಳುವಂತೆ, ದೇವರು ಸರ್ವಾಂತ ರ್ಯಾಮಿ ಎಂಬ ಉಲ್ಲೇಖಗಳಿವೆ. ಆತ ಜಗತ್ತಿನ ಸಚರಾಚರ ವಸ್ತುಗಳಲ್ಲೂ ಅಡಗಿದ್ದಾನೆ. ಆತನ ಅಪ್ಪಣೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗಾಡದು ಎಂದೆಲ್ಲ ಅದರಲ್ಲಿ ಹೇಳಲಾಗಿದೆ. ಹಾಗಿದ್ದ ಬಳಿಕ ಈ ಬಾಬರಿ ಮಸೀದಿಯಲ್ಲೂ ಅವರ ಸರ್ವಾಂತರ್ಯಾಮಿ ರಾಮ (ದೇವರು) ಇದ್ದಿರಲಾರನೆ? ಆ ಮಸೀದಿಯನ್ನು ಬೀಳಿಸುವಾಗ ಅಲ್ಲಿರುವ ರಾಮನನ್ನೂ ಕೆಡಹುತ್ತಿದ್ದೇವೆಂದು ಈ ಜನ ಅರಿಯಲಿಲ್ಲವೇಕೆ? ಅನ್ಯ ಧರ್ಮೀಯ ಜನಗಳ ಮೇಲೆ ಅತ್ಯಾಚಾರವೆಸಗುವಾಗ, ಜೀವಂತ ದಹನ ಮಾಡುವಾಗ ಅವರೊಳಗೂ ಅಡಗಿರಬಹುದಾದ ರಾಮ (ಅಲ್ಲಾ)ನ ಮೇಲೆಯೆ ನಾವು ದೌರ್ಜನ್ಯ ವೆಸಗುತ್ತಿದ್ದೇವೆಂದು ಭಾವಿಸಲಿಲ್ಲವೇಕೆ? 'ದೇವರ ಅಪ್ಪಣೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲುಗುವುದಿಲ್ಲ' ಎಂಬ ಇವರ ಮೂರ್ಖ ಹೇಳಿಕೆಯನ್ನೇ ಒಪ್ಪುವುದಾದರೆ; ಹಿಂದೆ ಬಾಬರಿ ಮಸೀದಿಯನ್ನೂ ಆ ದೇವರೆ ಕಟ್ಟಿಸಿದ ಎಂದರ್ಥವಲ್ಲವೆ? ಆತ ಕಟ್ಟಿಸಿದ ಮಸೀದಿ ಈಗ ಆತನಿಗೆ ಬೇಡವಾಯ್ತೆ? ಹಾಗಾದರೆ ಅದನ್ನು ಕೆಡವಲು ಪ್ರೇರೇಪಿಸಿದವನು ದೇವರೇ ಎಂದೆನ್ನಬಹುದೆ ? ಈ ಕಾರಣಕ್ಕಾಗಿ ದೇಶದ ಬಹುತೇಕ ಹಿಂದು-ಮುಸ್ಲಿಂರ ಮನಸ್ಸುಗಳು ಅನಾರೋಗ್ಯಕ್ಕೆ ಈಡಾಗಿವೆ. ಮಾಡ ಬಾರದ ಪಾತಕ ಕೆಲಸಗಳನ್ನೆಲ್ಲ ಅವು ಮಾಡುತ್ತಿವೆ. ಇದಕ್ಕೆಲ್ಲ ದೇವರ ಅನುಗ್ರಹ ಇದೆ ಎಂದಾದರೆ ಅಂಥ ದೇವರನ್ನು ಕರುಣಾಮಯಿ ಎಂದೆನ್ನಬಹುದೆ ?

ದೇವರು ನಿರಾಕಾರ, ನಿರ್ಗುಣ, ನಿರ್ವಾಣಿ, ಆದಿ, ಅನಂತ, ಅವರ್ಣನೀಯ, ಅಸದೃಶ... ಮುಂತಾಗಿ ಆತನನ್ನು ಬಣ್ಣಿಸುವ ಅವಿವೇಕಿಗಳೇ ಆತನಿಗೆ ಅನೇಕಾನೇಕ ರೂಪಗಳನ್ನು ಕಲ್ಪಿಸಿದ್ದಾರೆ. ದೇವರು ನಿಷ್ಕಾಮಿ ಎನ್ನುವ ಈ ಹೆಡ್ಡ ಜನಗಳೇ ಆತನಿಗೆ ಊಟ, ತಿಂಡಿ, ಮಕ್ಕಳು - ಮರಿಗಳು ಹೆಂಡಂದಿರು ಹಾಗೂ ವೇಶ್ಯೆಯರನ್ನೂ ಇಟ್ಟಿದ್ದಾರೆ ! ದೇವರು ಯೋಗ್ಯ ನ್ಯಾಯಾಧೀಶ ಎಂದು ಹೇಳುವ ಈ ಪುರೋಹಿತಶಾಹಿ ಜನಗಳೇ ದೇವರು ಇಂಥವಳನ್ನು ಕೆಡಿಸಿದನು, ಅವನ ಹೆಂಡತಿಯನ್ನು ಕೂಡಿದನು, ಇಂಥಾದ್ದನ್ನು ಕದ್ದನು, ಇಂಥವನನ್ನು ಮೋಸದಿಂದ ಕೊಂದನು ಎಂದು ಕಥೆ ಕಟ್ಟಿ ಹೇಳಿ ಆ ದಿನಗಳಲ್ಲಿ ಹಬ್ಬ-ಹರಿದಿನಗಳನ್ನು ಆಚರಿಸುವಂತೆ ಮಾಡಿದ್ದಾರೆ.

ಯಾವ ವ್ಯಕ್ತಿಯೇ ಆಗಲಿ, ದೇವರೆ ಇರಲಿ, ಆತನನ್ನು ನಮ್ಮ ಆದರ್ಶ ಪುರುಷ ಎಂದು ಕರೆಯುತ್ತೇವೆಂದ ಮೇಲೆ ಆತನಲ್ಲಿ ನಮ್ಮಲ್ಲಿರದ ವಿಶೇಷ ಮೌಲ್ಯಗಳೂ, ಉನ್ನತ ವ್ಯಕ್ತಿತ್ವವೂ ಹಾಗೂ ವಿಶಾಲ ಗುಣವೂ ಇರಬೇಕಾಗುತ್ತದೆ. ಇಂಥವನನ್ನು ನಮ್ಮ ಆದರ್ಶ ವ್ಯಕ್ತಿಯೆಂದು ಕರೆದರೆ ತಪ್ಪಿಲ್ಲ. ಆದರೆ ಈ ಆದರ್ಶ ಗುಣಗಳೂ, ಉದಾತ್ತ ವ್ಯಕ್ತಿತ್ವವೂ ದೇವರುಗಳಲ್ಲಿ ಇವೆಯೆ ? ಈ ದೇವರುಗಳ ಒಂದೊಂದು ಕಥೆಯನ್ನು ಕೇಳುತ್ತ ಹೋದರೆ ಅವುಗಳ ಬಗ್ಗೆ ತೀರಾ ಜುಗುಪ್ಸೆಯೂ, ಹೇವರಿಕೆಯೂ ಒಮ್ಮೆಲೆ ಉಂಟಾಗುತ್ತದೆ. ಇಂಥ ದೇವರುಗಳೇ ನಮ್ಮ ಆರಾಧ್ಯ ದೈವವಾದಾಗ ಅವುಗಳ ಗುಣಗಳು ನಮ್ಮಲ್ಲೂ ಹರಿದು ಬರುವುದಿಲ್ಲವೆ ? ಬಂದರೆ ಅದು ಸರಿಯೆ ? ಮನುಷ್ಯನಲ್ಲಿ ನೀಚತ್ವವನ್ನು, ದ್ರೋಹವನ್ನು ಹಾಗೂ ವಿಷಯ ಲಂಪಟತ್ವವನ್ನೂ ಬೆಳೆಸುವ ಈ ದೇವರುಗಳು ನಮಗೆ ಬೇಕೆ ?

ಹೀಗೆಲ್ಲ ವಿಚಾರಿಸಿ ನೋಡಿದರೆ ಇಂಥ ದೇವರುಗಳಿಗಾಗಿ ಗುಡಿ-ಗುಂಡಾರ, ಮಸೀದಿ, ಚರ್ಚುಗಳನ್ನು ಕಟ್ಟುವುದೇ ಮೂಲತಃ ತಪ್ಪು. ಅಯೋಗ್ಯರು, ಹೆಡ್ಡರು, ಸೋಮಾರಿಗಳೂ ಆದ ಪುರೋಹಿತಶಾಹಿ ಜನಗಳು ಮಾತ್ರ ದೇವಾಲಯ ನಿರ್ಮಿಸಿ, ಮಸೀದಿಗಳನ್ನು ಕಟ್ಟಿ, ಚರ್ಚುಗಳನ್ನು ನಿಲ್ಲಿಸಿರಿ ಎಂದು ಹೇಳುತ್ತಾರೆ. ದೇವರ ಹೆಸರು ಹೇಳುತ್ತ ಜನರಲ್ಲಿ ಭಯವನ್ನು, ಮೂಢ ಆಚರಣೆಗಳನ್ನೂ ತುಂಬಿ ಜನರನ್ನು ಶೋಷಿಸುತ್ತಾರೆ. ಸಾಮಾನ್ಯ ಜನಗಳಿಗೆ ಅರ್ಥವಾಗದ ಸತ್ತ ಭಾಷೆ (ದೇವಭಾಷೆ?)ಯಲ್ಲಿ ಮಂತ್ರಗಳನ್ನು ಪಠಿಸುತ್ತ ಬೆರಗುಗೊಳಿಸಿ ಅವರ ಬುದ್ಧಿಯ ಮೇಲೆ ಕಲ್ಲು ಚಪ್ಪಡಿ ಎಳೆದುಬಿಟ್ಟಿದ್ದಾರೆ. ಈ ಮಂತ್ರಗಳಾದರೂ ಹೇಗಿವೆ ಎಂದರೆ ಅವನ್ನು ಅಪ್ಪಿ ತಪ್ಪಿ ಪುರೋಹಿತನಾದವನು ಕನ್ನಡೀಕರಿಸಿ ಹೇಳಿಬಿಟ್ಟರೆ ಅಲ್ಲೇ ಅವನಿಗೆ ಚಪ್ಪಲಿಯ ಮಂಗಳಾರತಿ ಸಲ್ಲುತ್ತದೆ ! ಇನ್ನು ಅವರು ನಂಬಿಸಿರುವ ಒಬ್ಬೊಬ್ಬ ದೇವರುಗಳ ಮುಖಗಳನ್ನು ಸರಿಯಾಗಿ ಗಮನಿಸಿ, ಅವುಗಳನ್ನು ನೋಡುತ್ತಿದ್ದಂತೆಯೇ ಆ ಚಿತ್ರಗಳನ್ನು ರೇಖಿಸಿದವನ ಹೆಂಡತಿಯ, ಮಗಳ, ಪ್ರೇಯಸಿಯ, ಅಥವಾ ಗೆಳೆಯ-ಗೆಳತಿಯರ ಮುಖ ಕಾಣಸುತ್ತದೆ.

ಈ ಪುರೋಹಿತಶಾಹಿ ಜನಗಳು ಇನ್ನೂ ಎಂಥೆಂಥ ಅಧ್ವಾನ ಸಂಗತಿಗಳನ್ನು ನಮ್ಮ ಮುಂದೆ ಹರಡಿದ್ದಾರೆಂದರೆ, ಅವು ನಮ್ಮನ್ನು ಮೋಸಗೊಳಿಸಬಲ್ಲ ತಂತ್ರಗಳೆಂದು ನಮಗೆ ತಿಳಿಯುವುದೇ ಇಲ್ಲ. ೧) ಹಿಂದಿನ ಜನ್ಮದ ಕರ್ಮಾನುಸಾರ ಮನುಷ್ಯ ಈ ಜನ್ಮದಲ್ಲಿ ಸುಖ ದುಃಖಗಳನ್ನು ಪಡೆಯುತ್ತಾನೆ. ೨) ಈ ಜನ್ಮದಲ್ಲಿ ಜಾತಿ-ನಿಯಮಗಳು ಅಂದರೆ ಮನುಷ್ಯರೆಲ್ಲರೂ ಒಂದೇ ಅಲ್ಲ; ಅವನ ಜಾತಿ ನಿರ್ಧಾರವಾಗುವುದು-ಹಿಂದಿನ ಜನ್ಮದ ಕರ್ಮಫಲದಿಂದ ಮಾತ್ರ. ೩) ಜೀವನವೇ ಒಂದು ಮಾಯೆ ಇಲ್ಲಿರುವುದೆಲ್ಲವೂ ಸುಳ್ಳು, ಪರವೊಂದೇ ಸತ್ಯ. ಇದರಿಂದ ಮುಕ್ತನಾಗುವುದೇ ಮನುಷ್ಯ ಜನ್ಮದ ಮುಖ್ಯ ಗುರಿ – ಎಂದು ಮುಂತಾಗಿ ಸಾರಿಕೊಂಡು

*ಯಾವ ವ್ಯಕ್ತಿಯೇ ಆಗಲಿ, ದೇವರೆ ಇರಲಿ , ಆತನನ್ನು ನಮ್ಮ ಆದರ್ಶ ಪುರುಷ ಎಂದು ಕರೆಯುತ್ತೇವೆಂದ ಮೇಲೆ ಆತನಲ್ಲಿ ನಮ್ಮಲ್ಲಿರದ ವಿಶೇಷ ಮೌಲ್ಯಗಳೂ, ಉನ್ನತ ವ್ಯಕ್ತಿತ್ವವೂ ಹಾಗೂ ವಿಶಾಲ ಗುಣವೂ ಇರಬೇಕಾಗುತ್ತದೆ. ಇಂಥವನನ್ನು ನಮ್ಮ ಆದರ್ಶ ವ್ಯಕ್ತಿಯೆಂದು ಕರೆದರೆ ತಪ್ಪಿಲ್ಲ. ಆದರೆ ಈ ಆದರ್ಶ ಗುಣಗಳೂ, ಉದಾತ್ತ ವ್ಯಕ್ತಿತ್ವವೂ ದೇವರುಗಳಲ್ಲಿ ಇದೆಯೆ ? ಈ ದೇವರುಗಳ ಒಂದೊಂದು ಕಥೆಯನ್ನು ಕೇಳುತ್ತ ಹೋದರೆ ಅವುಗಳ ಬಗ್ಗೆ ತೀರಾ ಜುಗುಪ್ಸೆಯೂ, ಹೇವರಿಕೆಯೂ ಒಮ್ಮೆಲೇ ಉಂಟಾಗುತ್ತದೆ. ಇಂಥ ದೇವರುಗಳೇ ನಮ್ಮ ಆರಾಧ್ಯ ದೈವವಾದಾಗ ಅವುಗಳ ಗುಣಗಳು ನಮ್ಮಲ್ಲೂ ಹರಿದು ಬರುವುದಿಲ್ಲವೆ? ಬಂದರೆ ಅದು ಸರಿಯೆ ? ಮನುಷ್ಯನಲ್ಲಿ ನೀಚತ್ವವನ್ನು , ದ್ರೋಹವನ್ನು ಹಾಗೂ ವಿಷಯಲಂಪಟತ್ವವನ್ನೂ ಬೆಳೆಸುವ ಈ ದೇವರುಗಳು ನಮಗೆ ಬೇಕೆ ?*

ಬರಲಾಗುತ್ತದೆ. ಇಂಥ ಅರ್ಥಹೀನ ಮಾತುಗಳ ಮೂಲಕವೇ ಮನುಷ್ಯನ ವಿಚಾರಶಕ್ತಿಯನ್ನು ನಾಶ ಮಾಡಿ, ಈ ಕುರಿತು ಯೋಚಿಸುವುದೇ ಪಾಪ ಕೃತ್ಯ ಎಂದು ಹೇಳಿಕೊಂಡು ಬರುತ್ತಾರೆ. ಇದರಿಂದಾಗಿಯೇ ಪುರೋಹಿತಶಾಹಿಯ ತಂತ್ರಗಳು ಈ ನಾಡಿನಲ್ಲಿ ಮತ್ತೆ-ಮತ್ತೆ ವಿಜೃಂಭಿಸುತ್ತವೆ.

ಪುರೋಹಿತಶಾಹಿ ಜನಗಳ ಈ ಎಲ್ಲಾ ಅಸಂಗತದ ಹಿನ್ನೆಲೆಯನ್ನು ಸರಿಯಾಗಿ ಗ್ರಹಿಸಿಕೊಂಡ ಬುದ್ಧ ಮೊತ್ತ ಮೊದಲು ಇವರ ವಿರುದ್ಧ ಧ್ವನಿ ಎತ್ತಿದ. ಬುದ್ಧನ ಧ್ವನಿ ಇನ್ನೇನು ಎಲ್ಲಾ ಕಡೆ ಪ್ರತಿಧ್ವನಿಸಿತು ಎನ್ನುವಾಗಲೇ ವೈದಿಕಶಾಹಿ ಮತ್ತೆ ಆತನನ್ನು ನುಂಗಿ ಕುಂತಿತು. ನಾಗಾರ್ಜುನ ಕೊಂಡಾ ಎಂಬ ಪ್ರದೇಶದಲ್ಲಂತೂ ಬುದ್ಧನ ಅನುಯಾಯಿಗಳನ್ನು ನಿರ್ದಯವಾಗಿ ಕೊಲೆ ಮಾಡಲಾಯಿತು. ತಮಾಷೆ ಎಂಥದೆಂದರೆ ಇತಿಹಾಸದಲ್ಲಿ ಇದನ್ನು ಯಾರೂ ಉಲ್ಲೇಖಿಸುವ ಗೋಜಿಗೇ ಹೋಗುವುದಿಲ್ಲ. ಬದಲಾಗಿ ನಾಗಾರ್ಜುನಕೊಂಡಾ ಪ್ರದೇಶದಲ್ಲಿ ನಡೆದ ಬರ್ಬರ ಕೃತ್ಯವೆಸಗಲು ಪ್ರೇರೇಪಣೆ ಮಾಡಿದ ವ್ಯಕ್ತಿಯೊಬ್ಬನನ್ನು ಮಹಾಪುರುಷ ಎಂದು ಕೊಂಡಾಡಲಾಗುತ್ತದೆ. ಹಾಗಾಗಿ ಬುದ್ಧನ ತತ್ವಗಳನ್ನೆಲ್ಲ, ನಿಸ್ಸತ್ವಗೊಳಿಸಿ, ಇಲ್ಲಿಂದ ದೂರದ ಯಾವುದೋ ದೇಶಕ್ಕೆ ರಫ್ತು ಮಾಡಲಾಯಿತು. ಬುದ್ಧನ ತರುವಾಯ ಬಂದ ಬಸವಣ್ಣ ಮಾತ್ರ ಬಹು ಎಚ್ಚರಿಕೆಯ ಹೆಜ್ಜೆಗಳನ್ನಿರಿಸುತ್ತ ಹೋದ. ಬುದ್ಧ ಮಾಡಿದ ತಪ್ಪುಗಳನ್ನೇ ಬಸವಣ್ಣ ಮತ್ತೆ ಮಾಡಲು ಮುಂದಾಗಲಿಲ್ಲ. ದೇವರು, ಧರ್ಮ, ಮೂಢನಂಬಿಕೆ ಕಂದಾಚಾರ ಇವೆಲ್ಲವುಗಳಿಗೆ ಪುರೋಹಿತಶಾಹಿಯೇ ಮೂಲ ಎಂದರಿತ ಬಸವಣ್ಣ ಜಾಣತನದಿಂದ ವ್ಯವಸ್ಥೆಯ ಒಂದೊಂದೇ ಕಲ್ಲುಗಳನ್ನು ತೆಗೆಯುತ್ತ ನಡೆದ. ಬಸವಣ್ಣನಿಗೆ ಚೆನ್ನಾಗಿ ಗೊತ್ತಿತ್ತು, ಜನರ ಮನಸ್ಸುಗಳನ್ನು ಚೆನ್ನಾಗಿ ತೊಳೆದು ಅಲ್ಲಿ ವಿಚಾರದ ಬತ್ತಿ ಹಚ್ಚಿದರೆ ಸಾಕು ಅಲ್ಲಿ ಇನ್ನೊಂದು ಕತ್ತಲು ಬೀಳಲಾರದೆಂದು.

*ಉಳ್ಳವರು ಶಿವಾಲಯ ಮಾಡುವರು*
*ನಾನೇನ ಮಾಡಲಿ ? ಬಡವನಯ್ಯಾ*
*ಎನ್ನ ಕಾಲೇ ಕಂಬ, ದೇಹವೇ ದೇಗುಲ,*
*ಶಿರ ಹೊನ್ನ ಕಳಸವಯ್ಯಾ -*

ಎಂದು ಹೇಳುತ್ತ ದೇಹವನ್ನೇ ದೇವಾಲಯ ಎಂದು ಕರೆದ. ಸ್ಥಾವರ ದೇವಾಲಯಗಳ ಅಸ್ತಿತ್ವವನ್ನೆ ಅಲ್ಲಗಳೆದ. ದೇಹ ದೇವಾಲಯವನ್ನು ಸ್ವಚ್ಛವಾಗಿರಿಸಿಕೊಳ್ಳುವುದು ನಮ್ಮ ನಿಮ್ಮೆಲ್ಲರ ಕರ್ತವ್ಯ ಎಂದು ಒತ್ತಿ ಹೇಳಿದ. ಕಾಯಕದಿಂದ ಮಾತ್ರ ನಮ್ಮ ತನು-ಮನ, ಧನಗಳು ಶುದ್ಧವಾಗಿರಲು ಸಾಧ್ಯ. ಗುರುಲಿಂಗ ಜಂಗಮವಾದರೂ ಕಾಯಕದಿಂದಲೇ ಮುಕ್ತಿ ಎಂದು ಕಾಯಕದ ಮಹತ್ವವನ್ನು ತಿಳಿಸಿದ. ತನು-ಮನ-ಧನಗಳು ಲಿಂಗಾರ್ಪಿತವೆಂದು ಮಾಡುವ ಸತ್ಯ-ಶುದ್ಧ ಕಾಯಕದಲ್ಲೇ ಜಂಗಮವಡಗಿದೆ. ಇದಕ್ಕೆ ಅಳಿವೆಂಬುದೇ ಇಲ್ಲ. ಅಳಿವಿರುವುದು ಸ್ಥಾವರಕ್ಕೆ ಮಾತ್ರ ಎಂದು ಹೇಳಿ - ಗುಡಿ ಗುಂಡಾರಗಳಿಗೆ ಹೋಗಿ ವ್ಯರ್ಥ ಸಮಯ ಹಾಳು ಮಾಡುತ್ತಿರುವುದನ್ನು, ಪುರೋಹಿತರ ಕಪಿಮುಷ್ಠಿಯಿಂದಲೂ ಏಕ ಕಾಲಕ್ಕೆ ಬಸವಣ್ಣ ಜನತೆಯನ್ನು ಪಾರು ಮಾಡಿದ.

ಯಾವುದರ ಬಗ್ಗೆಯೂ ಯೋಚಿಸುವುದೇ ಪಾಪ ಎಂದು ಪರಿಭಾವಿಸಿಕೊಂಡು ಬರಲಾಗಿತ್ತೋ, ಅದರ ಬಗ್ಗೆಯೇ ಬಸವಣ್ಣನವರು ಬಹು ತೀಕ್ಷ್ಣವಾಗಿ ಸ್ಫೋಟಿಸಿದರು. ಅವರ ಒಂದೊಂದು ಮಾತುಗಳು ವ್ಯವಸ್ಥೆಯ




ಬುಡಕ್ಕೆ ಹಾಕಿದ ಕೊಡಲಿಯ ಪೆಟ್ಟಿನಂತೆ ಇವೆ.

*ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ*
*ತರ್ಕದ ಬೆನ್ನ ಬಾರನೆತ್ತುವೆ*
*ಆಗಮದ ಮೂಗ ಕೊಯ್ಯುವೆ*

ಎನ್ನುವ ಧೀರ ಮಾತುಗಳನ್ನಾಡುವ ಮೂಲಕ ವೇದಗಳ ಬಗ್ಗೆ ಜನರ ಕಣ್ತೆರೆಸಿದರು. ಜನರು ಕ್ರಮೇಣ ಆಲೋಚಿಸಲು ತೊಡಗಿರುವಂತೆಯೇ ಅವರಿಗೆ

*ತನ್ನಾಶ್ರಯದ ರತಿಸುಖವನ್ನು ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲು ಮಾಡಿಸಬಹುದೆ ?*

ಎಂಬ ಮರ್ಮಕ್ಕೆ ತಗುಲುವ, ಸ್ವಾಭಿಮಾನವನ್ನು ಕೆರಳಿಸುವ ಮಾತುಗಳನ್ನಾಡಿ ಎಚ್ಚರಿಸಿದರು.

*ಏನಯ್ಯ ವಿಪ್ರರು ನುಡಿದಂತೆ ನಡೆಯರು*
*ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ!*

ಎನ್ನುತ್ತ ಪುರೋಹಿತಶಾಹಿ ಜನಗಳ ಮುಖವಾಡಗಳನ್ನು ಒಂದೊಂದಾಗಿಯೇ ಬತ್ತಲುಗೊಳಿಸಿದರು.

ಈ ಮೇಲಿನ ಎಲ್ಲಾ ಕೆಲಸವನ್ನು ಬಸವಣ್ಣವರಷ್ಟೆ ಮಾಡಲಿಲ್ಲ. ಬಹುಶಃ ಇವರೊಬ್ಬರೇ ಮಾಡಿದ್ದರೆ ಕೆಲವೇ ದಿನಗಳಲ್ಲಿ ನಾಶಗೊಂಡ ಬುದ್ಧನಂತೆ ಇವರು ಹೇಳ ಹೆಸರಿಲ್ಲದಾಗುತ್ತಿದ್ದರು. ಪುರೋಹಿತಶಾಹಿ ಜನಗಳ ವಿರುದ್ಧದ ಇವರ ತತ್ವಗಳು ಗಾಳಿಯಲ್ಲಿ ಗಾಳಿಯಾಗಿ ಹೋಗುತ್ತಿದ್ದವಷ್ಟೆ. ಬುದ್ಧನ ಪತನದ ಹಿನ್ನೆಲೆಯನ್ನು ಬಸವಣ್ಣನವರು ಸರಿಯಾಗಿ ಗ್ರಹಿಸಿದ್ದರಿಂದ ತನ್ನ ಅನುಯಾಯಿಗಳನ್ನು ಬರೀ ಪ್ರತಿಧ್ವನಿಗಳನ್ನಾಗಿಸಲಿಲ್ಲ. ಅಂಬಿಗರ ಚೌಡಯ್ಯ, ಮಡಿವಾಳ ಮಾಚಿದೇವ, ಸೊನ್ನಲಿಗೆಯ ಸಿದ್ಧರಾಮ, ಚೆನ್ನಬಸವಣ್ಣ, ಮುಂತಾದವರೆಲ್ಲ ಪ್ರತಿ ಬಸವಣ್ಣನವರಂತಾಗಿಯೇ ಕೆಲಸ ಮಾಡಿದರು. ಹಾಗಾಗಿಯೇ ಬಸವಣ್ಣನವರು ತಮ್ಮ ಚಳುವಳಿಯನ್ನು ಯಶಸ್ವಿಯಾಗಿ ನಡೆಸಿದರು ಎಂದು ಹೇಳಬಹುದು.

ಸ್ವಾತಂತ್ರ್ಯವೇ ತನ್ನ ಜೀವನದ ಉಸಿರೆಂದು ಬಗೆದಿದ್ದ ಗಾಂಧೀಜಿ ದೇವರು-ಧರ್ಮಗಳ ಬಗ್ಗೆ ಅಷ್ಟೊಂದು ನಿಖರವಾಗಿ ಆಲೋಚಿಸಲಿಲ್ಲ. ಗಾಂಧೀಜಿ ನಂಬಿ ಕೊಂಡಿದ್ದ ಧರ್ಮ ಯಾರನ್ನೂ, ಯಾವ ಕಾಲಕ್ಕೂ ಮೋಸಗೊಳಿಸುವಂಥದಾಗಿರಲಿಲ್ಲ. ಹಾಗೂ ಆತನ ದೇವರು - ಅಮೂರ್ತವಾದ, ಯಾರ ಕಣ್ಣಿಗೂ ಕಾಣಿಸದ, ಅನುಭವಕ್ಕೆ ಮಾತ್ರ ವೇದ್ಯವಾಗುವ 'ಸತ್ಯ'ವೇ ಆತನ ದೇವರಾಗಿತ್ತು. ಅಲ್ಲದೆ ಆತ ತನ್ನ ಜೀವಿತದ ಕೊನೆಯವರೆಗೂ ದೇವರನ್ನರಸಿ ಯಾವ ಗುಡಿ, ಗುಂಡಾರ, ಚರ್ಚುಗಳಿಗೆ ಹೋಗಲಿಲ್ಲ ಎಂಬ ಸಂಗತಿ ಗಮನಾರ್ಹವಾದುದು. ಗಾಂಧೀಜಿ ತನ್ನ ದೇವರನ್ನು ಹುಡುಕಿದ್ದು, ಕಂಡದ್ದು ಜನ ಜಂಗುಳಿಯ ನಡುವೆ. ಯಾರೂ ಇಲ್ಲದ ಯಾವುದೋ ಏಕಾಂತದಲ್ಲಿ ಅಲ್ಲ, ಬಸವಣ್ಣನವರು ಕಂಡ ಎಂದಿನ ಏಕಾಂತದಲ್ಲೇ.

ಯಾವ ದೇವರೇ ಆಗಲಿ, ಧರ್ಮವೇ ಇರಲಿ ಅದೆಂದೂ ತನ್ನ ಅಸ್ತಿತ್ವ ಉಳಿಸಿ ಎಂದು ಯಾರಲ್ಲೂ ಅಂಗಲಾಚಿ ಬೇಡಿರಲಾರದು. ಒಂದು ವೇಳೆ ಬೇಡಿದ್ದರೆ ಅದನ್ನೊಂದು ದೇವರು ಎಂದು ಕರೆಯಬೇಕೆಕೆ ? ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ದಿನ ನಿತ್ಯ ಭಕ್ತರಿಂದ ರಕ್ತದೋಕುಳಿ ಮಾಡಿಸಿಕೊಳ್ಳುತ್ತ ಮೂಕ ಸಾಕ್ಷಿಯಾಗಿ ನಿಂತಿರುವ ದೇವರನ್ನು ದೇವರೆಂದಾದರೂ ಹೇಗೆ ಕರೆಯುವುದು ?

ದೇವರು-ಧರ್ಮಗಳು ಪರಸ್ಪರ ವ್ಯಕ್ತಿಯ ನಡುವೆ ಸಾಮರಸ್ಯ ಬೆಳೆಸಲು ಸೇತುವೆಗಳಾಗಬೇಕಿತ್ತು. ಮುರಿದ ಮನಸ್ಸುಗಳನ್ನು ಕೂಡಿಸುವ, ನಿರಾಶಾವಾದಿಗಳಲ್ಲಿ ಆಶಾವಾದದ ಛಲ ತುಂಬುವ ಚೇತನಗಳಾಗಬೇಕಿತ್ತು. ಆದರೆ ಇಂದು ಇವುಗಳು ನಮಗೆ ಬೋಧಿಸುತ್ತಿರುವುದೇನನ್ನು ? ದೇವರು ಹೇಳಿದ್ದು ಎಂದು ಹೇಳುವ ದೈವಾಂಶ ಸಂಭೂತ (ಪುರೋಹಿತಶಾಹಿ) ರಿಂದಲೇ ಇಂದು ಜನರ ಮನಸ್ಸುಗಳು ಒಡೆದುಹೋಗುತ್ತಿವೆ. ವಿಷ ಕಕ್ಕುತ್ತಿವೆ. ತನ್ನ ಹೆಸರಿನ ಮೇಲೆ ಜನಗಳು ದಾನವರಾಗುತ್ತಿದ್ದರೂ ಅರಿಯದ ಆ ದೇವರು ಬೇರೆಯವನ್ನು ಹೇಗೆ ಸಂರಕ್ಷಿಸಬಲ್ಲ?

ನಮಗಿಂದು ಬೇಕಾಗಿರುವುದು ಇಂಥ ದೇವರು, ಧರ್ಮಗಳಲ್ಲ. 'ಏನೀ ಬಂದಿರಿ, ಹದುಳವೆ ?' ಎಂದು ಆತ್ಮೀಯವಾಗಿ ವಿಚಾರಿಸುವ; ನೋವು ನಲಿವುಗಳಿಗೆ ಸ್ಪಂದಿಸುವ ಹೃದಯಗಳು. ಇವನಾರವ ಇವನಾರವ ಎಂದು ದೂರೀಕರಿಸದೆ ಇವ ನಮ್ಮವ ಇವ ನಮ್ಮವ ಎಂದು ಎಲ್ಲರನ್ನು, ಎಲ್ಲವನ್ನೂ ತಬ್ಬಿಕೊಳ್ಳುವ ಮನಸ್ಸುಗಳು. ಈ ಮನಸ್ಸುಗಳು ಖಂಡಿತವಾಗಿಯೂ ಭವ್ಯವಾದ ಗುಡಿ, ಮಸೀದಿ, ಚರ್ಚುಗಳಲ್ಲಿ ಇಲ್ಲವೇ ಇಲ್ಲ. ಇದ್ದಿದ್ದರೆ ಅವು ಆ ಗುಡಿಗಳ ಪಕ್ಕದಲ್ಲಿರುವ ಗುಡಿಸಲುಗಳಲ್ಲಿ ಮಾತ್ರ. ಅಥವಾ ಆ ಗುಡಿಗೆ ಹೋಗುವಾಗ ದಾರಿಯಲ್ಲಿ ಕಾಣುವ ಅನ್ನಾನ್ನ ಗತಿಕರಾಗಿ ಕುಳಿತ ಭಿಕ್ಷುಕರ ಹೃದಯದಲ್ಲಿ.

ಹಿಂದೆಂದಿಗಿಂತಲೂ ಇಂದು ಬಸವಣ್ಣನವರು ನಮಗೆ ಪ್ರಸ್ತುತರಾಗುತ್ತಾರೆ. ಸ್ಫಟಿಕದ ಶಲಾಕೆಯಂತಿರುವ, ಮಾಣಿಕ್ಯದ ದೀಪ್ತಿಯಂತೆ ಥಳಗುಟ್ಟುತ್ತಿರುವ ಆತನ ಮಾತುಗಳಲ್ಲೇ ಸರ್ವರೋಗ ನಿವಾರಣ ಗುಣವಿದೆ. ಅಲ್ಲಿ ಜ್ಯೋತಿರ್ಲಿಂಗ ಅಡಗಿದೆ. ಬಸವಣ್ಣನವರ ಇಂಥ ವಿಚಾರ ಜ್ಯೋತಿಯನ್ನು ನಮ್ಮೆಲ್ಲರ ಹೃದಯದಲ್ಲಿ ಮೂಡಿಸಿಕೊಳ್ಳುವ ಮೂಲಕ ನಮ್ಮಲ್ಲಿ ಆವರಿಸಿರುವ ಕತ್ತಲನ್ನು ತೊಡೆದುಕೊಳ್ಳಬೇಕಿದೆ.

**ವಿಶ್ವಾರಾಧ್ಯ ಸತ್ಯಂಪೇಟೆ**
ಬಸವ ಮಾರ್ಗ ಮಾಸಿಕ, ಶಹಾಪುರ - ೫೮೫ ೨೨೩, ಕುಲಬುರ್ಗಿ ಜಿಲ್ಲೆ




"ಇಲ್ಲಿರುವುದು ಸುಮ್ಮನೆ, ಅಲ್ಲಿರುವುದು ನಮ್ಮ ಮನೆ," ಎನ್ನುವ ಕವಿವಾಣಿಯು ಸದಾ ನನ್ನನ್ನು ಆಕರ್ಷಿಸುತ್ತದೆ! ಇದಕ್ಕೆ ನಾನು ಸ್ವಂತ ಮನೆಯನ್ನು ಕಟ್ಟಿಸಲಾರದೆ ಬಾಡಿಗೆ ಮನೆಗಳಲ್ಲಿಯೇ ಬದುಕು ಸವೆಸುತ್ತ ಇರುವುದು ಕಾರಣ ಇರಬಹುದು. ಇದರ ಜೊತೆಗೆ ಯಾರೋ ಅನುಭವಿಗಳು ಹೇಳಿರುವ ಗಾದೆಯ ಮಾತುಗಳು....."ಮುಟ್ಠಾಳ ಕಟ್ಟಿಸಿದ ಮನೆಯಲ್ಲಿ ಮೇಧಾವಿ ವಾಸಿಸುತ್ತಾನೆ" ಎನ್ನುವುದರ ಕುಮ್ಮಕ್ಕು ಇರಬಹುದು.

ಏನೆ ಆದರೂ....... ಊರಿಂದ ಊರಿಗೆ ವರ್ಗವಾಗುತ್ತ.... ಒಗ್ಗರಣೆ ಆಗುತ್ತ....ಮೂರು ವರ್ಷಗಳಿಗೆ ಒಂದು ಊರು..... ಒಂದು ಬಾಡಿಗೆ ಮನೆ ಹಿಡಿಯುತ್ತ ಬದುಕುವುದರ ಮಜವೇ ಬೇರೆ. ಲಕ್ಷಗಟ್ಟಲೆ ಹಣ ಸುರಿದು ಹಗಲು – ರಾತ್ರಿ ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಪಡಬಾರದ ಪಾಡುಪಡುತ್ತ ...ಆರ್ಥಿಕ ತೊಂದರೆಗೆ ಸಿಲುಕಿ ಮನೆಯೊಂದನ್ನು ಕಟ್ಟಿಸಿ..... ಅದರಲ್ಲಿ ವಾಸ ಮಾಡುವುದಕ್ಕಿಂತ ಬಾಡಿಗೆ ಮನೆ ಅದೆಷ್ಟು ಹಿತ ? ಈ ಸಂದರ್ಭವನ್ನು ಹೇಳುವಾಗ ನಾನು ಕಂಡ ಕೆಲವು ಸತ್ಯ ಘಟನೆಗಳು ನನ್ನ ಹೃದಯವನ್ನು ಕಲುಕಿ ಬಿಟ್ಟಿವೆ. ನನ್ನ ಮಿತ್ರನೊಬ್ಬ ಇಂತಹದ್ದೆ ಸ್ವಂತ ಮನೆಯ ಕನಸಿನ ಬಲೆಯಲ್ಲಿ ಸಿಲುಕಿದ. ಸೈಟು ಕೊಂಡ. ಸೈಟಿನಲ್ಲಿ ಒಂದು ಹೊಸ ಮನೆ ಕಟ್ಟಿಸುವ ಆಸೆಯಿಂದ ಅಡಿಪಾಯ ಅಗೆಸಿದ. ಅಡಿಪಾಯಾವಸ್ಥೆಯಲ್ಲಿ ಗೋಚರಿಸುತ್ತಿದ್ದ

# ಬಾಡಿಗೆ ಮನೆ

ಕೊಠಡಿ ಹಜಾರ ಎಲ್ಲವೂ ಬಹಳ ಚಿಕ್ಕದೆಂದು ತೋರಿತು. ಅಗೆದ ಅಡಿಪಾಯ ಬದಲಿಸಿದ. ಮನೆಯ ಪ್ಲಾನ್ ಹಿಗ್ಗಿಸಿದ. ಈಗ ಕೊಠಡಿ ದೊಡ್ಡದಾಯ್ತು. ಹಜಾರ ಅದ್ಭುತವೆನಿಸಿತು. ಆದರೆ ಮನೆಯ ಬಜೆಟ್ ಮಾತ್ರ ಖೋತಾ ಬಜೆಟ್ ಆಯಿತು. ಮನೆ ಕಟ್ಟಿಸಲು ಮುಡಿಪಾಗಿಟ್ಟ ಹಣ ಅರ್ಧಕ್ಕೆ ಮುಗಿಯಿತು. ಮನೆ ನಿರ್ಮಾಣ ಅರ್ಧಕ್ಕೆ ನಿಲ್ಲಬಾರದೆಂದು ಅವರಿವರಲ್ಲಿ ಕೈ ಚಾಚಿದ. ಕೊನೆಗೆ ಒಂದು ದಿನ ಗೃಹ ಪ್ರವೇಶ ಆಗುವ ಮುನ್ನ ಸಾಲದ ಹಿಂಸೆ ಸಹಿಸಲಾರದೆ ತನ್ನ ಬದುಕಿಗೆ ಮಂಗಳ ಹಾಡಿದ್ದ.

ಎಂತಹ ನೋವಿನ ಸಂಗತಿ ! ಇದನ್ನೆಲ್ಲಾ ಕಂಡ ಮೇಲೆ ಸ್ವಂತ ಮನೆ ಎಂದರೇನೆ ಅಲರ್ಜಿ ಸುರುವಾಗಿಬಿಟ್ಟಿದೆ. ಅಲ್ಲದೆ ನನ್ನ ಮಿತ್ರನೊಬ್ಬ ಆಗಾಗ್ಗೆ ಹೇಳುವ 'ಮಿಡ್ಲ್ ಕ್ಲಾಸ್ ಮೆಂಟಾಲಿಟಿ'ಯ ಬಗ್ಗೆ ಕನಿಕರವೂ ಆಗುತ್ತದೆ. ಇದೇನಪ್ಪಾ.....ಹೊಸತು....? ಏನು 'ಮಿಡ್ಲ್‌ಕ್ಲಾಸ್ ಮೆಂಟಾಲಿಟಿ' ಎಂದರೆ? ಎಂದು ನೀವು ಪ್ರಶ್ನಿಸಿಯೇ ಪ್ರಶ್ನಿಸುತ್ತೀರಿ ಎಂದು ನಾನು ಬಲ್ಲೆ. ಇದೇನು ಹೊಸ ವಿಚಾರ ಅಲ್ಲ ಬಿಡಿ. ಆದರೂ ಅದನ್ನು ಅರಿಯದವರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮತ್ತೆ ಹೇಳುತ್ತಿದ್ದೇನೆ. 'ಮಿಡ್ಲ್‌ಕ್ಲಾಸ್ ಮೆಂಟಾಲಿಟಿ' ಎಂದರೆ...ಮನುಷ್ಯನಾಗಿ ಹುಟ್ಟಿದ ಮೇಲೆ ಅವನು ಓದಬೇಕು. ಓದಿ ಕೆಲಸಕ್ಕೆ ಸೇರಬೇಕು. ಅದರಲ್ಲಿಯೂ ಸರ್ಕಾರಿ ನೌಕರೀನೇ ಆಗಬೇಕು. ನಂತರ ಮದುವೆ..ಮುಂಜಿ..ಜೊತೆಗೆ ಒಂದು ಸ್ವಂತ ಮನೆ ಹೊಂದಲೇಬೇಕು. ಸ್ವಂತ ಮನೆ ಕಟ್ಟಿಸಿದ ನಂತರ ಆಗಿರುತ್ತಲ್ಲ ಸಾಲ, ಆ ಸಾಲಗಳನ್ನು ತೀರಿಸುತ್ತಾ... ತೀರಿಸುತ್ತಾ ರಿಟೈರ್‌ಮೆಂಟ್, ಮುಪ್ಪು ಬಂದುಬಿಡಬೇಕು. ಆಸೆಗಳು ಹಾಗೆಯೇ ಉಳಿಯಬೇಕು. ಬದುಕು ಮಾತ್ರ ಮುಸ್ಸಂಜೆಗೆ ಕಾಲಿಟ್ಟಿರಬೇಕು. ಇಂತಹದ್ದೆ 'ಮಿಡ್ಲ್‌ಕ್ಲಾಸ್ ಮೆಂಟಾಲಿಟಿ' ಅಂದ್ರೆ. ಇಲ್ಲಿ ಆಲೋಚನೆಗಳಿಗೆ, ಆವಿಷ್ಕಾರಗಳಿಗೆ, ಅವಶ್ಯಕತೆಗಳಿಗೆ, ಹೊಂದಾಣಿಕೆಗಳಿಗೆ ಅವಕಾಶಗಳೇ ಇರುವುದಿಲ್ಲ. ಅದೇನೋ ಗಾದೆ ಮಾತಿದೆಯಲ್ಲಾ, 'ಮಕ್ಕೀ ಕಾ..ಮಕ್ಕಿ!' ಎಂದು, ಅದರಂತೆ !

'ಉಮರ್ ಕಯಾಂ' ಅಂದರೆ ನನಗೆ ಬಲು ಇಷ್ಟ. ಈ ಕವಿಯ ಕವಿತೆಗಳು ಅವನು ಸತ್ತು ಮಣ್ಣು ಸೇರಿದ ೨೮೦ ವರ್ಷಗಳ ನಂತರ ಬೆಳಕು ಕಂಡವಂತೆ. 'ಸಾಲ ಮಾಡಿಯಾದರೂ ತುಪ್ಪ ತಿನ್ನಿ!' ಎಂದು ಕಿವಿಮಾತು ಹೇಳಿದ ರಸಿಕ ಕವಿ. ಬದುಕು ಬರುವುದು ಒಂದೇ ಬಾರಿ. 'ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳಬೇಡಿರಿ' ಎಂದಿರಬೇಕು ಅವನ ಬುದ್ಧಿವಾದ. ಬಾಡಿಗೆ ಮನೆಯೇ ಬೊಂಬಾಟ್ ಎನ್ನುವುದು ಅವನ ಅಭಿಮತ !

ಬಾಡಿಗೆ ಮನೆಯಲ್ಲಿ ಇರುವ ಕೆಲವು ಭವ್ಯ ಅನುಕೂಲಗಳು ಸ್ವಂತ ಮನೆಯಲ್ಲಿ ಇರಲು ಸಾಧ್ಯವೇ ಇಲ್ಲ. ನೆರೆಹೊರೆಯಾದಾಗ ಬಾಡಿಗೆ ಮನೆ ಅದೆಂತಹ ಸೊಗಸು ಎನಿಸುತ್ತದೆ. ಹೇಳದೆ ಕೇಳದೆ ಬಾಡಿಗೆ ಮನೆಯನ್ನು ಬದಲಾಯಿಸಿ ಬೇರೆ ಮನೆ ಹಿಡಿದರೆ ಸಮಸ್ಯೆಗೆ ತೆರೆ ಬೀಳುತ್ತದೆ. ಆದರೆ ಅದು ನಿಮ್ಮ ಸ್ವಂತ ಮನೆಯಾದರೆ ಏನು ಮಾಡಲು ಸಾಧ್ಯ ? 'ಪಾಲಿಗೆ ಬಂದದ್ದು ಪಂಚಾಮೃತ' ಎಂದುಕೊಳ್ಳುತ್ತ ನೆರೆಮನೆಯವರ ಕಿರಿಕಿರಿ ಅನುಭವಿಸಲೇಬೇಕು. ಬ್ರಹ್ಮಚಾರಿಗಳಾದರೆ ಬಾಡಿಗೆ ಮನೆಯು ಅತ್ಯಂತ ಆಹ್ಲಾದಕರ, ಏಕೆಂದರೆ ಮನೆಯಿಂದ ಮನೆಗೆ ಹಾರುತ್ತ, ತನ್ನ ಬಾಳಸಂಗಾತಿಯನ್ನು ಹುಡುಕಿಕೊಳ್ಳುವುದು ಬಲು ಸುಲಭದ ಕೆಲಸ. ಇಷ್ಟೆ ಅಲ್ಲಾ, ಗೃಹಿಣಿಯರಿಗೂ ಬಾಡಿಗೆ ಮನೆಗಳೇ ಅಪ್ಯಾಯಮಾನ, ಕಾರಣವೇನೆಂದರೆ ಈ ನೀರಿನ ಬರದಲ್ಲಿ ಸ್ವಂತ ಮನೆ ಮಾಡಿ ಅಲ್ಲಿ ನೀರಿನ ಅನುಕೂಲಕ್ಕೆ ಅಡಚಣೆಗಳು ಬಂದರೆ ಆ ಗೃಹಿಣಿ ಮಾಡುವುದಾದರೂ ಏನು ? ಬಾಡಿಗೆ ಮನೆಯಲ್ಲಿ ನೀರಿನ ತೊಂದರೆ ಉಂಟಾದರೆ ಸಮಸ್ಯೆ ಬಗೆಹರಿಸುವುದು ಬಹಳ ಸುಲಭ ! ಬೇರೆ ಮನೆ ನೋಡಿದರಾಯ್ತು.

ನಶ್ವರವಾದ ಈ ಬದುಕಿನಲ್ಲಿ ನೀರಿನಲ್ಲಿಯೇ ಇದ್ದರೂ ನೀರಿಗೆ ಅಂಟಿಕೊಳ್ಳದ ತಾವರೆ ಎಲೆಯಂತೆ ನಮ್ಮ ಸ್ವಂತ ಜೀವವೇ ದೇಹವೆಂಬ ಬಾಡಿಗೆ ಮನೆಯಲ್ಲಿ ವಾಸಿಸುವಂತೆ ಬಾಡಿಗೆ ಮನೆಯಲ್ಲಿ ವಾಸಿಸುವುದೇ ಸತ್ಯದ ಸಾಕ್ಷಾತ್ಕಾರವಾಗಲು ಹೆಚ್ಚು ಅನುಕೂಲ ! ಇಲ್ಲ ಎಂದರೆ 'ಸ್ವಂತ ಮನೆ' ಎಂಬ ಭ್ರಮೆಯ ಒಳಗೆ ಬೆರೆತು ಸತ್ಯದ ಕಣ್ಣುಗಳಿಗೆ ಮತ್ತಷ್ಟು ಪೊರೆ ಬಂದುಬಿಡುತ್ತದೆ.

**ಕ. ಬ. ವೀರಣ್ಣ ಕಣ್ಣಾಗಾಲ**
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ರಾಜರಾಜೇಶ್ವರಿ ನಗರ,
ಬೆಂಗಳೂರು – ೫೬೦ ೦೯೮



ಲೇಖಕರು ಕೋಟಿ ಚೆನ್ನಯ ವಿಷಯ ಕುರಿತು ಮಹಾಪ್ರಬಂಧವನ್ನು ಮಂಡಿಸಿ ಮಂಗಳೂರು ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿ ಗಳಿಸಿದ್ದಾರೆ. ಪ್ರೊ॥ ಬಿ. ಎ. ವಿವೇಕ ರೈ ಅವರ ವೈದುಷ್ಯಪೂರ್ಣ ಮಾರ್ಗದರ್ಶನ ಪಡೆದಿದ್ದಾರೆ. ಆ ಪ್ರಬಂಧವನ್ನೇ ಮತ್ತಷ್ಟು ಪರಿಷ್ಕರಿಸಿ, ಕ್ಷೇತ್ರ ಕಾರ್ಯವಿವರಣೆಗಳನ್ನು ವಿಸ್ತಾರವಾಗಿ ಸೇರಿಸಿ ಈ ಪುಸ್ತಕವನ್ನು ತಾವೇ ಪ್ರಕಟಿಸಿದ್ದಾರೆ. ಹನ್ನೆರಡು ವರ್ಷಗಳ ಗಂಭೀರ ಪ್ರಯತ್ನವಾದ ಈ ಗ್ರಂಥದ ಪುಟ ಪುಟಗಳಲ್ಲೂ ವರ್ಣ ನೆರಳು (೧೦೫), ಕಪ್ಪು-ಬಿಳುಪು ನೆರಳು (೧೬೫), ರೇಖಾ ಚಿತ್ರಗಳು (೮೨), ನಕ್ಷೆಗಳು (೨೭) ತುಂಬ ಕಂಗೊಳಿಸುತ್ತವೆ. ವರ್ಣರಂಜಿತ ಮೇಲು ಹೊದಿಕೆ ತೊಡಿಸಿ ತಯಾರಿಸಿರುವ ಈ ಘನವಾದ ಪುಸ್ತಕ ಒಂದು ಕಲಾಕೃತಿಯ ಸೊಗಸನ್ನು ಪಡೆದಿದೆ. ಸಹಜವಾಗಿಯೇ ಕನ್ನಡ ಪುಸ್ತಕ ಪ್ರಾಧಿಕಾರ ೨೦೦೧ರ ಪುಸ್ತಕ ಸೊಗಸು ಪ್ರಥಮ ಬಹುಮಾನವಿತ್ತು ಈಗಷ್ಟೇ ಪುರಸ್ಕರಿಸಿದೆ. ಇದರೊಳಗಿನ ಹೂರಣ ಕೋಟಿ ಚೆನ್ನಯರನ್ನು ಭಿತ್ತಿಯಾಗಿಸಿಕೊಂಡ ಜನಪದದ ವಿವಿಧ ಆಯಾಮಗಳ ವ್ಯಾಪಕ ಪಾಂಡಿತ್ಯಪೂರ್ಣ ಸಮೀಕ್ಷೆ ಹಾಗೂ ತುಳುವರ ಅನನ್ಯ ಸಂಸ್ಕೃತಿಯ ಮೇಲೆ ಚೆಲ್ಲಿದ ಪ್ರಖರ ಬೆಳಕು. ತುಳು ಜನಾಂಗದ ಕುಲ ದೇವತೆ ಬೆರ್ಮೆರ್ ಜತೆಯಲ್ಲಿ ಸರಿಸಮಾನವಾಗಿ ನಿಲ್ಲುವ ಅರ್ಹತೆಗೆ ಕೋಟಿ ಚೆನ್ನಯರು ಏಕೆ, ಹೇಗೆ ಪ್ರತೀಕವಾಗಿ ಬೆಳೆಯುತ್ತಾ ಹೋಗುತ್ತಾರೆ ಎಂಬುದರ ವಿಸ್ಮಯ ವ್ಯಾಖ್ಯಾನ. ಪುಸ್ತಕದ ಕಾಲುಭಾಗವೇ ಆದ ಅನುಬಂಧವನ್ನು ಮೊದಲಿಗೆ ಗಮನಿಸಿದರೆ ಸಾಕು, ಇದರ ರಚನೆಯಲ್ಲಿ ಲೇಖಕ ಪಟ್ಟಿರುವ ಶ್ರಮದ ಪರಿಕಲ್ಪನೆ ಬರುತ್ತದೆ. ಕ್ಷೇತ್ರಾಭ್ಯಾಸದಿಂದ ದಾಖಲಾಗಿಸಿರುವ ದೃಶ್ಯ ಶ್ರವ್ಯ ಆಕರ ಸಂಗ್ರಹ, ಕೋಟಿ ಚೆನ್ನಯ ಕುರಿತ ಇಲ್ಲಿಯವರೆಗಿನ ಪ್ರಕಟಿತ ಸಾಹಿತ್ಯ ಕೃತಿಗಳ ಪಟ್ಟಿ, ಮೌಖಿಕ ಕಾವ್ಯ ಪ್ರದರ್ಶನ ಪಠ್ಯ ಸಂಗ್ರಹ, ಈ ಪಾಡ್ದನದ ವಿವಿಧ ಪಾಠಾಂತರಗಳು, ಜನಪದ ವೈದ್ಯ ಪಠ್ಯ, ಗರಡಿಗಳ ವಿವರ, ಕೋಟಿ ಚೆನ್ನಯರಂಥ ಇತರ ಜನಪದ ಅವಳಿ ದರ್ಶನ ಪಾತ್ರಿಗಳು, ಕ್ಷೇತ್ರ ಕಾರ್ಯ ಮಾಹಿತಿ, ವಿಶಾಲವಾದ ಸಾಂಸ್ಕೃತಿಕ ಪದ ಕೋಶ, ಪದ ಸಂದರ್ಭಸೂಚಿ, ನಿರೂಪಕರ ಮಾಹಿತಿ ಹಾಗೂ ವಿಸ್ತಾರವಾದ ಕನ್ನಡ ಮತ್ತು ಇಂಗ್ಲಿಷಿನ ಪರಾಮರ್ಶನ ಸಾಹಿತ್ಯ ಸೂಚಿ, ಇವಿಷ್ಟನ್ನೂ ಒಂದು ಸಾವಯುವ ಸಂಬಂಧವೋ ಎಂಬಂತೆ ಹೊಂದಿಸಿರುವ ರೀತಿ ಗಮನಿಸುವಂಥದು. ಲೇಖಕರಿಗೆ ವಿಷಯದ ಮೇಲೆ, ಸಂಬಂಧಪಟ್ಟ ಸಿದ್ಧಾಂತಗಳ ಮೇಲಿ ಕ್ಷೇತ್ರಾನುಭವ, ಪಾಂಡಿತ್ಯ ಹಾಗೂ ಉತ್ತಮ ಮಾರ್ಗದರ್ಶನದಿಂದ ಸಿದ್ಧವಾದ ಅಧಿಕಾರ ಇದಿಷ್ಟರಿಂದಲೇ ಪ್ರಕಟವಾಗುತ್ತದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನ ವ್ಯಾಪ್ತಿಯನ್ನು ನಿರ್ಧರಿಸಿಕೊಂಡಿದ್ದಾರೆ. ಉದ್ದೇಶ, ಮಿತಿ, ವಿಭಾಗಗಳನ್ನು ಹಾಕಿಕೊಂಡಿದ್ದಾರೆ. ಗ್ರಂಥದ ಕೊನೆಯಲ್ಲಿ ತಮ್ಮ ಸಂಶೋಧಿತ ಅಭ್ಯಾಸದ ಫಲಿತಾಂಶಗಳನ್ನು ವಿಸ್ತಾರವಾಗಿ ಚರ್ಚಿಸುತ್ತಾರೆ. ಗ್ರಂಥಾಂತರಂಗದಲ್ಲಿ ಕೋಟಿ ಚೆನ್ನಯ ಕುರಿತ ಇಲ್ಲಿಯವರೆಗೆ ನಡೆದಿರುವ ಕೆಲಸದ ಪರಾಮರ್ಶೆ, ಈ ವಿಷಯದ ಕಥಾ, ಪಾಡ್ದನ, ಆರಾಧನಾ ಸ್ವರೂಪ, ಅದು ಜನಪದ ಸಾಹಿತ್ಯ ಪ್ರಕಾರವಾಗಿ ಮೌಖಿಕ ಮಹಾಕಾವ್ಯವಾಗುವ ಬಗೆ, ವಿಷಯದ ಚಾರಿತ್ರಿಕತೆ ಮತ್ತು ತುಳು ನಾಡಿನ ಭೌಗೋಳಿಕ ವ್ಯಾಪ್ತಿ, ಗರಡಿಗಳು ಮತ್ತು ವಿಗ್ರಹಗಳಾದ ಕುತೂಹಲಕಾರಿ ಬೆಳವಣಿಗೆ, ಆಧುನಿಕ ರೀತಿಯಲ್ಲಿ ಇದರ ಮನೋವೈಜ್ಞಾನಿಕ ಮತ್ತು ರಾಚನಿಕ ದೃಷ್ಟಿ ವಿಶ್ಲೇಷಣೆ, ಸಾಂದರ್ಭಿಕ ಮತ್ತು ಪ್ರದರ್ಶನ ಸಿದ್ಧಾಂತಗಳ ದೃಷ್ಟಿಯಲ್ಲಿ ವಿಚಾರ, ರಾಷ್ಟ್ರೀಯ ಅಂತರರಾಷ್ಟ್ರೀಯ ಜಾನಪದ ಭಿತ್ತಿಯಲ್ಲಿ ಕೋಟಿ ಚೆನ್ನಯ ವಿಷಯದ ಮೌಲ್ಯ ನಿರ್ಧಾರ, ಇಷ್ಟೊಂದು ಕೆಲಸವಾಗಿದ್ದರೂ ತುಳು ಜನಾಂಗವನ್ನೂ ಮೀರಿ, ಸಾರ್ವತ್ರಿಕವಾಗಿ ಈ ವಿಷಯ ಅಚ್ಚರಿಯಾಗುವಂತೆ ಇಂದೂ ಜನಪ್ರಿಯತೆಯನ್ನೂ, ಆಧುನಿಕತೆಯನ್ನೂ ಗಳಿಸಿಕೊಂಡಿರುವುದರ ಬಗ್ಗೆ ವಿಶಾಲವಾದ ವ್ಯಾಖ್ಯೆ ಇದೆಲ್ಲವನ್ನೂ ಒಳಗೊಂಡಿದೆ. ಇದೊಂದು ಅವಸರವಿಲ್ಲದ ಸಮಗ್ರ ಅವಲೋಕನ, ಆಲೋಕನ.

ಧನ ಬಲ ಪಡೆದ ಸಂಸ್ಥೆಯ ಕೆಲಸವಲ್ಲ ಇದು. ಸಾಧಾರಣ ಶಾಲಾ ಶಿಕ್ಷಕರೊಬ್ಬರು ತನ್ನ ಜನಮನದ ಸಂಸ್ಕೃತಿಯ ಬೇರುಗಳನ್ನು ಸಂಶೋಧಿಸಿ, ಹೆಮ್ಮೆಯಿಂದ ರಚಿಸಿರುವ, ಪ್ರಕಟಿಸಿರುವ ಈ ಪ್ರಯತ್ನ ಅಗಾಧವಾದುದು. ಪ್ರೀತಿಯಿಂದ ಮಾತ್ರ ಇಂಥ ವೈಯಕ್ತಿಕ ಪ್ರಯತ್ನಗಳು ಸಾಧ್ಯ. ತುಳು ಜನಾಂಗದ ಸಂಸ್ಕೃತಿಯ ಎಲ್ಲಾ ಆಯಾಮಗಳನ್ನೂ ಹಾಸುಹೊಕ್ಕು ಅವರ ಜನಪದದ ಅವಿಭಾಜ್ಯ ಅಂಗವಾಗಿ ಹೋಗಿರುವ ಎರಡು ಅವಳಿ ಮಹಾಕಾವ್ಯಗಳಲ್ಲಿ ಒಂದು ಕೋಟಿ ಚೆನ್ನಯ, ಇನ್ನೊಂದು ಸಿರಿ. ಸಿರಿ ಹೆಣ್ಣಿನ ವಿಮೋಚನೆಗೆ ಸಂಬಂಧಪಟ್ಟದ್ದು. ಕೋಟಿ ಚೆನ್ನಯ ಗಂಡಿನ ದಾಸ್ಯದಿಂದ ಬಿಡುಗಡೆಯ ವಿಭಿನ್ನ ನೆಲೆಗಳನ್ನು ಬೆದಕುತ್ತದೆ. ಕೋಟಿ ಚೆನ್ನಯ ಕುರಿತ ಈ ಗ್ರಂಥದಲ್ಲಿ ಬಹು ಅಧ್ಯಯನ ವಿಧಾನವನ್ನೂ ಅಳವಡಿಸಿಕೊಂಡು, ಇತಿಹಾಸ, ಪುರಾಣ, ಸಾಹಿತ್ಯ, ಆರಾಧನೆ, ಸಮಾಜ, ರಾಜಕೀಯ ಕ್ಷೇತ್ರಗಳಲ್ಲಿ ಹರಡಿಕೊಂಡಿರುವ ವಿವಿಧ ಪ್ರಕಾರ, ತಾತ್ವಿಕ ನೆಲೆ ಇವುಗಳ ಪರಸ್ಪರ ಸಂಬಂಧಗಳನ್ನು ಹೊರಗೆಡವಲಾಗಿದೆ. ಕೋಟಿ ಚೆನ್ನಯ ತುಳು ಸಮುದಾಯದ ಸಾಮಾಜಿಕ, ರಾಜಕೀಯ ಸಂಘಟನೆಯ ಕೇಂದ್ರಬಿಂದುವಾಗಿ, ಅವರ ಒಂದು ಸಾಮಾಜಿಕ ಅಭಿವ್ಯಕ್ತಿಯೇ ಆಗಿ ಹೋಗಿದ್ದಾರೆ. ಪ್ರಸ್ತುತ ಕೃತಿಕಾರರು ಚರ್ವಿತ ಚರ್ವಣವೋ ಎಂಬಂಥ ವಿಷಯವನ್ನು (ಚಲನಚಿತ್ರವೂ ಸೇರಿದಂತೆ ಈ ವಸ್ತು ಹೊಗದ ಕಲಾ ಮಾಧ್ಯಮವಿಲ್ಲ ಎಂದು ಗಮನಿಸಬೇಕು). ಒಂದು ಶಿಸ್ತಿನ ಸಂಶೋಧನೆಯ ಚೌಕಟ್ಟಿನಲ್ಲಿ ಆಳವಾಗಿ ಅಭ್ಯಸಿಸಿ, ಅದಕ್ಕೆ ಕಸಿ ಮಾಡಿ ಹೊಸಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ. ಜನಾಂಗದ ಅಜ್ಞಾತ ಸುಪ್ತ ಪ್ರಜ್ಞೆಯ ಮೂಲೆ ಮೂಲೆಯಲ್ಲಿ ಅಡಗಿಕೊಂಡು ಸೃಜನಶೀಲ ಕಲೆಯ ಸಂಸ್ಕೃತಿಯ, ಸಾಹಿತ್ಯದ, ಸಾಮಾಜಿಕ ಅನುಸರಣೆಯ ವಿವಿಧ ಹಂತದಲ್ಲಿ ಹೊರಹೊಮ್ಮುವ ಈ ವೀರರ ಸ್ಮರಣೆಯನ್ನು ತುಳು ಜನತೆ ತಮಗೆ ತಾವೇ ಅರ್ಥೈಸಿಕೊಂಡಿರುವ ರೀತಿಯನ್ನು ಗುರ್ತಿಸುತ್ತಾರೆ. ಅವನ್ನೆಲ್ಲಾ ಓರಣವಾಗಿ ಪಕ್ಕಪಕ್ಕದಲ್ಲಿ ಜೋಡಿಸಿ, ಮುಂದುವರಿದು, ಅವೆಲ್ಲಾ ಪ್ರಾಕಾರಗಳ ಮೂಲಕವೂ ಏಕಸ್ರೋತವಾಗಿ ನಿರಂತರ ಹರಿಯುವ ಜನಪದ ಪ್ರತಿಭೆಯ ಸಮನ್ವಯಿಕ ಚಿತ್ರವನ್ನು ಮೂಡಿಸುತ್ತಾರೆ. ಪರಿಣಾಮವಾಗಿ ಇವರು 'ಕೋಟಿ ಚೆನ್ನಯ'ರನ್ನು ಕುರಿತು ಬರೆಯುತ್ತಿದ್ದಾರೋ ಅಥವಾ ಆ ವಿಷಯದ ವರ್ಣ ಪಟಲದ ಮೇಲೆ ಜನಪದ ಪ್ರತಿಭೆಯ ರೀತಿ-ನೀತಿಗಳನ್ನು ಬಿಡಿಸುವುದೇ ಉದ್ದೇಶವೋ ಎಂಬ ಬೆರಗು ಉಂಟುಮಾಡುತ್ತದೆ. ಪ್ರೊ॥ ರೈ ಅವರು ಹೇಳುವಂತೆ ಈ ಕೃತಿ ಒಂದು ಮಹತ್ವದ ಜಾನಪದ ಸಂಶೋಧನ ಗ್ರಂಥವೂ ಹೌದು, ಒಂದು ಸೈದ್ಧಾಂತಿಕ ಸಂವಾದವೂ ಹೌದು. ಇದೊಂದು ಸ್ವತಂತ್ರ ಸೃಜನಶೀಲ ಕೃತಿ ಎಂದೂ ಧ್ವನಿಗೂಡಿಸಬಹುದು. ಇದು ಹಲವಾರು ರೀತಿಯಲ್ಲಿ ಮಾದರಿ ಎನಿಸಿಕೊಳ್ಳುವಂಥ ಪ್ರಯತ್ನ. ಸಂಗ್ರಹಿಸಲೇಬೇಕಾದ ಸುಂದರ ಕೃತಿ. ಮೆಚ್ಚಿ ಸ್ವಾಗತಿಸಬಹುದಾದ ಮಹತ್ವದ ಸಂಗತಿ.




**ಹೇಮಾಂಶು ಪ್ರಕಾಶನ, ದೃಶ್ಯ, ಗೊಲ್ಲಾಚಿಲ್, ದೇರೆಬೈಲ್, ಮಂಗಳೂರು - ೬**
ಪುಟಗಳು : ೪೨೦ ಬೆಲೆ : ರೂ. ೫೨೫

**ಕೆ. ಎಸ್. ಪಾರ್ಥಸಾರಥಿ**
ನಂ. ಸಿ-೦೦೧, ನಾಗಾರ್ಜುನ ಎನ್‌ಕ್ಲೇವ್,
೭೬/ಎ, ೧೪ನೇ ಕ್ರಾಸ್, ಜೆ. ಪಿ. ನಗರ ಒಂದನೇ ಹಂತ
ಬೆಂಗಳೂರು - ೫೬೦ ೦೭೮



## ಆಧುನಿಕ ಕರ್ನಾಟಕದ ಆಂದೋಲನಗಳು

ಒಳ್ಳೆಯ ಓದು

(ಲೇಖನಗಳು)

*ಡಾ|| ಎಸ್. ಚಂದ್ರಶೇಖರ್*

**ಪುಟ : ೧೮೩** **ಬೆಲೆ : ರೂ. ೬೦**

**ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾಲ್ಲೂಕು**

*ಆಧುನಿಕ ಕರ್ನಾಟಕದ ಸುಮಾರು ೧೨೦ ವರ್ಷಗಳಿಂದೀಚೆಗಿನ ವಿವಿಧ ಚಳುವಳಿಗಳ ಮತ್ತು ಜನಾಂದೋಲನಗಳ ಸ್ವರೂಪವನ್ನು ಇಲ್ಲಿ ತೆರೆದಿಡಲಾಗಿದೆ. ಚರಿತ್ರೆಯನ್ನು ವಿವಿಧ ಕಾಲಘಟ್ಟಗಳಲ್ಲಿ ವಿವಿಧ ನೆಲೆಯಲ್ಲಿ ನಿಂತು ನೋಡಿದ ಪರಿಣಾಮದಿಂದ ಏಕತೆಗೆ ಅಲ್ಲಲ್ಲಿ ಧಕ್ಕೆ ಬಂದಿರುವುದುಂಟು. ಹಲವು ರಾಜವಂಶಗಳು ಆಳಿ ಮೆರೆದ ಕನ್ನಡ ನಾಡಿನ ಚರಿತ್ರೆಯನ್ನು ಒಂದು ಸೂತ್ರಕ್ಕೆ ಒಳಪಡಿಸುವುದು ಸ್ವಲ್ಪ ಕಠಿಣವೇ. ಇವುಗಳ ಮಧ್ಯೆ ಜನರಿಂದ - ಜನರಿಗಾಗಿ ರೂಪುಗೊಂಡ ಸಂಘರ್ಷಗಳ ರೂಪು ರೇಷೆಗಳನ್ನು ಪೂರ್ವಗ್ರಹವಿಲ್ಲದೆ ನಿರೂಪಿಸಲಾಗಿದೆ.*

## ಕೊಲಂಬಸ್ ಹುಟ್ಟಿಸಿದ ಹಾಲಾಹಲ ಮತ್ತು ಇತರ ಲೇಖನಗಳು



*ಎನ್. ಪಿ. ಶಂಕರನಾರಾಯಣ ರಾವ್*

**ಪುಟ : ೧೪೪** **ಬೆಲೆ : ರೂ. ೭೦**

**ಅಳಿಲು ಸೇವಾ ಸಂಸ್ಥೆ**, ನಂ.೧೧೬, ಮೊದಲನೇ ಅಂಗಡಿ ಬೀದಿ, ಟಾಟಾ ಸಿಲ್ಕ್ ಫಾರಂ, ಬಸವನಗುಡಿ, ಬೆಂಗಳೂರು-೦೪

*ಇತಿಹಾಸ - ಸಂಸ್ಕೃತಿಗಳ ಅಧ್ಯಯನದ ಮಹತ್ವಪೂರ್ಣ ಲೇಖನಗಳು. ಇತಿಹಾಸದ ಅನೇಕ ಸಂದರ್ಭಗಳಲ್ಲಿ ಸಬಲರ ಆಕ್ರಮಣ ಬಲಹೀನರ ಮೇಲೆ ನಡೆದಿದೆ, ಇಂದೂ ನಡೆಯುತ್ತಿದೆ. ಪ್ರಕೃತಿ ಆರಾಧನೆಯಲ್ಲಿ ಪರಮೋನ್ನತ ಮೌಲ್ಯಗಳನ್ನು ಕಂಡು, ಚೈತನ್ಯ ಶಕ್ತಿಯಲ್ಲಿ ಅಪಾರ ನಂಬಿಕೆಯಿರಿಸಿದ್ದ ಬುಡಕಟ್ಟು ಮೂಲ ಸಂಸ್ಕೃತಿಯನ್ನು ನಾಶಮಾಡಿ, ಆ ಜನಾಂಗಕ್ಕೆ ಚರಿತ್ರೆಯಲ್ಲಿ ಭಾರೀ ಅನ್ಯಾಯ ಮಾಡಲಾಗಿದೆ. ನಾಗರಿಕ ಮಾನವ ಮೂಲ ನಿವಾಸಿಗಳ ಮೇಲೆ ನಡೆಸಿದ ಹೀನ ಕೃತ್ಯಗಳನ್ನು ಲೇಖನಗಳು ಚಿತ್ರಿಸುತ್ತವೆ.*

## ನಿತ್ಯ ಜೀವನದಲ್ಲಿ ಕಾನೂನು ಪುಸ್ತಕ - ೩



*ಎಸ್. ಆರ್. ಗೌತಮ್*

**ಪುಟ : ೧೮೪** **ಬೆಲೆ : ರೂ. ೬೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦೦೦೧

*''ಕಾನೂನು ತಿಳಿದಿರಲಿಲ್ಲ ಸ್ವಾಮಿ, ಕ್ಷಮಿಸಿ'' ಎಂದರೆ ನ್ಯಾಯಾಲಯ ನಮ್ಮನ್ನು ಬಿಡುಗಡೆ ಮಾಡುವುದಿಲ್ಲ. ಆದ್ದರಿಂದ ಸ್ವಲ್ಪವಾದರೂ ಪ್ರಾಥಮಿಕ ಹಂತದ ಕಾನೂನನ್ನು ನಿತ್ಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ ತಿಳಿದಿರಲೇಬೇಕಾಗುತ್ತದೆ. ಸರಳವಾದ ಭಾಷೆಯಲ್ಲಿ ಕಾನೂನಿನ ಬಗ್ಗೆ ತಿಳಿವು ಮೂಡಿಸುವ ಶ್ರೀ ಎಸ್. ಆರ್. ಗೌತಮ್ ಖ್ಯಾತ ನ್ಯಾಯವಾದಿಗಳು. ತಮ್ಮ ಬರವಣಿಗೆಯಲ್ಲಿ ಅಪರಾಧಗಳನ್ನು, ಸನ್ನಿವೇಶಗಳನ್ನು ಸ್ವಾರಸ್ಯವಾಗಿ ವರ್ಣಿಸುತ್ತಾ ನಮ್ಮ ಮನಸ್ಸನ್ನು ಓದಿನ ಕಡೆ ತಿರುಗಿಸುವಲ್ಲಿ ಅವರು ಯಶಸ್ವಿಯಾಗಿದ್ದಾರೆ.*



## ಹಿತ-ಅಹಿತ. ವೃತ್ತಿ ಜೀವನದ ೨೫ ವರ್ಷಗಳು

(ಜೀವನಾನುಭವ)

*ಡಾ|| ಸಿ.ಆರ್. ಚಂದ್ರಶೇಖರ್*

**ಪುಟ : ೨೦೮** **ಬೆಲೆ : ರೂ. ೧೨೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**,ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦೦೦೧

*ಹುಚ್ಚು ಒಂದು ಗುಣಪಡಿಸಬಹುದಾದ ಮನೋರೋಗವೆಂಬುದನ್ನು ತಮ್ಮ ಮನೋವೈದ್ಯಕೀಯ ಲೇಖನ-ಉಪನ್ಯಾಸಗಳ ಮೂಲಕ ತಿಳುವಳಿಕೆ ಮೂಡಿಸುತ್ತ, ಮನೋರೋಗಿಗಳ ಪಾಲಿಗೆ ಆಶಾಕಿರಣವಾಗಿ ಮೂಡಿಬಂದವರು ಸರಳ ವ್ಯಕ್ತಿತ್ವದ ಮನೋವೈದ್ಯ ಡಾ|| ಸಿ. ಆರ್. ಚಂದ್ರಶೇಖರ್. ತಮ್ಮ ೨೫ ವರ್ಷಗಳ ವೃತ್ತಿ ಜೀವನದ ಹಿತ-ಅಹಿತ ಅನುಭವಗಳನ್ನು ಓದುಗರೊಂದಿಗೆ ಆತ್ಮೀಯವಾಗಿ ಹಂಚಿಕೊಂಡಿದ್ದಾರೆ.*

## ನಾಕ ಹೊತ್ತ ಮಲ್ಲಿಗೆ (ಕವಿತೆಗಳು)



*ಗುಂಡಣ್ಣ ಕಲಬುರ್ಗಿ*

**ಪುಟ : ೮೮** **ಬೆಲೆ : ರೂ. ೭೦**

**ಕನಕ ಸಾಹಿತ್ಯ ಪ್ರತಿಷ್ಠಾನ**, ನಂ. ೨೮೨, ೫ನೇ ಮುಖ್ಯರಸ್ತೆ, ೧ನೇ ಹಂತ, ಮಂಜುನಾಥನಗರ, ಬೆಂಗಳೂರು - ೧೦.

*ಹೊರ ಜಗತ್ತಿನ ವಿದ್ಯಮಾನಗಳನ್ನು ಅವಲೋಕಿಸುತ್ತ ತನ್ನ ಒಳದನಿಯ ಮೂಲಕ ಶೋಧಿಸುತ್ತ ನಿಜದನಿಯನ್ನು ಮಾತ್ರ ಕವನಗಳನ್ನಾಗಿಸುವ ಕಲೆ ಈ ಕವನ ಸಂಕಲನದಲ್ಲಿ ಸಾಕಾರಗೊಂಡಿದೆ. ಜೀವಕೋಟಿಗೆ ಬಂದೆರಗುವ ನಿಸರ್ಗದತ್ತ ಅಥವಾ ಸ್ವಯಂಕೃತ ನೋವು ನಲಿವುಗಳ ಬಗ್ಗೆ ಇಲ್ಲಿನ ನಿರೂಪಣೆಯು ಕವಿಯ ಮನಸ್ಸಿನ ಸೂಕ್ಷ್ಮತೆಯನ್ನು ತಿಳಿಸುತ್ತದೆ. ಸಂವೇದನಾಶೀಲ ಮನಸ್ಸುಗಳಿಗೆ ಈ ಕವನಗಳು ಬದುಕಿಗೂ-ಸಾಹಿತ್ಯಕ್ಕೂ ಇರುವ ಬಿಡಿಸಲಾಗದ ಗಾಢ ಸಂಬಂಧವನ್ನು ಮನವರಿಕೆ ಮಾಡಿಸುತ್ತವೆ.*




## ಇತಿಹಾಸದ ರಾಜಕೀಯ (ಲೇಖನ ಸಂಗ್ರಹ)

*ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ*

**ಪುಟ : ೯೬** **ಬೆಲೆ : ರೂ. ೩೫**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦೦೦೧

*ಆರ್ಯರು ಭಾರತಕ್ಕೆ ಹೊರಗಿನಿಂದ ಆಕ್ರಮಣಕಾರರಾಗಿ ಬಂದವರೆಂಬ ಸತ್ಯವನ್ನು ಜೀರ್ಣಿಸಿಕೊಳ್ಳಲು ತಯಾರಿಲ್ಲದ ಹಿಂದುತ್ವವಾದಿಗಳು ಈವರೆಗಿನ ಇತಿಹಾಸ ತಜ್ಞರನ್ನೇ ಹೀಯಾಳಿಸಿ ಇತಿಹಾಸವನ್ನು ತಿರುಚಿ ಬರೆಯಿಸುವ ಮಟ್ಟಕ್ಕೂ ಹೋಗಿರುವುದು ನಮ್ಮ ಕಾಲದ ದುರಂತ. ಹರಪ್ಪಾ ಸಂಸ್ಕೃತಿಯನ್ನು ವೇದಕಾಲದ ಸಂಸ್ಕೃತಕ್ಕೆ ಹೊಂದಿಸಿಕೊಳ್ಳುವ ಹುನ್ನಾರ ನಡೆದಿದ್ದು, ವೆಬ್‌ಸೈಟ್‌ಗಳಲ್ಲಿ ಪ್ರಚಾರ ಗಿಟ್ಟಿಸಿಕೊಂಡ ಇಬ್ಬರು ವಿದ್ವಾಂಸರ ಅಭಿಪ್ರಾಯಗಳನ್ನು ಆಧಾರಸಹಿತ ಈ ಕೃತಿಯಲ್ಲಿ ಖಂಡಿಸಲಾಗಿದೆ. ಚರಿತ್ರೆಯ ಆಸಕ್ತರಿಗೆ ಅಮೂಲ್ಯ ಮಾಹಿತಿಗಳಿವೆ.*



## ಶಕ್ತಿ ಸಾರಥಿ ರಾಷ್ಟ್ರಪತಿ ಅಬ್ದುಲ್ ಕಲಾಂ

*ಟಿ.ಆರ್.ಅನಂತರಾಮು*

**ಪುಟ : ೧೪೨** **ಬೆಲೆ : ರೂ. ೮೦**

**ಸಪ್ನ ಬುಕ್‌ಹೌಸ್**, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು-೫೬೦೦೦೯

*ಭಾರತದ ನೂತನ ರಾಷ್ಟ್ರಪತಿಯಾಗಿ ಆಯ್ಕೆಯಾದ ಕ್ಷಿಪಣಿ ರಾಕೆಟ್ ವಿಜ್ಞಾನಿ ಅಬ್ದುಲ್ ಕಲಾಂ ಅವರ ವ್ಯಕ್ತಿ ಪರಿಚಯ ನೀಡುವ ಪುಸ್ತಕ. ವೈಜ್ಞಾನಿಕ ಮಿಲಿಟರಿ ತಂತ್ರಜ್ಞಾನದಲ್ಲಿ ಭಾರತ ವಿಶ್ವದ ಮುಂದುವರೆದ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲಬೇಕೆನ್ನುವ ಛಲ ಹೊತ್ತು ವಿಜ್ಞಾನಿಯಾದ ಇವರ ಬದುಕಿಗಿಂತ ಸಾಧನೆಗಳಿಗೆ ಹೆಚ್ಚು ಮಹತ್ವ ಕೊಟ್ಟು ಪರಿಚಯಿಸಲಾಗಿದೆ. ಅಗ್ನಿ, ಪೃಥ್ವಿ ಇವುಗಳ ಯಶಸ್ವೀ ಉಡಾವಣೆಗಳ ಹಿಂದೆ ಕಲಾಂ ಅವರ ಅಪಾರ ಪರಿಶ್ರಮವಿದ್ದು ಇಂದಿಗೂ ಅವರು ನಂಬಿರುವುದು ''ವ್ಯಕ್ತಿಗಿಂತ ದೇಶ ದೊಡ್ಡದು'' ಎಂಬುದನ್ನು. ಅಪೂರ್ವ ಚಿತ್ರಗಳೂ ಇವೆ.*

## ಮಡದಿ ಮತ್ತೊಬ್ಬ ಚೆಲುವಗೆ



ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ ? - ೨ (ಲೇಖನಗಳು)

*ಡಾ|| ಮೀನಗುಂಡಿ ಸುಬ್ರಮಣ್ಯ*

**ಪುಟ : ೧೨೮** **ಬೆಲೆ : ರೂ. ೫೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦೦೦೧

*ವ್ಯಕ್ತಿಗಳಲ್ಲಿ ತಮಗರಿವಿಲ್ಲದಂತೆ ಅಡರಿಕೊಳ್ಳುವ ಸಮಸ್ಯಾ ವರ್ತನೆಗಳನ್ನು ಸೂಕ್ತ ಸಂದರ್ಶನಗಳ ಮೂಲಕ ಸ್ಥಾನಪಲ್ಲಟಗೊಳಿಸಿ ನಿವಾರಿಸುವ ಹೊಸ ಗೆಸ್ಟಾಲ್ಟ್ ಥೆರಪಿ ಪ್ರಯೋಗಗಳು ಇಲ್ಲಿನ ಲೇಖನಗಳಾಗಿವೆ. ಯಾವುದೋ ಹಂತದಲ್ಲಿ ಒಳನುಸುಳಿ ಭದ್ರವಾಗಿ ಬೇರೂರಿದ ಸಮಸ್ಯೆಗಳನ್ನು ವ್ಯಕ್ತಿಯೇ ಅರಿತು ತ್ಯಜಿಸುವಂತೆ ಮಾಡುವುದೇ ಈ ಚಿಕಿತ್ಸೆಯ ವೈಶಿಷ್ಟ್ಯ. ಇದು ಈ ಲೇಖಕರ ಕೊನೆಯ ಕೃತಿ.*

- ಇಂದಿರಾಕುಮಾರಿ

# ಧರ್ಮ, ಜಾತಿ, ವರ್ಣ, ವರ್ಗ ಇತ್ಯಾದಿ

'ಧರ್ಮ', ಆಧ್ಯಾತ್ಮವಾದಿ ತತ್ವಜ್ಞಾನವನ್ನು ಆಧರಿಸಿರುವುದರಿಂದ ಆತ್ಮ, ಪರಮಾತ್ಮ, ಮೋಕ್ಷ ಇಂಥ ಪರಿಕಲ್ಪನೆಗಳನ್ನು ಕಟ್ಟಿಕೊಂಡು, ಮಾನವ ಜೀವನಕ್ಕೆ 'ಘನ'ವಾದ ಉದ್ದೇಶವನ್ನು ಆರೋಪಿಸುತ್ತವೆ. ವಿವಿಧ ಧರ್ಮಗಳಲ್ಲಿ ದೇವರುಗಳ ಹೆಸರು ಮತ್ತು ಕೆಲವು ತಾತ್ವಿಕ ಭಿನ್ನಾಭಿಪ್ರಾಯಗಳಿದ್ದಿರಬಹುದು; ಆದರೆ ಒಳ ಹೂರಣ ಎಲ್ಲಕ್ಕೂ ಒಂದೇ. ದೇವರ ಲೋಕವನ್ನು ಒಪ್ಪುವ ಇವು ಮಾನವ ದೇವರಾಗುವುದನ್ನು ಇಲ್ಲವೆ ದೇವರಲ್ಲಿ ಹೋಗಿ ಸೇರುವುದನ್ನು ಪ್ರತಿಪಾದಿಸುತ್ತವೆ. ಅದನ್ನು 'ಮೋಕ್ಷ', 'ಮುಕ್ತಿ', 'ಲಿಂಗಾಂಗ ಸಾಮರಸ್ಯ', 'ಬ್ರಾಹ್ಮಣತ್ವ' (ಪರಬ್ರಹ್ಮತ್ವ) ಎಂಬ ಭಿನ್ನ ಪರಿಭಾಷೆಯಲ್ಲಿ ಹೇಳಿರಬಹುದು ಅಥವಾ ದೇವರಿಲ್ಲ ಎನ್ನುವ ಜೈನ, ಬೌದ್ಧ ಮತಗಳೂ ಕೂಡ ಜಿನತ್ವ (ತೀರ್ಥಂಕರತ್ವ) ಮತ್ತು ನಿರ್ವಾಣಗಳನ್ನು ಬೋಧಿಸುತ್ತವೆ.

ಬ್ರಾಹ್ಮಣ ಪರಂಪರೆಯನ್ನು ಇಂದು ನಾವು ಸಕಾರಣವಾಗಿ ಎಷ್ಟೇ ಟೀಕಿಸುತ್ತಿದ್ದರೂ ಒಂದು ಕಾಲದಲ್ಲಿ ಅದು ಭಾರತದ ಎಲ್ಲ ಜಾತಿ-ಬುಡಕಟ್ಟುಗಳಿಗೂ ಮುಕ್ತವಾಗಿ ತೆರೆದುಕೊಂಡಿತ್ತು. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರು ಮಾತ್ರ ಬ್ರಾಹ್ಮಣರು ಎಂಬುದು ನಂತರದ ಆವಿಷ್ಕಾರ. ಮೊದಲ ಹಂತದಲ್ಲಿ ಬೇಡ ಕುಲದ ವಾಲ್ಮೀಕಿ, ಅಂಬಿಗ ಕುಲದ ವ್ಯಾಸ ಮೊದಲಾದವರು ಬ್ರಾಹ್ಮಣರಾದರಲ್ಲವೇ ? ಶ್ವಪಚ, ಬೆಸ್ತ, ಬೇಡ ಇವೆಲ್ಲ ಆಗಲೇ ಜಾತಿಗಳಾಗಿದ್ದುವೆಂಬುದನ್ನು ಕೂಡ ಈ ಬ್ರಾಹ್ಮಣರನ್ನು ಜಾತಿಗಳಿಂದ ಗುರುತಿಸುವ ಪರಂಪರೆಯೇ ಸೂಚಿಸುತ್ತದೆ. ಬ್ರಾಹ್ಮಣತ್ವ, ಬ್ರಹ್ಮಜ್ಞಾನ, ಬ್ರಹ್ಮ ಪದವಿ, ಪರಬ್ರಹ್ಮ ಸ್ವರೂಪ, ನಿರಂಜನತ್ವ ಇವೆಲ್ಲ ಒಂದೇ ಪರಿಕಲ್ಪನೆಯ ಬೇರೆ ಬೇರೆ ಮುಖಗಳು.

ಆದರೆ ಈ ಹಂತ ನಾಶವಾಗಿ ಬ್ರಾಹ್ಮಣ ತಂದೆ ತಾಯಿಗಳ ಮಕ್ಕಳು ಮತ್ತು ಇಂಥ ಪೀಳಿಗೆ ಮಾತ್ರ 'ಬ್ರಾಹ್ಮಣ' ಎಂಬ 'ಜಾತಿ' ಕಲ್ಪನೆ ಹುಟ್ಟಿಕೊಂಡಿತು. ಬ್ರಾಹ್ಮಣತ್ವ ಎಂಬ 'ಧರ್ಮ' ನಾಶವಾಗಿ ಬ್ರಾಹ್ಮಣ ಎಂಬ 'ಜಾತಿ' ಹುಟ್ಟಿತು. ಹೀಗೆ ತತ್ತ್ವಜ್ಞಾನ (ಆಧ್ಯಾತ್ಮವಾದಿ) ಸಾಮಾಜಿಕ ಘಟಕವೊಂದರ ಸೃಷ್ಟಿಗೆ ಕಾರಣವಾಯಿತು. ಜಾತಿ ಆನುವಂಶಿಕತೆಯನ್ನು ಸೃಷ್ಟಿಸಿದರೆ, 'ಧರ್ಮ' ಅದನ್ನು ತಾತ್ಕಾಲಿಕವಾಗಿ ಒಡೆದುಹಾಕಬಲ್ಲದು.

ಮೇಲೆ ಹೇಳಿದ ಆದರ್ಶ ಸ್ಥಿತಿಯ (ಬ್ರಹ್ಮತ್ವ) ಪ್ರಭಾವ ಬೌದ್ಧ, ಕೆಲವು ವೀರಶೈವ ಪಂಡಿತರು ಮತ್ತು ಇತರರ ಮೇಲೆ ಗಾಢವಾಗಿದ್ದುದು ದಾಖಲಾಗಿದೆ. ಇವರೆಲ್ಲ 'ಯೋಗ್ಯ ಬ್ರಾಹ್ಮಣನಾರು ?' ಎಂದು ಚರ್ಚಿಸುತ್ತಾರೆ. ಅಂಥ 'ಮಾದರಿ'ಯನ್ನು ಮುಂದಿಡುತ್ತಾರೆ. ಇಲ್ಲಿ ಜಾತಿಯಂತೆ, ಲಿಂಗ ತಾರತಮ್ಯವೂ ನಿರಾಕರಿಸಲ್ಪಟ್ಟಿತ್ತು. ಅಂದರೆ ಯಾವುದೇ ಜಾತಿ, ಬುಡಕಟ್ಟಿನವರಿರಲಿ, ಹೆಣ್ಣಿರಲಿ, ಗಂಡಿರಲಿ ಪ್ರಯತ್ನದ ಮೂಲಕ ಬ್ರಹ್ಮ ಪದವಿ ಪಡೆದು ಬ್ರಾಹ್ಮಣರಾಗಬಹುದಿತ್ತು.

ನಿಜ, 'ಬ್ರಹ್ಮ ಪದವಿ', 'ಮೋಕ್ಷ', ಲಿಂಗಾಂಗ ಸಾಮರಸ್ಯ ಇವೆಲ್ಲ ಅಸಂಬದ್ಧ ಮತ್ತು ಅರ್ಥಹೀನ ಪರಿಕಲ್ಪನೆಗಳು. ಇವಕ್ಕೆ ವಾಸ್ತವ ಬದುಕಿನ ಅಡಿಪಾಯವೇ ಇಲ್ಲ. ಇವು ಪ್ರಾಪಂಚಿಕ ಕಷ್ಟನಷ್ಟಗಳನ್ನು ಎದುರಿಸಲಾಗದ ಒಂದು ಭ್ರಮೆಯ ಸ್ಥಿತಿ.

ಆದರೆ ಜಾತಿ ವ್ಯವಸ್ಥೆಯ ಕ್ರೌರ್ಯ ಮತ್ತು ಧಾರ್ಮಿಕ ಸಮಸ್ಯೆಯ ಭೀಕರತೆಯ ಚರಿತ್ರೆಯಲ್ಲಿ ಇದು ಒಂದು ಇತ್ಯಾತ್ಮಕ (ಪಾಸಿಟಿವ್) ಮುಖವೆಂಬಂತೆ, ತೋರುವುದನ್ನು ನಿರ್ಲಕ್ಷಿಸಲಾಗದು.

'ವೀರಶೈವ' ಧರ್ಮ ಹುಟ್ಟಿದ ಕಾಲದಲ್ಲಿ (೧೨ನೇ ಶತಮಾನ) ಇಂಥದೇ ಆದರ್ಶವಿತ್ತು. ಅದು 'ಶರಣ' ನಾಗುವುದು ಅಥವಾ 'ಲಿಂಗಾಂಗ ಸಾಮರಸ್ಯ' ಪಡೆಯಬೇಕೆನ್ನುವುದು. ಇಲ್ಲಿಯೂ ಇದನ್ನು ಸಾಧಿಸಲು ಯಾವುದೇ ಜಾತಿಯ ಮತ್ತು ಲಿಂಗದ ಜನಕ್ಕೆ ಆಹ್ವಾನವಿತ್ತು. ಶ್ರೇಣೀಕೃತ ಜಾತಿ ವ್ಯವಸ್ಥೆಯ ವಿಕೃತತೆ, ನೀಚತನಗಳ ಅನುಭವವಿದ್ದವರಿಗೆ ಇದು ತುಂಬ ಆಕರ್ಷಕವಾಗಿ ಕಂಡಿದ್ದರೆ ಆಶ್ಚರ್ಯವೇನು ? ಆದರೆ ತಳ ಮತ್ತು ಕೆಳ ಜಾತಿಗಳು 'ಇಡಿಯಾಗಿ' ಈ ಧರ್ಮವನ್ನು ಸೇರಲಿಲ್ಲ. ಮಾದಿಗ ಕುಲದ ಒಬ್ಬ ಚನ್ನಯ್ಯ, ಜೇಡರ ಕುಲದ ಒಬ್ಬ ದಾಸಿಮಯ್ಯ ಹೀಗೆ ಕೆಲವರು ಮಾತ್ರ ಶರಣ ಚಳುವಳಿ ಸೇರಿದರು. ಅವರ ಜೊತೆ ಅವರ ಸಣ್ಣ ಪಡೆಯೂ ಇದ್ದಿರಬಹುದು.. ಆದರೆ ಎಲ್ಲ ಜಾತಿಗಳು ಇಡಿಯಾಗಿ ವೀರಶೈವಕ್ಕೆ ಮತಾಂತರಗೊಳ್ಳಲಿಲ್ಲ. ಏಕೆಂದರೆ ಅಲ್ಲಿಯೂ ಸುಲಭದ ಮಾರ್ಗವಿರಲಿಲ್ಲ. ಗುರು, ಲಿಂಗ, ಜಂಗಮಕ್ಕೆ ತನು, ಮನ, ಧನ - ಅರ್ಪಿಸಿ ಸಂಸಾರವನ್ನು ಅಷ್ಟಷ್ಟೇ ನಿರಾಕರಿಸಿ ಸನ್ಯಾಸತ್ವ (ಅನುಭಾವಿತ್ವ, ಅವಧೂತತ್ವ, ಅಲಕ್ ನಿರಂಜನತ್ವ)ವನ್ನು ಸಾಧಿಸಬೇಕಾಗುತ್ತಿತ್ತು.

ಸಾಮಾಜಿಕ, ಕೌಟುಂಬಿಕ, ಸಾಂಪ್ರದಾಯಿಕ ನೀತಿಗಳನ್ನು ಗಾಳಿಗೆ ತೂರಿ, ತನ್ನ ನಿಲುವನ್ನು (ಬತ್ತಲೆತನವನ್ನು ಇತ್ಯಾದಿ) ತಾತ್ತ್ವಿಕವಾಗಿ ಸಮರ್ಥಿಸಿಕೊಳ್ಳುತ್ತ, ದಿಟ್ಟತನದಿಂದ ಚಳುವಳಿಗೆ ಬಂದು ಸೇರಿದ ಅಕ್ಕಮಹಾದೇವಿಯ 'ಆದರ್ಶ', ಅಲ್ಲಮ, ಸಿದ್ಧರಾಮ, ಚನ್ನಬಸವರ ಆದರ್ಶದ ಜತೆ, ಇಬ್ಬರು ಹೆಂಡಿರಿದ್ದ ಬ್ರಾಹ್ಮಣ ಮೂಲದ ಬಸವನ ಆದರ್ಶವೂ ಬೆರೆತಿರುವುದರ ಪ್ರಾಮುಖ್ಯತೆಯನ್ನು ನೋಡಬೇಕು.

**ಎಸ್. ಎಸ್. ಹಿರೇಮಠ**

ಹಿಂದಿದ್ದ ಬೌದ್ಧ, ಜೈನ ಮತಗಳು ಸನ್ಯಾಸಿ ಮತ್ತು ಸನ್ಯಾಸಿನಿ 'ಸಂಘ'ಗಳನ್ನು ಕಟ್ಟಲು ಯತ್ನಿಸಿದ್ದವು. ಈ ಮತಗಳ ಸಂಸಾರಿ ಅನುಯಾಯಿಗಳು ಈ ಸನ್ಯಾಸಿಗಳ 'ಸೇವೆ' ಮಾಡಬೇಕಿತ್ತು. ಈ ಪಂಥಗಳಿಗೆ ಸಂಸಾರಿಗಳಲ್ಲ 'ಸನ್ಯಾಸಿಗಳೇ' – ಆದರ್ಶ. ಸನ್ಯಾಸತ್ವದಿಂದ ಮಾತ್ರ ಅಂತಿಮ ಗುರಿ (ಜಿನತ್ವ ಅಥವಾ ನಿರ್ವಾಣ) ಮುಟ್ಟಲು ಸಾಧ್ಯ. ಈ ಸನ್ಯಾಸಿ ಸಂಘಗಳು ಸಮಾಜದಿಂದ ಹೊರತಾಗಿದ್ದರೂ ಸಮಾಜವನ್ನು ಅವಲಂಬಿಸಿಯೇ ಇರಬೇಕಿತ್ತು. ಕನಿಷ್ಠ ಹೊಟ್ಟೆ, ಬಟ್ಟೆ, ವಸತಿ, ಆರೋಗ್ಯ, ಶಿಕ್ಷಣಕ್ಕಾಗಿ ಅವರು ಬೌದ್ಧ, ಜೈನ ಗೃಹಸ್ಥರನ್ನು (ನಂತರ ಶ್ರೀಮಂತರ ಕೊಡುಗೆ, ದೊರೆಗಳ ಆಶ್ರಯ ಹೆಚ್ಚಿದ್ದುವು) ನೆಚ್ಚಿಕೊಳ್ಳಬೇಕಿತ್ತು.

ಆದರೆ ವೀರಶೈವ 'ಭಕ್ತ' ಸಮಾಜ 'ಭವಿ' ಸಮಾಜದಿಂದ ದೂರವಿದ್ದು ತಮ್ಮ ತಮ್ಮ ಆನುವಂಶಿಕ ವೃತ್ತಿಯನ್ನು ಕಾಯಕತತ್ತ್ವ ಮಾಡಿಕೊಂಡು, ಸಂಸಾರಿಯಾಗಿದ್ದೂ ಬಯಲು ಗಳಿಸಲು ಸಾಧ್ಯವೆಂದಿತು. ಕೆಲಸವನ್ನು ಕಾಯಕವೆಂದು ಆಧ್ಯಾತ್ಮೀಕರಿಸಲು ನೋಡಿತು. ಕಾಯಕದಿಂದಲೇ ಕೈಲಾಸ (ಮೋಕ್ಷ) ಎಂಬ ವಾದದಿಂದ ಅದು ಅವರವರ ವೃತ್ತಿಗಳಿಂದ ಹೊರತಾಗಿಸುವುದಿಲ್ಲ. ಅನಿವಾರ್ಯವೆಂದು ಅದು ತಿಳಿದಿದೆ. ಇಲ್ಲಿರುವ ವಿಶೇಷತೆ ಎಂದರೆ ಸಂಸಾರಿಗಳನ್ನು ಕೂಡ ಸನ್ಯಾಸಿಗಳ ಜತೆಗಿಟ್ಟು ಸಮಾನ ಗೌರವನೆಲೆಯಲ್ಲಿ ಕಾಣಲೆತ್ನಿಸಿದ್ದು. (ಕಾಲಾಂತರದಲ್ಲಿ ಈ ಸ್ಥಿತಿ ಉಳಿಯಲಿಲ್ಲ). ಇಲ್ಲದಿದ್ದರೆ ಇಬ್ಬರು ಹೆಂಡಿರ ಬಸವಣ್ಣ 'ಜಗದ್ಗುರು' ಹೇಗಾದಾನು ? ಗಂಡ-ಹೆಂಡಿರಿಬ್ಬರೂ ವೀರಶೈವರಾಗುವ, 'ಆದರ್ಶ ದಂಪತಿ', ಆದರ್ಶ ಕುಟುಂಬ, ಆದರ್ಶ ಸಮಾಜದ ಪರ್ಯಾಯಕ್ಕೆ ಚಳುವಳಿ ಶ್ರಮಿಸಿತು. ಆದಿಶೈವದ ತಾತ್ವಿಕತೆ ಅವರ ಬೆನ್ನಿಗಿತ್ತು. ಅಲ್ಲಿರುವ ಆಧ್ಯಾತ್ಮವಾದದ ಸ್ವರೂಪವೇ ಇತರ ಅಧ್ಯಾತ್ಮವಾದಗಳಿಗಿಂತ ಭಿನ್ನ. ಅವರ ಪ್ರಕಾರ 'ಶಿವ-ಶಕ್ತಿ' - ಸತ್ಯ. ಈ ಪುರುಷ ಮತ್ತು ಸ್ತ್ರೀ ಶಕ್ತಿಗಳಿಂದಾಗಿ ಜಗತ್ತು ಹುಟ್ಟಿದೆ. ಇದೆಲ್ಲ ಅದರ ಲೀಲೆ. ಆ ಶಕ್ತಿಯ ಜತೆ ಒಂದಾಗುವುದೇ ಜೀವನದ ಗುರಿ. ಕಾಯಕ, ಕರ್ಮ, ಇವೆಲ್ಲ ಗುರಿಗೆ ಪೂರಕ ಮತ್ತು ಸಾಧಕ.

ಜೈನ ಧರ್ಮ ಕೆಲಸ-ಕಾರ್ಯಗಳನ್ನು ಜನ್ಮಜನ್ಮಾಂತರಗಳ ಗಳಿಕೆಯ ಪೀಡೆ ಎಂದು ಭಾವಿಸಿ, ಪಾಪ ಪುಣ್ಯಗಳಿಗೆ ಕಾರಣವೆನ್ನುತ್ತದೆ. ಹಾಗಾಗಿ ವೃತ್ತಿಗಳು ಜೈನರ ಪ್ರಕಾರ ಮೋಕ್ಷ ಸಾಧಕಗಳಲ್ಲವೇ ಅಲ್ಲ. ವ್ಯಕ್ತಿಯನ್ನು ಸಮಾಜ ವಿಮುಖನನ್ನಾಗಿ ಮಾಡಲು ಅದು ಹಾಗೆ ಹೇಳುವುದು ಅನಿವಾರ್ಯ. ಸನ್ಯಾಸತ್ವದ ಕರ್ಮವೊಂದೇ ಜಿನತ್ವ ಸಾಧನೆಗೆ ಮಾರ್ಗ. ಸಮಾಜ, ಪರಿಶ್ರಮ, ವೃತ್ತಿ, ಜಾತಿ ಇವೆಲ್ಲ ಜೈನಕ್ಕೆ ಬಾಧಕಗಳು. ಆದರೆ ಜೈನ ಮತದ ಮಹತ್ವದ ಅಂಶಗಳೆಂದರೆ ಮಾನವ ಪ್ರಯತ್ನಕ್ಕೆ ಮಾತ್ರ ಬೆಲೆಯಿದೆ; ದೇವರ ಸಹಾಯ, ಬೆಂಬಲ, ಆಶೀರ್ವಾದ ಯಾವುದೂ ಇಲ್ಲ ಎಂದು ಹೇಳಿದ್ದು ಮತ್ತು ಯಾವ ಜೀವಕ್ಕೂ ಇನ್ನೊಂದು ಜೀವವನ್ನು ನೋಯಿಸುವ ಹಕ್ಕಿಲ್ಲ ಎಂದು ಪ್ರತಿಪಾದಿಸಿದ್ದು.

ಇವೆರಡನ್ನೂ ಒಪ್ಪದ ವೀರಶೈವ ಶಿವನನ್ನು ಮತ್ತು ಅವರ ಗುರು, ಲಿಂಗ, ಜಂಗಮ ರೂಪಗಳನ್ನು ಒತ್ತಿ ಹೇಳಿ ಭಕ್ತನ ಉದ್ಧಾರಕ್ಕೆ ಅವೆಲ್ಲ ಅಗತ್ಯ ಎಂದಿತು. ಭವಿಗಳನ್ನು ಪ್ರಸಂಗ ಬಂದರೆ ಕೊಲ್ಲಲು ಹೇಳುವ ಈ ಮತ (ಚನ್ನಬಸವಣ್ಣ ಹೇಳುವ ೬೪ ಶೀಲಗಳಲ್ಲಿ ಇದೂ ಒಂದು) ಜೈನರ ಅಹಿಂಸೆಯನ್ನು ಒಪ್ಪಲಾರದು.

'ದೇವರಿಲ್ಲ', ಪುರುಷ ಪ್ರಯತ್ನ, ಆತ್ಮಹಿಂಸೆಯನ್ನು ಸಹಿಸಿ ಅಹಿಂಸೆಯನ್ನು ಸಾಧಿಸುವುದನ್ನು ಪ್ರತಿಪಾದಿಸುವ

ಜೈನಕ್ಕೂ, ಗುರುಲಿಂಗ ಜಂಗಮ, ಶಿವತತ್ತ್ವಗಳನ್ನು ಆಶ್ರಯಿಸಿ, ವೃತ್ತಿಗಳನ್ನು ಮಾಡುತ್ತಲೇ ಬಯಲು ಗಳಿಸುವುದನ್ನು ಹೇಳುವ ವೀರಶೈವಕ್ಕೂ ಅಂತರ ಸಾಕಷ್ಟು.

ಕಾಲಾಂತರದಲ್ಲಿ ವೀರಶೈವ 'ಜಾತಿ'ಯಾದ ರೀತಿಯನ್ನು ನೋಡಿದರೆ ಈ ದೇಶದಲ್ಲಿ ಮೊದಲಿನಿಂದಲೂ ಆಗುತ್ತ ಬಂದ ಅನಾಹುತ ಪರಂಪರೆಯೇ ಮುಂದುವರಿಯಿತೆಂದು ಹೇಳಬೇಕು. ಜಂಗಮ ಜಾತಿಯಲ್ಲಿ ಹುಟ್ಟಿದವ ಮಾತ್ರ 'ಜಂಗಮ' ಇವರ ಕೆಳಗೆ ಭಕ್ತಕುಲ. ಈ ಕುಲಗಳೆಲ್ಲ ಜಾತಿಗಳಾದವು.

ಧರ್ಮವೊಂದು ಜಾತಿಯಾಗುವ ಸ್ಥಿತಿ ಭಾರತದ ಎಲ್ಲ ಧರ್ಮಗಳ ಮಾಮೂಲು ಕತೆ. ವಿಚಿತ್ರವೆಂದರೆ ಈ ಬಗೆಯ ಹಿನ್ನೆಲೆಯಿಲ್ಲದಿದ್ದರೂ ಭಾರತದ ಮುಸ್ಲಿಂ ಮತ್ತು ಕ್ರಿಶ್ಚಿಯನ್ ಮತಗಳಿಗೂ ಇದೇ ಲಕ್ಷಣ ಅಂಟಿದುದು. ಇದಕ್ಕೆ ಒಂದು ಕಾರಣ – ಜಾತಿ, ಬುಡಕಟ್ಟುಗಳಿಂದ ಈ ಮತಗಳಿಗೆ ಮತಾಂತರಗೊಂಡ ಜನರ 'ಸಂಸ್ಕೃತಿ ಪರಂಪರೆ'.

'ಧರ್ಮ'ಗಳು ಯಾವಾಗಲೂ ಮೇಲ್ಜಾತಿಗಳಾಗುತ್ತಿದ್ದವು. ಆದರೆ ಮೇಲ್ಜಾತಿಗಳಲ್ಲಿದ್ದ ಬಡವರು ಅಸ್ಪೃಶ್ಯ ಮತ್ತು ಕೆಳಜಾತಿಗಳಾಗುತ್ತಿದ್ದ ನಿದರ್ಶನಗಳು ನಮ್ಮನ್ನು ಚಕಿತಗೊಳಿಸಬೇಕಿಲ್ಲ. ಏಕೆಂದರೆ ಕೆಳಜಾತಿಗಳ ಮೇಲ್ವರ್ಗ ಇನ್ನೊಂದೆಡೆ, ಮೇಲ್ಜಾತಿಯಾಗುವ ಸಾಧ್ಯತೆಯೂ ಇತ್ತು. ಅಂದರೆ ವರ್ಗಗಳನ್ನು ಆಧರಿಸಿ ಮೇಲ್ಜಾತಿ ಮತ್ತು ಕೆಳಜಾತಿಗಳು ಹುಟ್ಟುತ್ತಿದ್ದ ವಾಸ್ತವ.

ಭಾರತದ ವರ್ಗ ಶೋಷಣೆಯ ಚರಿತ್ರೆಯಲ್ಲಿ ಮೇಲ್ಜಾತಿಗಳ ಮೇಲ್ವರ್ಗಗಳು ಆಡಿದ ಪಾತ್ರ ಕಡಿಮೆಯಿಲ್ಲ. ಕೆಳ, ತಳ ಜಾತಿಗಳ ಮೇಲ್ವರ್ಗದವರ ಚಾರಿತ್ರಿಕ ಪಾತ್ರದ ಕುರಿತೂ ಗಂಭೀರವಾಗಿ ಶೋಧನೆ ಆಗಬೇಕಿದೆ. ಶಾಸನಗಳು ಇದಕ್ಕೂ ಆಧಾರವಾಗುತ್ತವೆ. ಈ ಮೇಲ್ವರ್ಗಗಳು, ಮತಾಂತರ ಹೇಳುವ ಒಂದಿಲ್ಲೊಂದು ಧರ್ಮವನ್ನು ಸೇರಲು, ಇಲ್ಲವೆ ಅವುಗಳ ಬೆಂಬಲದಿಂದ ಸಾಮಾಜಿಕ ಸ್ಥಾನ-ಮಾನ ಗಳಿಸಲು ಯತ್ನಿಸುತ್ತಲೇ ಬಂದವು. ತುಂಡು ಅರಸರೋ, ಸಾಮಂತರೋ, ಚಕ್ರವರ್ತಿಗಳೋ ಆದಾಗ ಅವರನ್ನು ಕ್ಷತ್ರಿಯ ವರ್ಣಕ್ಕೆ ಸೇರಿಸುವ ಬ್ರಾಹ್ಮಣರ ಯತ್ನ ಒಂದೆಡೆ ಇದ್ದೇ ಇತ್ತು. ಹೀಗೆ ಧರ್ಮ, ಜಾತಿಗಳ ಜತೆ 'ವರ್ಣ'ವೂ ಚರಿತ್ರೆಯುದ್ದಕ್ಕೂ ಪ್ರಸ್ತುತವಾಗುತ್ತಲೇ ಇತ್ತು. ಕ್ಷತ್ರಿಯರೆಂಬ ಗೌರವದ ವರ್ಣಕ್ಕೆ ಸೇರಿದ ಇಂಥ ದೊರೆಗಳು 'ವರ್ಣಾಶ್ರಮ' ಸಂರಕ್ಷಣೆ ಎಂಬ ಕೊಳೆತುಹೋದ ಮಾತನ್ನು ಆಡುತ್ತಿದ್ದರು. ಅಂದರೆ ಅವರು ಜಾತಿ ವ್ಯವಸ್ಥೆಯನ್ನು ಸಂರಕ್ಷಿಸುತ್ತಿದ್ದರಷ್ಟೇ. ವೈದಿಕ ವರ್ಣ ಪದ್ಧತಿ (ದ್ರಾವಿಡ ?) ಜಾತಿ ಪದ್ಧತಿಯಷ್ಟೇ ಹಳೆಯದು. ಆದರೆ ಇವೆರಡೂ ಭಿನ್ನ. ಉದಾ : ಕರ್ನಾಟಕದಲ್ಲಿ 'ಲಿಂಗಾಯತ' ಮೇಲ್ಜಾತಿಯಾದರೂ ವರ್ಣದ ಪ್ರಕಾರ ಕೊನೆಯ 'ಶೂದ್ರ'ಕ್ಕೆ ಸೇರಿಸಲ್ಪಟ್ಟಿತು (ಈ ಲಿಂಗಾಯತ ಜಂಗಮರು ತಾವು ಶೈವ ಬ್ರಾಹ್ಮಣರೆಂದು ಹೇಳಿಕೊಳ್ಳಲು ಮಾಡುತ್ತಿದ್ದ ಪ್ರಯತ್ನ ತಮಾಷೆಯದು). 'ವರ್ಣ' ಚಲನವಿದ್ದಿತು ಆರ್ಷೇಯ ತತ್ತ್ವವಾದರೆ 'ಜಾತಿ' ಚಲನಶೀಲ ಸಾಮಾಜಿಕ ತತ್ತ್ವವಾಗಿತ್ತು. ಕಾಲಕಾಲಕ್ಕೆ ಹೊಸ ಹೊಸ ಜಾತಿಗಳು ಹುಟ್ಟುತ್ತಲೇ ಇದ್ದುವು. ಆದರೆ ವರ್ಣಗಳ ಸಂಖ್ಯೆ ನಾಲ್ಕನ್ನು ದಾಟಲಿಲ್ಲ (ಇವುಗಳ ಪರಸ್ಪರ ಸಂಪರ್ಕದಿಂದ ಸಂಕರ ವರ್ಣಗಳನ್ನು ಸ್ಮೃತಿಗಳು ಕಲ್ಪಿಸುತ್ತವೆ. ಇದನ್ನು 'ಜಾತಿ'ಗೆ ಅಂಟಿಸಲು ಯತ್ನಿಸುತ್ತವೆ).

ಕಾಡಿನಲ್ಲಿ ಸಕಲ ಸೌಲಭ್ಯಗಳೊಂದಿಗೆ ಆಶ್ರಮಗಳಲ್ಲಿದ್ದ ಒಂದು ಕಾಲದ ಬ್ರಾಹ್ಮಣ ಸಮುದಾಯ, ನಂತರ ಪುರ-ಪಟ್ಟಣಗಳಲ್ಲಿ ಅಥವಾ ಹಳ್ಳಿಗಳನ್ನೇ ಮಾರ್ಪಡಿಸಿ ಬ್ರಹ್ಮದೇಯ ಮತ್ತು ಅಗ್ರಹಾರಗಳಲ್ಲಿ ನೆಲೆಯೂರಿತು. ಊಳಿಗಮಾನ್ಯ ಪದ್ಧತಿಯ ಈ ಅತ್ಯಂತ ಮಹತ್ವದ ಪರಿವರ್ತನೆಯ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನಿಸಬೇಕಿದೆ. ಏಕೆಂದರೆ ಅಗ್ರಹಾರ ಪದ್ಧತಿಗೂ ಜಾತಿ ಶ್ರೇಣೀಕರಣ ಮತ್ತು ಅಸ್ಪೃಶ್ಯತೆಗೂ ಸಾಪೇಕ್ಷ ಸಂಬಂಧವಿರುವ ಸಾಧ್ಯತೆಯ ಬಗ್ಗೆ ಶೋಧನೆಗೆ ಅವಕಾಶವಿದೆ.

ಕರ್ನಾಟಕದ ಸುಮಾರು ಮೂವತ್ತು ಸಾವಿರ ಶಾಸನಗಳಲ್ಲಿ ಅಗ್ರಹಾರಕ್ಕೆ ಸಂಬಂಧಿಸಿದವುಗಳನ್ನು ಪ್ರತ್ಯೇಕವಾಗಿ ವ್ಯವಸ್ಥಿತವಾಗಿ ವ್ಯಾಸಂಗ ಮಾಡಬೇಕಿದೆ.

ಬ್ರಾಹ್ಮಣತ್ವ, ಜಿನತ್ವ, ಬೌದ್ಧತ್ವ, ವೀರಶೈವತ್ವ, ಇಸ್ಲಾಮತ್ವ, ಕ್ರಿಶ್ಚಿಯನತ್ವಗಳು ತಾತ್ವಿಕ ಬದ್ಧತೆ ಮತ್ತು ಆಚರಣೆಗಳಿಂದ ಮಾತ್ರ ಸಾಧಿತವಾಗುತ್ತವೆ. ಆದರೆ ಇಂಥ ನಂಬಿಕೆ ಮತ್ತು ಆಚರಣೆ ಕಾಲ ದೇಶ ಸ್ಥಿತಿಯನ್ನು ಅವಲಂಬಿಸಿರುತ್ತವೆ. ಇಂದಿನ ಜಾಗತಿಕ ಸ್ಥಿತಿಗತಿ ಇಂಥ 'ಸ್ಥಿತಿ'ಯನ್ನು ಸಾಧಿಸಲು ಪ್ರೇರಕವಾಗಲು ಸಾಧ್ಯವಿಲ್ಲ.

ಯಾವಾಗ ಧಾರ್ಮಿಕ ತತ್ತ್ವಗಳನ್ನು ಆಚರಣೆಗೆ ತರಲು ಕಷ್ಟಸಾಧ್ಯವಾಗುತ್ತದೆಯೋ ಆಗ ಆ 'ಧರ್ಮ' 'ಜಾತಿ'ಯಾಗುತ್ತದೆ. ಹುಟ್ಟಿಗೂ, ಜಾತಿಗೂ ಇರುವ ನಂಟು ಭಾರತೀಯ ಬುಡಕಟ್ಟು ಸಂಸ್ಕೃತಿಯಿಂದ ಬಂದಿರುವಂಥದು. ಇಲ್ಲಿ 'ಧರ್ಮ' ಮೇಲು, ಜಾತಿ ಕೀಳು ಎಂಬರ್ಥದಲ್ಲಿ ಹೇಳುತ್ತಿಲ್ಲ ಎಂಬುದನ್ನು ಗಮನಿಸಿ.

ಹೊಸದಾಗಿ ಹುಟ್ಟಿದ ಸಂದರ್ಭದಲ್ಲಿ ಮಾತ್ರ ಆ ಧರ್ಮದ ಅನುಯಾಯಿಗಳು ತತ್ತ್ವ ಮತ್ತು ಕ್ರಿಯೆಗಳ ನಂಟನ್ನು ಉಳಿಸಿಕೊಳ್ಳಲು ಹೆಣಗುತ್ತಾರೆ. ಆಯಾ ಕಾಲ, ದೇಶ ಸಂದರ್ಭಗಳೂ ಅವಕ್ಕೆ ಅನುಕೂಲವಿರುತ್ತವೆ. ಆದರೆ ಅದು ಕೂಡ ಸಂಪೂರ್ಣ ಸಫಲವಾಗಿರಲಾರದು. ಕಾಲ ದೇಶ, ಸ್ಥಿತಿ ಬದಲಾವಣೆಗೊಂಡ ಹಾಗೆ ತತ್ತ್ವಕ್ಕೂ ಆಚರಣೆಗೂ ಒಡಕು ಹುಟ್ಟಿ ವೈರುಧ್ಯ ಗಂಭೀರವಾಗುತ್ತದೆ.

ಭಾರತದಲ್ಲಿ ಧರ್ಮಗಳು ಹುಟ್ಟಿದ ಕಾಲದಲ್ಲಿದ್ದ ಸ್ಥಿತಿಗತಿ, ಗುಣಲಕ್ಷಣಗಳಿಗೂ, ಅವು ಕಾಲಾಂತರದಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಪಡೆಯುತ್ತ ಬಂದ ಬೇರೆ ಬೇರೆ ಆಕಾರಗಳ ಕುರಿತು ಕುತೂಹಲದ ಶೋಧನೆ ಸಾಧ್ಯವಿದೆ. ನಿದರ್ಶನಕ್ಕೆ – ಬ್ರಾಹ್ಮಣ ಜಾತಿಯೊಂದರಲ್ಲೇ ೮೦೦ ಒಳ ಪಂಗಡಗಳಿರುವುದಾಗಿ ಅಧ್ಯಯನವೊಂದು ತಿಳಿಸುತ್ತದೆ. ಇದರ ಜತೆ ಮೇಲ್ವರ್ಗಗಳು ಮಾಡುತ್ತ ಬಂದ ರಾಜಕೀಯದ ಕುರಿತೂ ಯೋಚಿಸಬೇಕಾಗುತ್ತದೆ. ಏಕೆಂದರೆ ಒಂದು ಧರ್ಮ, 'ಜಾತಿ'ಯಾದಾಗ ಆ ಜಾತಿಯ ಮೇಲ್ವರ್ಗ ತಮ್ಮ ಧರ್ಮವನ್ನು ಶೋಷಣೆಯ ಅಸ್ತ್ರವನ್ನಾಗಿ ಮಾಡಿಕೊಳ್ಳುತ್ತದೆ. ಅದು ಸಾಂಸ್ಥೀಕರಣಗೊಂಡ ಆ ಧರ್ಮದ ಸುತ್ತ ಆಣಿನೆರೆಯುತ್ತದೆ. ಅಂತಿಮವಾಗಿ ಪ್ರಭುತ್ವದ ಮೇಲೆ ಹಿಡಿತ ಸಾಧಿಸುತ್ತದೆ. ಹೀಗೆ ವ್ಯವಸ್ಥೆಯ ಶೋಷಕ ಶಕ್ತಿಯಾಗುತ್ತದೆ. ಇಂದಿನ ಲಿಂಗಾಯತ ಮಠಾಧಿಪತಿಗಳು ಮತ್ತು ಪ್ರಭುತ್ವದ ಸಂಬಂಧವನ್ನು ಇಲ್ಲಿ ನಿದರ್ಶನವಾಗಿ ಸೂಚಿಸಬಹುದು.

'ಧರ್ಮ'ದ ತತ್ತ್ವಗಳನ್ನು ಕಾಲ ದೇಶ ಸ್ಥಿತಿಯ ಹಿನ್ನೆಲೆಯಲ್ಲಿ ಅವಲೋಕಿಸಬೇಕು. ಆದರೆ ಧರ್ಮ ಕಾಲಾತೀತ, ವ್ಯವಸ್ಥಾತೀತವೆಂದು ನಂಬಿಸುವ ನಿರಂತರ ಯತ್ನ ನಡೆದಿರುತ್ತದೆ. ಧರ್ಮ ತತ್ತ್ವಗಳನ್ನು ವ್ಯವಸ್ಥೆಯ ಆಚೆ ಇಟ್ಟು ನೋಡುವುದರಲ್ಲಿಯ ಅನಾಹುತವನ್ನು ಎಲ್ಲರೂ ತಿಳಿಯಬೇಕಿದೆ. ಅಂದರೆ ಸರ್ವಕಾಲಿಕ ಸತ್ಯಗಳೆಂಬುವು ಯಾವ ಧರ್ಮದಲ್ಲಿಯೂ ಇರಲಾರದು.

ನೈತಿಕ ಮೌಲ್ಯಗಳನ್ನು ರಕ್ಷಿಸಿ, ಸಾಮಾಜಿಕ ನೆಮ್ಮದಿಯನ್ನು ಧರ್ಮಗಳು ಕಾಪಾಡುತ್ತವೆಂಬ ಭ್ರಮೆಯನ್ನು ಪ್ರಚುರಪಡಿಸಲಾಗುತ್ತಿದೆ. ಆದರೆ ನೀತಿಗೂ, ಧರ್ಮಗಳಿಗೂ ಸಂಬಂಧ ಕಲ್ಪಿಸುವುದು ತಪ್ಪು. ಹೀಗೆ ಮಾಡಿದರೆ ಸಾಂಸ್ಕೃತಿಕ ಪರಂಪರೆ ಮತ್ತು ಸಂವಿಧಾನದ ಉದಾತ್ತ ತತ್ತ್ವಗಳಿಗೆ ಅಪಚಾರ ಮಾಡಿದಂತಾಗುತ್ತದೆ.

ಧರ್ಮ ಮತ್ತು ಸಂಸ್ಕೃತಿಗಳಿಗಿರುವ ಸಂಬಂಧದ ಬಗೆಗೂ ತಪ್ಪು ಕಲ್ಪನೆಗಳಿವೆ. ಇದನ್ನು ಬಗೆಹರಿಸಿಕೊಳ್ಳಲೇಬೇಕಿದೆ. ಸಂಸ್ಕೃತಿಯಲ್ಲಿ ಧರ್ಮ, ಜಾತಿ ತತ್ತ್ವಗಳ ಬೆರಕೆ ಎಷ್ಟು ? ಅದನ್ನು ಹೊರತುಪಡಿಸಿ ಸಂಸ್ಕೃತಿಯ ಉದಾತ್ತ, ಮಾನವೀಯ ನೆಲೆ ಯಾವುದು ಎಂಬ ಚರ್ಚೆ ಅಗತ್ಯವಿದೆ. ಏಕೆಂದರೆ ಭಾರತೀಯ ಸಮಾಜ ಇಂದು ಎದುರಿಸುತ್ತಿರುವ ಹಲವಾರು ಗಂಭೀರ ಸವಾಲುಗಳಿಗೆ ವೈಜ್ಞಾನಿಕವಾದ ಉತ್ತರಗಳ ಜರೂರಿದೆ.

ಎಸ್. ಎಸ್. ಹಿರೇಮಠ
ಕನ್ನಡ ಪ್ರಾಧ್ಯಾಪಕ, ಎ.ಡಿ.ಬಿ. ಪ್ರಥಮದರ್ಜೆ ಕಾಲೇಜು, ಹರಪನಹಳ್ಳಿ - ೫೮೩ ೧೩೧

## ಹಿಂಸೆ

ಮರದಲಿ ಗುಂಪುಗೂಡಿ
ನಲಿಯುತ್ತಿದ್ದ ಹಕ್ಕಿಗಳು
ಸಿಡಿಮದ್ದ ಸದ್ದು ಕೇಳಿದ್ದೆ
ಎದೆ ಒಡೆದು ಹಾರಿದವು
ಎಂಟು ದಿಕ್ಕುಗಳಿಗೆ,
ಮೋಸದ ಮದ್ದನು
ತಿನ್ನಲು ಬಂದ ಅಮಾಯಕ ಹಂದಿ
ಚಿಂದಿಚೂರಾಗಿ ಚೆಲ್ಲಿತ್ತು
ಅದೇ ಮರದ ಕೆಳಗೆ
ಎಂಟು ದಿಕ್ಕುಗಳಿಗೆ

ರವಿಶಂಕರ ಶೆಟ್ಟಿ ಒಡ್ಡಂಬೆಟ್ಟು
ಉಪನ್ಯಾಸಕ, ಸರಕಾರಿ ಪದವಿ ಪೂರ್ವ ಕಾಲೇಜು
ಕನ್ಯಾನ– ೫೭೪೨೭೯, ಬಂಟ್ವಾಳ (ತಾ)

# ಎರಡೂ ಕೈ ತಟ್ಟಿದರೆ ತಾನೆ ಚಪ್ಪಾಳೆ ?

ಇತ್ತೀಚೆಗಾಗಿ ಈ ಎಡಗೈ (ಮಾದಿಗ) ಮತ್ತು ಬಲಗೈ (ಹೊಲಯ) ಎಂಬ ಭಿನ್ನ ಭೇದ ಯಾಕೋ ಅತಿರೇಕಕ್ಕೆ ಹೋಗುತ್ತಿದೆ. ಆದ್ದರಿಂದ ಎಡಗೈ ದಲಿತರು ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಪ್ರತಿಮೆಯನ್ನು ನೇಪಥ್ಯಕ್ಕೆ ಸರಿಸಿ, ಬಾಬು ಜಗಜೀವನ ರಾಮರ ಪ್ರತಿಮೆಯನ್ನು ತಂದು ಮುನ್ನೆಲೆಗಿಟ್ಟು ತಮ್ಮ ನಾಯಕನೆಂದು ಸಾರುತ್ತ 'ಮಾದಿಗ ದಂಡೂರ' ಸಂಘಟನೆಗಳನ್ನು ಕಟ್ಟುತ್ತ, ದಲಿತ ಸಂಘರ್ಷ ಸಮಿತಿಗೆ ಪರ್ಯಾಯವೆಂಬಂತೆ ಪಾಲುಗಾರಿಕೆಗೆ ನಿಂತಿದ್ದಾರೆ. ಆದರೆ ಈ ಎಡಗೈ ಮತ್ತು ಬಲಗೈ ಎಂಬ ಒಡಕು ಯಾವ ಕಾರಣಕ್ಕೋ ತಿಳಿಯದಾಗಿದೆ. ಹೊನ್ನಯ್ಯ ಮತ್ತು ಹರಳಯ್ಯರೆಂಬ ಜಾನಪದ ವೀರರನ್ನು ತಮ್ಮ ಒಂದೊಂದು ಗುಂಪಿಗೂ ಸಮೀಕರಿಸಿಕೊಂಡು ಹೆಮ್ಮೆ ಪಟ್ಟುಕೊಳ್ಳುವುದರಲ್ಲಿಯೇ ಇವರು ತಲ್ಲೀನರಾದಂತೆ ಕಾಣುತ್ತದೆ. ಆದರೆ ಯಾಕೆ ಈ ಒಡಕು? ಯಾಕೆ ಈ ಗುಂಪುಗಾರಿಕೆ? ಹೀಗೆ ಕವಲೊಡೆಯುತ್ತ ಹೋದರೆ ಸನಾತನ ಹಿಂದು ಜಾತಿ ಪದ್ಧತಿಯ ಪಾಪ ಕೂಪದಲ್ಲಿಯೇ ಕಂಡೂ ಕಂಡು ಬಿದ್ದಂತಾಗುವುದಿಲ್ಲವೆ? ಅಥವಾ 'ಎಡಗೈ' ಎಂದರೆ 'ಕೀಳು' ಮತ್ತು 'ಬಲಗೈ' ಎಂದರೆ 'ಮೇಲು' ಎಂಬ ಹಿಂದುತ್ವವಾದಿಗಳ ಕುತಂತ್ರವೇ ಇಲ್ಲೂ ಕೆಲಸ ಮಾಡಿದೆಯೋ ತಿಳಿಯದಾಗಿದೆ. ಈ ಭಿನ್ನ ಭೇದಕ್ಕೆ ಯಾವುದೋ ಜಾನಪದ ನಂಬಿಕೆಯನ್ನು ಬಿಟ್ಟರೆ ಅಂಥ ವೈಜ್ಞಾನಿಕವಾದ ಆಧಾರಗಳೇನೂ ಇದ್ದಂತಿಲ್ಲ. ಆದರೆ ಈ ಒಡಕಿನ ಲಾಭ ಮಾತ್ರ ಯಾರಿಗೆ ಎಂಬುದು ಸ್ಪಷ್ಟ. ಈ ಹಿನ್ನೆಲೆಯಲ್ಲಿ ನಾವೀಗ ಬಾಬಾಸಾಹೇಬ್ ಅಂಬೇಡ್ಕರ್ ಹಾಗೂ ಬಾಬು ಜಗಜೀವನ ರಾಮರ ಜೀವಿತ ಸಾಧನೆಗಳೇನೆಂಬುದನ್ನು ತೂಗಿ ನೋಡಬೇಕಾಗಿದೆ. ಇಂಥ ನಾಯಕರನ್ನು ಕೇವಲ ಬಲಗೈ, ಎಡಗೈ ಎಂದು ಸೀಮಿತಗೊಳಿಸಿ ಹೇಳುವುದು ಮಾತ್ರ ಸುತಾರಂ ಒಪ್ಪತಕ್ಕ ಮಾತಲ್ಲ. ಅದರಲ್ಲೂ ಡಾ॥ ಅಂಬೇಡ್ಕರ್ ಅವರನ್ನು ಇಂಥ ಒಂದು ಪಂಗಡಕ್ಕೆ ಸೀಮಿತಗೊಳಿಸಿ ಮಾತನಾಡುವುದು ಆ ಮಹಾ ಮಾನವತಾವಾದಿಗೆ ನಾವು ಮಾಡುವ ಅಪಚಾರವೇ ಸರಿ. ಪ್ರಥಮತಃ ಈ ಇಬ್ಬರು ವ್ಯಕ್ತಿಗಳ ಗೊತ್ತು ಗುರಿ ಏನೆಂದರೆ ದಲಿತ ಕೋಟಿಯ ಬಂಧವಿಮೋಚನೆ. ಪಶುಗಳಿಗೂ ಕಡೆಯಾಗಿ ಬದುಕುತ್ತಿದ್ದವರ ಒಡಲಲ್ಲಿ ಅಭಿಮಾನವನ್ನು ತುಂಬುವುದು; ತಾವೂ ಮನುಷ್ಯರು ಎಂಬ ತಿಳಿವನ್ನು ಮೂಡಿಸುವುದು.

ದಲಿತರು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಸಾಂಸ್ಕೃತಿಕವಾಗಿ ಸಬಲರಾಗಬೇಕೆಂಬುದೇ ಇವರೀರ್ವರ ಹೆಬ್ಬಯಕೆ. ಆದರೆ ಆ ಗುರಿ ಮುಟ್ಟುವುದಕ್ಕಾಗಿ ಇವರು ಹೊರೆಟದ್ದು ಮಾತ್ರ ತದ್ವಿರುದ್ಧ ಮಾರ್ಗಗಳಲ್ಲಿ. ಭೂಮಿ ಗುಂಡಾಗಿದೆ ಎಂಬ ಪ್ರಮೇಯದ ಪ್ರಕಾರ ಇವರಿಬ್ಬರೂ ಮಾರ್ಗ ಮಧ್ಯೆ ಸಂಧಿಸಿದರೂ ಮತ್ತೆ ಎದುರುಬದರಾಗಿಯೇ ಮುನ್ನಡೆದರು ಎಂದರೆ ಸರಿ ಹೋದೀತು. ಇದಕ್ಕೆ ಸಮರ್ಥನೆಯಾಗಿ ಕೆಲವು ಸಂಗತಿಗಳನ್ನು ಇಲ್ಲಿ ಉಲ್ಲೇಖಿಸಿದರೆ ಇವರಿಬ್ಬರ ಇತಿಮಿತಿಗಳೇನು ಎಂಬುದರ ಬಗ್ಗೆ ಕೊಂಚ ಅರಿವಾದೀತು.

ಅಂಬೇಡ್ಕರ್ ಅವರು ಜಾತಿಪದ್ಧತಿಯನ್ನು ಜಾರಿಗೆ ತಂದ ಮನುವಾದಿಗಳ ಹಿಂದೂ ಧರ್ಮವನ್ನು ಸಾರಾಸಗಟಾಗಿ ವಿರೋಧಿಸಿದರು. ಅಸ್ಪೃಶ್ಯರ ಎಲ್ಲ ಅನಿಷ್ಟಗಳಿಗೂ ಶಾಪಪ್ರಾಯವಾಗಿರುವ ಜಾತಿ ಪದ್ಧತಿಯನ್ನೇ ಹೊಣೆಯನ್ನಾಗಿ ಮಾಡಿದರು. ಈ ಕಾರಣದಿಂದಲೇ ಸುಧಾರಣಾವಾದಿಯಾದ ಗಾಂಧೀಜಿಯನ್ನೂ ವಿರೋಧಿಸಿದರು. ಆದ್ದರಿಂದಲೇ ಗಾಂಧೀಜಿ ರಾಷ್ಟ್ರದ ದಾಸ್ಯ ವಿಮೋಚನೆಗಾಗಿ ಪರಿತಪಿಸುತ್ತಿದ್ದರೆ, ಅಂಬೇಡ್ಕರ್ ತನ್ನ ಜನಾಂಗದವರ ಬಂಧ ವಿಮೋಚನೆಗಾಗಿ ಹೋರಾಡುತ್ತಿದ್ದರು. ದೇಶದ ಸ್ವಾತಂತ್ರ್ಯಕ್ಕಿಂತ ಅವರಿಗೆ ದಲಿತರ ಬಿಡುಗಡೆಯೇ ಮುಖ್ಯವಾಗಿತ್ತು, ಅದು ಅನಿವಾರ್ಯವಾಗಿತ್ತು.

ಆದರೆ ಗಾಂಧೀಜಿಯ ಅನುಯಾಯಿಯೂ ಕಾಂಗ್ರೆಸ್ಸಿನ ಕಾರ್ಯಕರ್ತರೂ ಆಗಿದ್ದ ಜಗಜೀವನರಾಮರಿಗೆ ದೇಶದ ಸ್ವಾತಂತ್ರ್ಯವೇ ಮುಖ್ಯವಾಗಿ ಕಂಡಿತು. ದೇಶದ ಸ್ವಾತಂತ್ರ್ಯದೊಂದಿಗೆ ದಲಿತರ ದಾಸ್ಯದ ನೊಗವೂ ಕಳಚುತ್ತದೆ ಎಂದು ಭಾವಿಸಿದರು; ಆದರೆ ಸನಾತನ ಇತಿಹಾಸವನ್ನು ಅವರು ಮರೆತರು. ಅದು ಬಹಳ ಕ್ರೂರವಾದುದು ಎಂಬುದನ್ನು ಕಾಣದಾದರು.

> **ಸಾವಿರಾರು ವರುಷಗಳಿಂದಲೂ ಆಚರಣೆಯಲ್ಲಿರುವ ಅನಿಷ್ಟ ಜಾತಿ ಪದ್ಧತಿ ಭಾರತೀಯ ಜನಜೀವನಕ್ಕೆ ಅಂಟಿಕೊಂಡು ಬಂದಿರುವ ಒಂದು ದೊಡ್ಡ ಕಳಂಕ. ಅಸ್ಪೃಶ್ಯರು, ಕೆಳಜಾತಿಯ ಜನರು ಸಂಘಟಿತರಾಗಿ ಈ ಅಮಾನವೀಯ ಶೋಷಣೆಯ ವಿರುದ್ಧ ಹೋರಾಡಲು ಮೊದಲು ಎದ್ದುನಿಂತದ್ದು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ. ಆ ಹೋರಾಟಗಳಿಗೆ ಧ್ವನಿ ನೀಡಿದ್ದು ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್. ಇಡೀ ಚಳುವಳಿಯು ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆದದ್ದು ಅದೇ ದಿನಗಳಲ್ಲಿ. ದುರಂತವೆಂದರೆ, ಕ್ರಮೇಣ ಇಂತಹ ಚಳುವಳಿಗಳು ಆಳುವ ವರ್ಗದ, ಮೇಲ್ಜಾತಿಯವರ ಪಿತೂರಿ ಕುತಂತ್ರಗಳು ಮತ್ತು ತಮ್ಮದೇ ನೇತ್ಯಾತ್ಮಕ ಹಾಗೂ ಸ್ವಾರ್ಥ ಧೋರಣೆಗಳಿಂದಾಗಿ ಒಡೆದು ಹೋಳಾಗುತ್ತಿವೆ. ಇವುಗಳ ನಾಯಕರು ರಾಜಕೀಯ ಪಗಡೆಯಾಟದಲ್ಲಿ ಕ್ಷುದ್ರ ವ್ಯಕ್ತಿಗಳ ಕೈಗೊಂಬೆಗಳಾಗುತ್ತಿದ್ದಾರೆ. ಈಗಲಾದರೂ ಈ ಎಲ್ಲ ಗುಂಪುಗಳು ಐಕ್ಯತೆಯನ್ನು ಸಾಧಿಸಿ ಒಂದುಗೂಡಿದರೆ ಒಂದು ಪರಿಣಾಮಕಾರಿ ಸಾಮಾಜಿಕ ಮತ್ತು ರಾಜಕೀಯ ಶಕ್ತಿಯಾಗುವ ಸಾಧ್ಯತೆಗಳಿವೆ.**

**ಪ್ರೊ॥ ಶಿವರಾಮಯ್ಯ**

ಅಂಬೇಡ್ಕರ್ ವಿಜ್ಞಾನ ಹಾಗೂ ಮಾನವ ಶಾಸ್ತ್ರಗಳ ಆಧಾರದ ಮೇಲೆ ಅಸ್ಪೃಶ್ಯರು ಹಿಂದೂಗಳಲ್ಲ. ಅವರೂ ಸಹ ಮುಸ್ಲಿಂ, ಸಿಖ್, ಕ್ರಿಶ್ಚಿಯನ್ ಮುಂತಾದ ಧರ್ಮೀಯರಂತೆ ಹಿಂದೂಸ್ತಾನದಲ್ಲಿ ವಾಸಿಸುವ ಒಂದು ಸ್ವತಂತ್ರ ಜನಾಂಗ ಎಂದು ಪ್ರತಿಪಾದಿಸಿದರು. ಸಿಂಧೂ ನದಿಯ ಈಚೆಕಡೆಯ ಭೂವಲಯಕ್ಕೆ ಸೇರಿದ ಭಾಗವನ್ನು ನಿರ್ದೇಶಿಸುವ ಶಬ್ದ ಹಿಂದೂಸ್ಥಾನ ಎಂಬುದನ್ನು ಸಂಶೋಧಿಸಿ ವಿವರಿಸಿದರು. ಕಡೆಗೆ ಜನಾಂಗ ತಾರತಮ್ಯ ಮಾಡುವ ಇಂಥ ಕೊಳಕು ಧರ್ಮದಲ್ಲಿ ತಾನಿರಲಾರೆ ಎಂದು ಪ್ರತಿಭಟಿಸಿ ಸು. ೧೦ ಲಕ್ಷ ತನ್ನ ಹಿಂಬಾಲಕರೊಂದಿಗೆ ಬೌದ್ಧ ಧರ್ಮವನ್ನು ಸ್ವೀಕರಿಸಿಬಿಟ್ಟರು. ಹೀಗೆ ಮತಾಂತರಕ್ಕೆ ಅವರು ಪ್ರೋತ್ಸಾಹಿಸುವ ಮೂಲಕ ಇಂಡಿಯಾದ ದಲಿತ ಕೋಟಿಗೆ ಆತ್ಮ ವಿಶ್ವಾಸವನ್ನು ತುಂಬಿದರು; ಅಭಿಮಾನವನ್ನು ಮೆರೆದರು. ಜಾತ್ಯತೀತ ದೃಷ್ಟಿಯಿಂದ ರಾಜ್ಯಾಂಗವನ್ನು ನೇರ್ಪಡಿಸಿ ನಮ್ಮೆಲ್ಲರ ಕೃತಜ್ಞತೆಗಳಿಗೆ ಪಾತ್ರರಾದರು.

ಆದರೆ ಜಗಜೀವನ ರಾಮರು ಅಸ್ಪೃಶ್ಯರೂ ಹಿಂದೂಗಳೇ ಎಂದು ಒಪ್ಪಿಕೊಳ್ಳುವ ಮೂಲಕ ಯಾವುದೇ ಮತಾಂತರಕ್ಕೆ ವಿರೋಧಿಯಾಗಿದ್ದರು. ಆದರೆ ಇದರ ಲಾಭವನ್ನು ಪಡೆದವರು ಮಾತ್ರ ಪ್ರಚ್ಛನ್ನ ಹಿಂದುತ್ವವಾದಿಗಳಾದ ದಳ್ಳಾಳಿ ಕಾಂಗ್ರೆಸ್ಸಿಗರು. ಈ ವಾಸ್ತವ ಮಾತ್ರ ಆಗ ಇವರ ಅರಿವಿಗೆ ಬರಲಿಲ್ಲ. ಆದ್ದರಿಂದ ಮತಾಂತರಕ್ಕೆ ಅಣಿಯಾಗಿದ್ದ ಅನೇಕ ದಲಿತ ಸಭೆ ಸಮಾರಂಭಗಳನ್ನು ರಾಮ್ ತಡೆದರೂ ಕೂಡ.

ರಾಜ್ಯಾಂಗ ಶಿಲ್ಪಿಯಾದ ಡಾ॥ ಅಂಬೇಡ್ಕರ್ ದಲಿತರ ಆಶೋತ್ತರಗಳನ್ನೂ ಹಕ್ಕೊತ್ತಾಯಗಳನ್ನೂ ಈಡೇರಿಸುವ ನಿಟ್ಟಿನಲ್ಲಿ ಅನೇಕ ಸವಲತ್ತುಗಳನ್ನು ರಾಜ್ಯಾಂಗದಲ್ಲಿ ಸೇರ್ಪಡೆ ಮಾಡಿದರು. ಮುಖ್ಯವಾಗಿ **ಮೀಸಲಾತಿ ಕುರಿತ ಶಾಸನ** ಹಾಗೂ **ಅಸ್ಪೃಶ್ಯತೆ ಆಚರಣೆ ಶಿಕ್ಷಾರ್ಹ ಅಪರಾಧ** ಎಂಬುದನ್ನು ಕಾನೂನಿನ ಚೌಕಟ್ಟಿಗೆ ತಂದದ್ದು ಅವರ ದೂರದರ್ಶಿತ್ವಕ್ಕೆ ನಿದರ್ಶನಗಳಾಗಿವೆ. ಗಾಂಧೀಜಿಯ ಉದಾರ ನಿಲುವನ್ನು ಒಪ್ಪದ ಅಂಬೇಡ್ಕರ್ ದಲಿತರ ಪರವಾದ ವಾಸ್ತವ ಸ್ಥಿತಿಗತಿಯನ್ನು ಚೆನ್ನಾಗಿ ಬಲ್ಲವರಾಗಿದ್ದರು. ದಲಿತರ ಸಮಸ್ಯೆಗಳಿಗಾಗಿ ಟೊಂಕಕಟ್ಟಿ ದುಡಿಯುತ್ತಿದ್ದ ಅವರನ್ನು ಕೆಲವು ಹಿಂದುತ್ವವಾದಿಗಳು ರಾಷ್ಟ್ರ ವಿರೋಧಿ ಎಂದು ಆರೋಪಿಸಿದರೂ ಅವರು ಜಗ್ಗಲಿಲ್ಲ.

ಆದರೆ, ಅವರ ಕಿರಿಯ ಸಮಕಾಲೀನರಾಗಿದ್ದ ಜಗಜೀವನ ರಾಮರು ಗಾಂಧೀಜಿಯ, ಕಾಂಗ್ರೆಸ್ಸಿನವರ ಸಹವರ್ತಿಯಾಗಿದ್ದ ಕಾರಣ ದಲಿತ ಸಮಸ್ಯೆಗಳನ್ನು ಪ್ರತ್ಯೇಕವಾಗಿಟ್ಟು, ನೋಡದವರಾಗಿದ್ದರು. ಸವರ್ಣೀಯ ಹಿಂದುಗಳ ಮನಃಪರಿವರ್ತನೆಯನ್ನು ಮಾಡಬಹುದೆಂಬ ಗಾಂಧೀ ಆದರ್ಶವನ್ನು ನಿಜವೆಂದು ಭ್ರಮಿಸಿದ್ದರು. ಆದ್ದರಿಂದ ಕೇವಲ ಕಾನೂನುಗಳು ದಲಿತರ ಸಮಸ್ಯೆಗಳನ್ನು ನಿವಾರಿಸಬಲ್ಲವೆಂದು ಶಂಕಿತರಾಗಿದ್ದರು. ಆದ್ದರಿಂದ ಶತಶತಮಾನಗಳ ಕಪ್ಪು ಇತಿಹಾಸವನ್ನು ಮರೆತು ಉದಾರವಾದಿ ಚಿಂತಕರಾದರು.

ಗಾಂಧಿ ಮತ್ತು ಅಂಬೇಡ್ಕರ್ ನಡುವೆ ಆದ **ಪೂನಾ ಒಪ್ಪಂದದ** ಪ್ರಕಾರ ಅಂಬೇಡ್ಕರ್ ಮಾಡಿದ ತ್ಯಾಗವೇನು, ಅದಕ್ಕಾಗಿ ಅವರು ಪಡೆದ ಭಾಗ್ಯವೇನು, ಎಂಬುದು ಈಗ ಇತಿಹಾಸ. ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಬಿಟ್ಟುಕೊಟ್ಟ ಅಂಬೇಡ್ಕರ್ ಕೇವಲ ಮೀಸಲು ಕ್ಷೇತ್ರಗಳ ಕೊಡುಗೆಗೆ ಸಮಾಧಾನಪಟ್ಟುಕೊಳ್ಳಬೇಕಾಯಿತು. ಮಗುವಿನ ರೀತಿ ಚಂಡಿ ಹಿಡಿದು ಗಾಂಧೀಜಿ ಇದನ್ನು ಸಾಧಿಸಿಕೊಂಡು ಬಿಟ್ಟರು. ಅದಿರಲಿ.

ಆದರೆ ಜಗಜೀವನ ರಾಮರು ಹೀಗೆ ದಲಿತರಿಗೆ ದಕ್ಕಿದ ಈ ಮೀಸಲು ಕ್ಷೇತ್ರಗಳ ಫಲಾನುಭವದಲ್ಲಿ ಇತರ ನಾಯಕರೊಂದಿಗೆ ತಾವೂ ಒಬ್ಬರಾಗಿದ್ದರು. ಅಲ್ಲದೆ ತಮ್ಮ ರಾಜಕೀಯ ಜೀವನದ ಜೀವಿತಕಾಲ ಕಡೆಯವರೆವಿಗೂ ಮೀಸಲು ಕ್ಷೇತ್ರಗಳಿಂದಲೇ ಗೆದ್ದು ಬರುತ್ತಿದ್ದರು. ಒಮ್ಮೆಯಾದರೂ ಕೂಡ ಜನರಲ್ ಕ್ಷೇತ್ರಗಳಲ್ಲಿ ಸ್ಪರ್ಧಿಸಲಿಲ್ಲ, ಏಕೆ? ಹಾಗಾದರೆ ಅಂಬೇಡ್ಕರ್ ವಿಚಾರಗಳನ್ನೇಕೆ ಬೆಂಬಲಿಸಲಿಲ್ಲ ಎಂಬ ಪ್ರಶ್ನೆ ಹಾಗೇ ಉಳಿದುಬಿಡುತ್ತದೆ. ಅಭಿಮಾನ ಸತ್ತದ ಕಣ್ಣನ್ನು ಮುಚ್ಚಬಾರದು.

ಅಂಬೇಡ್ಕರ್ ಅವರು ಒಮ್ಮೆ ಪಾರ್ಲಿಮೆಂಟನಲ್ಲಿ ಮಂಡಿಸಿದ ಮಹಿಳೆಯರಿಗೆ ಸಂಬಂಧಿಸಿದ ಮಸೂದೆಯಲ್ಲಿ ತಾರತಮ್ಯಗಳಿದ್ದು ದಲಿತ ಮಹಿಳೆಯರನ್ನು ಕಡೆಗಣಿಸಿದೆ ಎಂಬ ಕಾರಣಕ್ಕೆ ವಿರೋಧಿಸಿ ನೆಹರೂ ಮಂತ್ರಿಮಂಡಲಕ್ಕೆ ರಾಜೀನಾಮೆ ಕೊಟ್ಟು ಹೊರಬಂದರು.

ಆದರೆ ಜಗಜೀವನ ರಾಮರಲ್ಲಿ ಇಂಥ ತತ್ವಾಧಾರಿತ ರಾಜಕಾರಣಕ್ಕೆ ಎಡೆಯಿರಲಿಲ್ಲ. ಉಳಿದ ವಿಚಾರಗಳು ಹಾಗಿರಲಿ, ೧೯೭೫ರಲ್ಲಿ ಇಂದಿರಾಗಾಂಧಿಯವರು ದೇಶದ ಮೇಲೆ ತುರ್ತುಸ್ಥಿತಿಯನ್ನು ಜಾರಿಗೊಳಿಸಿದ ಸಂದರ್ಭದಲ್ಲಿ ಕೂಡ ಇವರು ತಮ್ಮ ವಿರೋಧವನ್ನು ವ್ಯಕ್ತಪಡಿಸಲಿಲ್ಲ. ಕಡೆಗೆ ಇಂದಿರಾಗಾಂಧಿ ಅವರೇ ೧೯೭೭ರಲ್ಲಿ ಚುನಾವಣೆಯನ್ನು ಘೋಷಿಸಿದ ಕೂಡಲೇ ಕಾಂಗ್ರೆಸ್ ಪಕ್ಷವನ್ನು ತೊರೆದು ಜನತಾಪಕ್ಷದತ್ತ ಧಾವಿಸಿ ಬಂದರು. ಇಲ್ಲಿಯೂ ಕೂಡ ಚುನಾವಣೆಗೆ ಮುನ್ನ ಪ್ರಧಾನಿ ಪಟ್ಟದ ಆಮಿಷ ಒಡ್ಡಿದ್ದ ಜನತಾಪಕ್ಷ ಮೊರಾರ್ಜಿ ದೇಸಾಯಿಯವರನ್ನು ಪ್ರಧಾನಿ ಮಾಡಿ, ಜಗಜೀವನ ರಾಮರಿಗೆ ಉಪಪ್ರಧಾನಿಯನ್ನಾಗಿ ಮಾಡಿತು. ಆದರೆ ಇವರು ಯಾವ ಪ್ರತಿರೋಧವನ್ನೂ ಆಗ ವ್ಯಕ್ತಪಡಿಸದೆ ಅಷ್ಟರಲ್ಲಿಯೇ ತೃಪ್ತರಾಗಿ ಸುಮ್ಮನಾದರು.

ಹೀಗಿರುವಲ್ಲಿ ಮತ್ತೆ ೧೯೮೦ರಲ್ಲಿ ಮಧ್ಯಕಾಲೀನ ಚುನಾವಣೆ ಘೋಷಣೆಯಾಯಿತು. ಈ ಬಾರಿಯೂ ಜನತಾಪಕ್ಷ ಜಗಜೀವನ ರಾಮರ ಹೆಸರನ್ನೇ ಪ್ರಧಾನಿಪಟ್ಟಕ್ಕೆ ಸೂಚಿಸಿತು. ಆದರೆ ನಡೆದದ್ದೇ ಬೇರೆ. ಜನತಾ ಪಕ್ಷದಲ್ಲಿದ್ದ ಜನಸಂಘೀಯರು ಇವರ ವಿರುದ್ಧ ಪ್ರಚಾರ ಮಾಡಿದರು. ಇವರ ಪ್ರಧಾನಿ ಪಟ್ಟದ ಉಮೇದುವಾರಿಕೆಯನ್ನು ಸಂಘ ಪರಿವಾರದವರು ಸಹಿಸದಾದರು. ಕಡೆಗೆ ಜನತಾ ಪಕ್ಷ ದಯನೀಯ ಸೋಲನ್ನು ಅನುಭವಿಸಿತು. ಇಂದಿರಾ ಕಾಂಗ್ರೆಸ್ ಮತ್ತೆ ಜಯಭೇರಿ ಹೊಡೆದು ಇಂದಿರಾಗಾಂಧಿ ಪ್ರಧಾನಿಯಾದರು. ಆಗಲೇ ಜಗಜೀವನ ರಾಮರ ಕಣ್ಣು ತೆರೆದದ್ದು. ಸವರ್ಣೀಯ ಹಿಂದೂಗಳು ಯಾವ ಪಕ್ಷದಲ್ಲಿ ಇದ್ದರೂ ಅವರ ಒಂದೇ ಅಜೆಂಡಾ ಎಂದರೆ **ದಲಿತರ ದಮನ** ಎಂಬುದು ಇವರಿಗೆ ನಿಚ್ಚಳವಾಯಿತು. ಆಗ ಅರ್ಧ ಶತಮಾನ ಪರ್ಯಂತ ಇವೆಲ್ಲದರಿಂದ ರೋಸಿ ಹೋದ ಜಗಜೀವನ ರಾಮರು ೧೯೮೦ರಲ್ಲಿ **ಬ್ರಾಹ್ಮಣವಾದದ ವಿರುದ್ಧ ಜಿಹಾದ್** (ಧರ್ಮಯುದ್ಧ)ಗೆ ಕರೆ ನೀಡಿದರು. ನೆಹರೂ ಮೊದಲುಗೊಂಡು ಚರಣಸಿಂಗರವರೆಗೆ ಎಲ್ಲರೂ ಜಾತಿವಾದಿಗಳೇ ಎಂದು ಆರೋಪಿಸಿದರು. ಮತ್ತು ತಾನು ವಿರೋಧಿಸುವುದು ಕೇವಲ ಬ್ರಾಹ್ಮಣವಾದವನ್ನೇ ಹೊರತು ಬ್ರಾಹ್ಮಣರನ್ನಲ್ಲ ಎಂದು ಸ್ಪಷ್ಟಪಡಿಸಿದರು. ಆದರೆ ಜಗಜೀವನರಾಮರು ಹೀಗೆ 'ಧರ್ಮಯುದ್ಧ'ವನ್ನು ಘೋಷಿಸುವಷ್ಟರಲ್ಲಿ ಕಾಲ ಮಿಂಚಿಹೋಗಿತ್ತು, ೭೨ ವರ್ಷಗಳ ವೃದ್ಧಾಪ್ಯದಿಂದ ಅವರು ದೈಹಿಕವಾಗಿ ಮಾನಸಿಕವಾಗಿ ದಣಿದಿದ್ದರು. ಮತ್ತು ಇದಾದ ಐದಾರು ವರ್ಷಗಳಲ್ಲಿಯೇ ಅವರು ಮರಣ ಹೊಂದಿದರು.

ಆದರೆ ನಾವೀಗ ಸ್ವತಂತ್ರ ಭಾರತದ ಇತಿಹಾಸದತ್ತ ಒಂದು **ಸಿಂಹಾವಲೋಕನವನ್ನು** ಮಾಡುವುದಾದರೆ, ಭಾರತದ ಇತಿಹಾಸವೆಂದರೆ ಕಾಂಗ್ರೆಸ್ ಇತಿಹಾಸವೆಂದೇ ಹೇಳಬೇಕಾಗಿದೆ. ಕಾಂಗ್ರೆಸ್ ಇತಿಹಾಸವೆಂದರೆ ಅಧಿಕಾರ ರಾಜಕಾರಣದಲ್ಲಿ ನಡೆದ ಪ್ರಚ್ಛನ್ನ ಹಿಂದುತ್ವವಾದಿಗಳ ಅಟ್ಟಹಾಸದ ಇತಿಹಾಸ; ಮತ್ತೂ ಹೇಳಬೇಕೆಂದರೆ, ವಾಸ್ತವವಾಗಿ ಇವತ್ತಿಗೂ ಜರುಗುತ್ತಿರುವುದೆಂದರೆ ದೀನಾನಾಥ ದಲಿತವರ್ಗಕ್ಕೆ ಸವರ್ಣೀಯ ರಾಜಕಾರಣಗಳು ಮಾಡುವ ವಂಚನೆಯ ಇತಿಹಾಸವೇನೋ ಎನಿಸುತ್ತದೆ.

ಆದರೆ ಜಗಜೀವನ ರಾಮರಿಗೆ ಇದೆಲ್ಲ ತಡವಾಗಿ ಅರಿವಿಗೆ ಬಂದಿತು. ಅಂಬೇಡ್ಕರ್ ಅವರಂತೆ ಮೊದಲೇ ವಿಚಾರವಂತರಾಗಲಿಲ್ಲ ಅಥವಾ ಅವರಲ್ಲಿದ್ದ ಅವಕಾಶವಾದಿ ವ್ಯಕ್ತಿತ್ವ ಅವರನ್ನು ಮುಂದೆ ಬಿಡಲಿಲ್ಲ. ಪ್ರಧಾನಿ ಪಟ್ಟದಿಂದ ಪದೇ ಪದೇ ವಂಚಿತರಾಗುವವರೆಗೆ ಅವರು ಕಣ್ಣುಪಟ್ಟಿ ಕಟ್ಟಿದ ಕುದುರೆಯಂತೆಯೇ ವರ್ತಿಸಿದರು. ಕಡೇಪಕ್ಷ ಡಾ॥ ಅಂಬೇಡ್ಕರ್ ಅವರು ಹೊತ್ತಿಸಿಬಿಟ್ಟ ಪಂಜನ್ನು ಹಿಡಿದುಕೊಂಡು ಮುಂದೆ ಬಂದಿದ್ದರೆ ಇಂದು ದಲಿತರ ಪರಿಸ್ಥಿತಿಯೇ ಬೇರೆಯಾಗುತ್ತಿತ್ತೇನೋ.

ಪರಿಸ್ಥಿತಿ ಹೀಗಿರುವಾಗ ದಲಿತರು ಎಡಗೈ, ಬಲಗೈ ಎಂದು ಒಡೆದುಹೋಗುವುದು ಯಾರಿಗೆ ಲಾಭ ಎಂದು ಮತ್ತೆ ಹೇಳಬೇಕಾಗಿಲ್ಲ. ಆದ್ದರಿಂದ ಇದುವರೆಗೆ ಸಿಂಹಪಾಲನ್ನು ಗಿಟ್ಟಿಸಿದ ಬಲಗೈನವರು ಉದಾರಚಿತ್ತರಾಗಿ ಎಡಗೈನವರೊಂದಿಗೆ ಕುಳಿತು ಚರ್ಚಿಸಿ ಜನಸಂಖ್ಯಾ ಆಧಾರದ ಮೇಲೆ ಮೀಸಲಾತಿ ಸೌಲಭ್ಯವನ್ನು ಪಡೆಯುವುದು ಸರಿ. ಜಾಗತೀಕರಣದ ದೆಸೆಯಿಂದ ಈ ಮೀಸಲಾತಿಗಳಿಗೆ ಬೆಲೆಯೇ ಇಲ್ಲದಾಗಿದೆ. ಇದನ್ನು ಮನಗಂಡು ಎರಡೂ ಗುಂಪುಗಳು ಒಂದಾಗಿ ಸಮಾನ ಶತ್ರುವಿನ ವಿರುದ್ಧ ಹೋರಾಡುವ ಕಾಲ ಬಂದಿದೆ. ಅದಕ್ಕಾಗಿ ಬ್ರಾಹ್ಮಣವಾದವನ್ನು ಒಪ್ಪದ ಬ್ರಾಹ್ಮಣರೂ ಸೇರಿದಂತೆ ಸಕಲ ಮತ ಧರ್ಮದವರೂ ಒಂದಾಗಿ ಈಗ ಎರಡನೆಯ ಸ್ವಾತಂತ್ರ್ಯಕ್ಕೆ ಅಣಿಯಾಗಬೇಕಾಗಿದೆ.

**ಪ್ರೊ॥ ಶಿವರಾಮಯ್ಯ**
ನಂ. ೧೭೨, ಐಸೆಕ್ ರೋಡ್, ಟೀಚರ್ಸ್ ಕಾಲೋನಿ, ನಾಗರಬಾವಿ,
ಬೆಂಗಳೂರು - ೭೨

## ನವಕರ್ನಾಟಕದ ನಾಲ್ಕು ಕೃತಿಗಳ ಬಿಡುಗಡೆ

ಚಿತ್ರಸುದ್ದಿ




೨೦೦೭ ಸೆಪ್ಟೆಂಬರ್ ೧೧ರಂದು ಮಂಗಳೂರಿನಲ್ಲಿ ಪುಸ್ತಕ ಪ್ರದರ್ಶನ, ಮಾರಾಟ ಮತ್ತು ಪುಸ್ತಕ ಬಿಡುಗಡೆ ಸಮಾರಂಭ ನಡೆಯಿತು. ಸಾಹಿತಿ ಶ್ರೀಮತಿ ಸಾರಾ ಅಬೂಬಕ್ಕರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು ಹಾಗೂ ಉದ್ಘಾಟಿಸಿದರು. ಪ್ರೊ॥ ಸಿ. ಎನ್. ರಾಮಚಂದ್ರನ್‌ರವರು, ಶ್ರೀ ಕೆ. ಟಿ. ಗಟ್ಟಿಯವರ 'ಗುರುಗಳಾಗಿ ತಾಯಿ-ತಂದೆ' ಮತ್ತು ಶ್ರೀ ಆರ್. ವಿ. ಭಂಡಾರಿಯವರ 'ಯಶವಂತನ ಯಶೋಗೀತೆ' ಕೃತಿಗಳನ್ನೂ ಮತ್ತು ಕವಿ ಡಾ॥ ನಾ. ಮೊಗಸಾಲೆಯವರು ಡಾ॥ ಸಿ. ಆರ್. ಚಂದ್ರಶೇಖರ್ ಅವರ 'ನಮ್ಮ ಶರೀರ ೨೦೦ ಪ್ರಶ್ನೆಗಳು' ಮತ್ತು ಡಾ॥ ಸ. ಜ. ನಾಗಲೋಟಿಮಠ ಅವರ 'ಬಾಳೆಹಣ್ಣು ಮತ್ತು ಬ್ಲಡ್‌ಪ್ರೆಶರ್' ಕೃತಿಗಳನ್ನೂ ಬಿಡುಗಡೆ ಮಾಡಿದರು.

ಚಿತ್ರದಲ್ಲಿ: ಎಡದಿಂದ ಬಲಕ್ಕೆ : ನವಕರ್ನಾಟಕ ಮಂಗಳೂರು ಶಾಖೆಯ ವ್ಯವಸ್ಥಾಪಕ ಶ್ರೀ ಜನಾರ್ಧನ ಪೂಜಾರಿ, ಶ್ರೀ ಕೆ. ಟಿ. ಗಟ್ಟಿ, ಡಾ॥ ನಾ. ಮೊಗಸಾಲೆ, ಪ್ರೊ॥ ಸಿ. ಎನ್. ರಾಮಚಂದ್ರನ್ ಮತ್ತು ಶ್ರೀಮತಿ ಸಾ. ರಾ. ಅಬೂಬಕ್ಕರ್.



# ಮಕ್ಕಳ ಪಾಡು ಸುಧಾರಿಸೀತೇ?

**ಪ್ರ**ಪಂಚದ ನಾನಾ ಕಡೆಗಳಲ್ಲಿನ ಮಕ್ಕಳ ಪಾಡನ್ನು ಗಮನಿಸಿದಾಗ ದುಃಖ ಚಿಂತೆ ನನ್ನನ್ನು ಕಾಡುತ್ತವೆ ; ಈ ಪ್ರಪಂಚದ ಯಾವುದೇ ದೇಶದಲ್ಲಾಗಲಿ ಎಲ್ಲ ಮಕ್ಕಳು ನೋವುಣ್ಣದೆ ನಿರಾತಂಕವಾಗಿ ಹಸಿದಿರದೆ ಸಂತೋಷವಾಗಿ ಇದ್ದಾರೆಯೇ ? ಪ್ರಕೃತಿ ವಿಕೋಪಗಳು, ಮತೀಯ ಕಲಹಗಳು, ಯುದ್ಧಗಳು ಎಲ್ಲೇ ಉಂಟಾಗಲಿ ದಿಕ್ಕೆಡುವ ಜೀವಗಳೆಂದರೆ ಮೊದಲು ಮಕ್ಕಳೇ. ಪ್ರಪಂಚದ ಮಕ್ಕಳಲ್ಲಿ ೫೦ – ೬೦ ಶತಾಂಶ ಶಿಕ್ಷಣವಿಲ್ಲದೆ ಒಂದಿಲ್ಲೊಂದು ದುಡಿಮೆಯನ್ನು ಮೈಗೂಡಿಸಿಕೊಂಡು, ಅರೆಹೊಟ್ಟೆ, ಹರಕು ಬಟ್ಟೆ, ಬೈಗಳು - ಬಡಿತ, ಅತ್ಯಾಚಾರ ಶೋಷಣೆಗಳಿಗೆ ತುತ್ತಾಗಿರುತ್ತಾರೆ. ಎಲ್ಲೆಂದರಲ್ಲಿ ಮಲಗಿ ಎದ್ದು ಹೇಗೋ ಬದುಕುತ್ತಾರೆ, ಸಾಯುತ್ತಾರೆ. ಮಕ್ಕಳ ಈ ಪಾಡನ್ನು ಕಂಡೂ ಕಾಣದಂತಿರುವ ಹಿರಿಯರೇ ಬಹಳ.

ಸಂಪದ್ಭರಿತವೆನಿಸಿಕೊಂಡ ಅಮೆರಿಕದಲ್ಲೂ ಕಸದ ತೊಟ್ಟಿ ಕೆದಕಿ ಹುಡುಕುವ ಹುಡುಗರಿದ್ದಾರೆ. ಬಸಿರಾಗಿ ಕ್ಯಾರೇ ಎಂಬುವರಿರದ ಎಳೆ ಹುಡುಗಿಯರಿದ್ದಾರೆ. ನಮ್ಮ ಕಲಹಂದಿ, ಆಫ್ರಿಕಾದ ಇತಿಯೋಪಿಯಾಗಳಲ್ಲಿ ಹಸಿವಿನಿಂದ ನಿಸ್ತೇಜವಾದ ಮುಖದ ಮಕ್ಕಳು ; ರುವಾಂಡಾ, ಬಾಸ್ನಿಯಾ, ಚೆಚೆನ್ಯಾ, ಪಾಲಿಸ್ತೀನ್, (ಕೆಲವು ವರ್ಷಗಳ ಹಿಂದೆ ವಿಯತ್‌ನಾಮ್)ಗಳಲ್ಲಿ ಯುದ್ಧ ಭೀತಿಯಿಂದ ತತ್ತರಿಸುತ್ತಿರುವ ಮಕ್ಕಳು ; ಭೂಕಂಪ ಬಿರುಗಾಳಿ ಪ್ರವಾಹಗಳಿಂದ ತಂದೆತಾಯಿಯರನ್ನು ಕಳೆದುಕೊಂಡು ದಿಕ್ಕೆಟ್ಟ ಮಕ್ಕಳು ; ಮತೀಯ ರೌದ್ರಕ್ಕೆ ಸಿಕ್ಕ ಮಕ್ಕಳು ; ಇವರೆಲ್ಲರ ದುರ್ದಸೆಯನ್ನು ಪತ್ರಿಕೆಗಳಿಂದ ತಿಳಿದಾಗ ಕಸಿವಿಸಿಯಾಗುತ್ತದೆ. ಊಟದ ವೇಳೆ ಟಿ.ವಿ.ಯಲ್ಲಿ ದೀನಮೋರೆಯ ಮಕ್ಕಳು ಕಾಣಿಸಿದಾಗ ತುತ್ತು ಗಂಟಲಲ್ಲಿ ಸಿಕ್ಕಿಕೊಳ್ಳುತ್ತದೆ. ಪ್ರಪಂಚದ ಆಗು - ಹೋಗುಗಳ ಸೂತ್ರಧಾರರಾದ ರಾಜಕಾರಣಿ ಗಳಿಗೆ ಕರುಣೆ - ಕಕಲಾತಿ, ಒಳಿತುಗೈವ ಹಂಬಲ ಮೂಡದಲ್ಲ! ಆ ನಿರಪರಾಧಿ, ಮುಗ್ಧ ಮಕ್ಕಳ ಸಲುವಾಗಿಯಾದರೂ ತಂತಮ್ಮ ಮನಸ್ತಾಪ, ಜಗಳತೋಟಿ, ಯುದ್ಧಾದಿ ಸ್ವಾರ್ಥಜನಿತ ವಿಷಯಗಳನ್ನು ನಿಲ್ಲಿಸರಲ್ಲ! ಸಮಯ - ಸಂಪನ್ಮೂಲ ಗಳನ್ನು ಯುದ್ಧ ಸಾಮಗ್ರಿಗಳ ಉತ್ಪಾದನೆ, ವಿತರಣೆ, ಅಧಿಕಾಧಿಕ ಹಣ ಸಂಗ್ರಹಣೆಗಳ ಬದಲು ಮಕ್ಕಳ ಹಸಿವು ಹಿಂಗಿಸಲು, ಶಿಕ್ಷಣ ನೀಡಲು, ಆತಂಕ ತಪ್ಪಿಸಲು ಮನಸ್ಸು ಮಾಡರಲ್ಲ! "ಒಂದೇ ಒಂದು ಮಗು ಎದುವರೆಗೆ ಹಸಿದು ಕಂಗಾಲಾಗುತ್ತದೆಯೋ ಅದುವರೆಗೆ ಈ ಜಗತ್ತು ಅಪೂರ್ಣ !" ಎಂದು ಉದ್ಗರಿಸಿದ್ದಾಳೆ ರಷ್ಯದ ಸುಪ್ರಸಿದ್ಧ ನೃತ್ಯಾಂಗನೆ, ಇಸಿಡೊರಾ ಡಂಕನ್ ಎಂಬಾಕೆ. ಈ ಮಾತು ಎಷ್ಟು ಸತ್ಯ ! ಪ್ರಪಂಚದೆಲ್ಲೆಡೆಯ ಹಸಿವನ್ನೆಲ್ಲ ಹಿಂಗಿಸಬಲ್ಲಷ್ಟು ಅಪಾರ ಧನಸಂಪತ್ತು ಧಾನ್ಯ ಸಮೃದ್ಧಿ ಮಾನವ ಸಮಾಜಕ್ಕೆ ಇರುವಾಗಲೂ ಮಕ್ಕಳು ಪಾಡುಪಡಬೇಕೇ ? ಎಲ್ಲ ಇದೆ, ನಿಜ ; ಆದರೆ, ಮಕ್ಕಳಿಗಾಗಿ ವಿನಿಯೋಗಿಸುವ ಮನಸ್ಸು, ಕಳಕಳಿ, ಯೋಚನೆ, ನಿರ್ಧಾರ ಈ ಪ್ರಪಂಚಕ್ಕೆ ಇಲ್ಲವಲ್ಲ !

ಈ ಚಿಂತೆ ನನ್ನ ಮನಸ್ಸನ್ನು ಪದೇಪದೇ ಕಲಕುತ್ತದೆ, ನಿದ್ದೆಗೆಡಿಸುತ್ತದೆ, ಅಸಹಾಯಕ ನಾಗಿ ಬಿಕ್ಕುವಂತಾಗುತ್ತದೆ. ಈ ಎರಡು ಮಕ್ಕಳ ದನಿಗಳನ್ನು ಕನ್ನಡಿಸಿದ್ದೇನೆ, ಕೇಳಿ –

ನಾನು ಮಗು,
*ಜಗವೆ ಕಾಯುವುದಂತೆ ನನ್ನ ಆಗಮನಕೆ,*
*ಮಿಗೆ ತವಕವಂತೆ ಎನ್ನ ಭವಿತ ಕಾಂಬುದಕೆ,*
*ಮನುಕುಲದ ಕನಸುಗಳು ತೂಗು – ತ್ರಾಸಿನೊಳಂತೆ*
*ಎಂತಹನೊ ಈ ನಾನು ಜಗ ನಾಳೆಯಂತೆ.*
ನಾನು ಮಗು,
*ಹೆಜ್ಜೆ ಇಡುತಿಹೆನಯ್ಯ ನಿಮ್ಮ ರಾಜ್ಯದೊಳು;*
*ಈ ಜಗದ ಗುಣದೋಷ ಪರಿಯದೇನೆಂತೋ ?*
*ಬಂದುದೇಕೋ, ಏನೋ ? ಆವುದೊಂದರಿಯೆ,*
*ತಿಳಿಯಲೆನಗಿದೆ ತವಕ, ಆಸೆ, ಆಸಕ್ತಿ*
ನಾನು ಮಗು,
*ನಿಮ್ಮ ಹಿಡಿಯೊಳಗೆನ್ನ ಭವಿತ ಅದೃಷ್ಟ*
*ಗೆಲುವೋ ಸೋಲೋ ? ನಿರ್ಧಾರ ನಿಮ್ಮಿಷ್ಟ*
*ನೀಡುವಿರೇ ಒಲವು ದಿಶೆ ? ಕಳೆವೆ ಭೂತಾಯ ತಾಪ,*
*ಮಾಡೆ ನಾನೆಂದಿಗೂ ಎನ್ನಿರವದಕೆ ಶಾಪ,*
*ನೋಡುವಿರಿ ಎಂತಹೆನು, ಜಗಕೆ ವರ, ದೀಪ !*

– ಮಾಮಿ, ಜೀನ್ ಕೋಲ್, (ಅಮೆರಿಕಾ)

*ನಿಲ್ಲಿಸಿ ನಿಮ್ಮೆಲ್ಲ ಕೂಗಾಟಗಳ ಕಾದಾಟಗಳ,*
*ಮುಗ್ಧ ಮಗು ಮುದ್ದಾದ ನಗು ನಗುತಲಿರಲಿ.*
*ನಿಲ್ಲಿಸಿ ವಿಮಾನ ಹಾರಾಟಗಳ, ಷೆಲ್ ತೂರಾಟಗಳ,*
*ಮುಗ್ಧ ಮಗು ಮುದ್ದಾದ ನಗು ನಗುತಲಿರಲಿ.*
*ನಿಲ್ಲಿಸಿ ಸಮರದೆಲ್ಲ ಸಾಗಾಟಗಳ ತಾರಾಟಗಳ,*
*ಕೊಲ್ಲುವ ಎಲ್ಲವನಿಲ್ಲಿ ಗೈವ ಸೆಣಸಾಟಗಳ,*
*ಮುಗ್ಧ ಮಗು ಮುದ್ದಾದ ನಗು ನಗುತಲಿರಲಿ.*

– ಇವಾನಾ, ಪ್ರಾಥಮಿಕ ಶಾಲಾ ಬಾಲಕಿ, ಸೆಪಿನ್ ಗ್ರಾಮ, 'ಯುಗಾಸ್ಲಾವಿಯಾ'.

ಪ್ರಪಂಚದ ಪ್ರತಿಯೊಂದು ಮಗುವೂ ಸ್ವತಂತ್ರವಾಗಿ ತನ್ನ ಪ್ರಕೃತಿಯನುಸಾರ ಬೆಳವಣಿಗೆ ಪ್ರಗತಿ ಹೊಂದುವ ಅದರ ಜನ್ಮಸಿದ್ಧ ಹಕ್ಕನ್ನು ಅದಕ್ಕೆ ತ್ವರಿತವಾಗಿ ಒದಗಿಸುವ ಬಗ್ಗೆ ಸರ್ವರ ಅಂತಃಸಾಕ್ಷಿ ಅಭಿಪ್ರಾಯ ನಿರ್ಧಾರಗಳು ಇಂದು ಈಗಲೇ ಮೂಡಿಬರಬೇಕಾಗಿದೆ. ಮಕ್ಕಳ ಹಕ್ಕುಗಳು ಮಾನವ ಹಕ್ಕುಗಳ ಬಹುಮುಖ್ಯ ಅಂಗ. ಮನುಕುಲದ ಭವಿಷ್ಯದ ನಿಟ್ಟಿನಿಂದಲೂ ಅತ್ಯವಶ್ಯಕವೆಂದು ಮನಗಾಣಬೇಕಾಗಿದೆ. ಆದ್ದರಿಂದ, ಮಗುವಿನ ಹಕ್ಕುಗಳು ಹಿರಿಯರ ಹೊಣೆಗಾರಿಕೆಗಳ ಪಟ್ಟಿಯಲ್ಲಿ ಮೊದಲ ವಿಷಯವಾಗಿಯೇ ಇರಬೇಕಾದುದು. ಮಗುವಿನ ಬಗ್ಗೆ ಮೊದಲು ಯೋಚಿಸಿದಾಗ ಮಾತ್ರವೇ ಮಾನವ ಕಷ್ಟ - ಕಾರ್ಪಣ್ಯಗಳ ಬಗೆಗಿನ ಅಪಾರ ಸಾಮಾಜಿಕ ಅಸಡ್ಡೆ ಅನಾದರಗಳು ಕೊನೆಗೊಳ್ಳಲು ಸಾಧ್ಯ. ಆದ್ದರಿಂದ, ಪ್ರಪಂಚದ ಮಕ್ಕಳ ಸಲುವಿನ ವೆಚ್ಚ ಆರ್ಥಿಕ ಯೋಜನೆಗಳಲ್ಲಿ ಅಧಿಕಾಧಿಕವಾಗಿ ಮುಡುಪಾಗಬೇಕಾದುದು. ನಮ್ಮ ಸ್ವಂತ ಮಗುವಿಗೆ ಏನೇನು ಅಗತ್ಯವೆಂದು ಎಣಿಸುವೆವೋ ಅವು ಒಂದೊಂದೂ ಎಲ್ಲ ಮಕ್ಕಳಿಗೂ ದೊರಕುವಂತೆ ನೋಡುವ ದೃಷ್ಟಿ ನಮಗೆಲ್ಲ – ಮುಖ್ಯವಾಗಿ ಪ್ರಪಂಚದ ಮುಖಂಡರಿಗೆ – ಬರಲಿ. ಪ್ರಪಂಚದ ಎಲ್ಲ ಮಕ್ಕಳು ನಗುನಗುತ್ತ ಬಾಳಿ ಬದುಕಲಿ.


ಬ. ನಾ. ರಘುರಾಮ
"ಗುಲ್‌ಮೊಹರ್", ಹೌ. ಬೋ. ಕಾಲೊನಿ, ಸಾಗರ – ೫೭೭ ೪೦೧

**HOSATHU** Kannada Monthly / October 2002 Rs. 10

RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published